

# ಹೊಸತು

ನೆನ್ನೆಯ ನಾಳೆ ನಮ್ಮದು




ಏಪ್ರಿಲ್ ೨೦೦೦
ಬೆಲೆ : ರೂ. ೧೦

- ಬಡವರ ಭಾಗ್ಯವಿಧಾತ - ವಿ. ಐ. ಲೆನಿನ್
- ಯಾವ ಬದ್ಧತೆಯೂ ಇಲ್ಲದ ಬಜೆಟ್
- ಮುಂಬರುವ ಸಂವಿಧಾನದ ಮುನ್ಸೂಚನೆಗಳು
- ಹೊಸ ಶತಮಾನದ ಹೊಸ್ತಿಲಲ್ಲಿ 'ದಲಿತ' ಪರಿಕಲ್ಪನೆಯ ಮರುನಿರ್ವಚನ
- ಮಾನವೀಯತೆಯ ಬೆಳಕು: ಅಸಗರ್ ಆಲಿ ಇಂಜಿನಿಯರ್
- ಸಮಕಾಲೀನ ಕನ್ನಡ ಕಾವ್ಯದಲ್ಲಿ ಅಂಬೇಡ್ಕರ್



# ಹೊಸತು

## ಒಳಗೇನಿದೆ.....


ಮುಂಬರುವ ಸಂವಿಧಾನದ ಮುನ್ಸೂಚನೆಗಳು
-ಪ್ರೊ// ಬಿ. ವಿ. ವೀರಭದ್ರಪ್ಪ ... ೦೬

ಜಪ್ತಿ (ತಿಂಗಳ ಕಥೆ) - ಡಿ. ಎಸ್. ಚೌಗಲೆ ... ೧೯

ಕಾವ್ಯಧಾರೆ
-ಕೆ. ನರಸಿಂಹಮೂರ್ತಿ, ಆರ್. ಹಂಸಾ, ಮಂಜುನಾಥ್ ಗೀತಾ ... ೩೧

ತಂಬೂರಿ ಬೆಳಕಲ್ಲಿ -ವಿಜಯವಾಮನ ... ೩೭

ಬಡವರ ಭಾಗ್ಯವಿಧಾತ - ವಿ. ಐ. ಲೆನಿನ್
-ಕೆ. ಎಲ್. ಗೋಪಾಲಕೃಷ್ಣರಾವ್ ... ೧೫

ಹೊಸ ಶತಮಾನದ ಹೊಸ್ತಿಲಲ್ಲಿ 'ದಲಿತ' ಪರಿಕಲ್ಪನೆಯ ಮರುನಿರ್ವಚನ
-ವಿ. ಚಂದ್ರಶೇಖರ ನಂಗಲಿ ... ೧೧

ಸಮಕಾಲೀನ ಕನ್ನಡ ಕಾವ್ಯದಲ್ಲಿ ಅಂಬೇಡ್ಕರ್
-ಡಾ// ಮ. ನ. ಜವರಯ್ಯ ... ೪೪

ಯಾವ ಬದ್ಧತೆಯೂ ಇಲ್ಲದ ಬಜೆಟ್ -ಡಾ// ಡಿ. ನರಸಿಂಹ ರೆಡ್ಡಿ ... ೨೮

ಭಾರತದಲ್ಲಿ ಪ್ರಾಚೀನ ಕೃಷಿ -ಎಸ್. ಎಸ್. ಕಟಗಿಹಳ್ಳಿ ಮಠ ... ೪೯

ಬಹೂಪಯೋಗಿ ಸಸ್ಯ ಸರ್ಪಗಂಧ -ಡಾ// ರಾಮದಾಸ್ (ಆಯು) ... ೫೭

ಭಾರತದ ಸ್ವಾವಲಂಬನೆಗೆ ವಿಜ್ಞಾನ ಮತ್ತು ತಂತ್ರಜ್ಞಾನದ ಮಾರ್ಗಗಳು
-ಡಾ// ಎಚ್. ಎಸ್. ನಿರಂಜನಾರಾಧ್ಯ ... ೨೫

ಅಪಾಯಕಾರಿ ವಿಷದ ವಿಸರ್ಜನೆ -ವೈ. ಜಿ. ಮುರಳಿಧರ ... ೫೮

ಗೀತಾ ಮುಖರ್ಜಿ ... ೯

ಆಚಾರ್ಯ ಧರ್ಮಾನಂದ ಕೋಸಂಬಿ -ಡಾ// ಜ್ಯೋತ್ಸ್ನಾ ಕಾಮತ್ ... ೨೨

ಪಿ. ಬಿ. ಧುತ್ತರಗಿ ಅವರಿಗೆ ಎತ್ತರದ ಪ್ರಶಸ್ತಿ
-ಹನುಮಂತಪ್ಪ ಎನ್. ಆಂಡಗಿ ... ೬೦

ಸಿಂಧುಭೈರವಿ - ಕಿರಿಯ ಸ್ಯಾಕ್ಸೊಫೋನ್ ಕಲಾವಿದೆ -ಕೆ. ಪಿ. ಸ್ವಾಮಿ ... ೬೨

ಆಕಸ್ಮಿಕವಲ್ಲ - ಸಾಕಸ್ಮಿಕ: ಹೇಗೆ? - ಪಿ. ಎಸ್. ಪಾಟೀಲ ... ೦೫

ವಿಶ್ವಮಾನವ ಕನಸು ಎತ್ತ ಸಾಗುತ್ತಿದೆ ? - ಜಿ. ಟಿ. ಸತೀಶ್ ... ೧೩

ಮಾನವೀಯತೆಯ ಬೆಳಕು : ಅಸಗರ್ ಆಲಿ ಇಂಜಿನಿಯರ್
- ತಿಂಥಿಣಿ ಮೋನಪ್ಪಯ್ಯ ... ೩೨

ಇವರೆಂತಹ ಸಾಧುಗಳು ? -ಶೋಭಾ ಪ್ರಮೋದ್ ... ೩೪

ಮಧ್ಯಮ ವರ್ಗದ ದುಡಿಯುವ ಮಹಿಳೆ -ಕೆ. ಎಸ್. ರೋಹಿಣಿ ... ೫೪

ಪಿನೋಷೆ ಪ್ರಕರಣ : ಬ್ರಿಟಿಷ್ ಸರಕಾರದ ವಂಚನೆ -ಸೀಯಾರ್ಕೆ ... ೧೮

ಗ್ರಹಗಳ ಓಟದ ಸ್ಪರ್ಧೆಯ ಮುಕ್ತಾಯ -ಡಾ// ಬಿ. ಎಸ್. ಶೈಲಜಾ ... ೫೩

ಮಧ್ಯಕಾಲೀನ ಸಮಾಜ ಮತ್ತು ಸಾಮಾಜಿಕ ಚಿಂತನೆಗಳು
- ಡಾ// ಸಿದ್ಧಲಿಂಗ ಸ್ವಾಮಿ ... ೩೯

ಬಾಸುಗಳು ಮತ್ತು ಡೂಸುಗಳು -ಎಸ್. ಜಿ. ಶಿವಶಂಕರ್ ... ೪೨



*ಚಿತ್ರಗಳು : ಗುಜ್ಜಾರ್, ಮೋಹನ, ಹಾದಿಮನಿ, ರವಿಕುಮಾರ್ ಅಜ್ಜೀಪುರ*
*ಛಾಯಾಚಿತ್ರಗಳು : ಕೆ. ಪಿ. ಸ್ವಾಮಿ* **ಮುಖಪುಟ ವಿನ್ಯಾಸ :** *ನವಕರ್ನಾಟಕ ವಿನ್ಯಾಸ*
*ಕಚೇರಿ ಸಹಕಾರ : ಜಿ. ವಿ. ತೇಜೋವತಿ*


ನಮ್ಮ ದೇಶದಲ್ಲಿ ದೊಣೆನಾಯಕರು ಹೆಚ್ಚುತ್ತಿದ್ದಾರೆ. ಅವರು ಕ್ರಮೇಣ ದೊಣ್ಣೆ ನಾಯಕರೂ ಆಗುತ್ತಿದ್ದಾರೆ. ನಕ್ಸಲೀಯರನ್ನು ಹತ್ತಿಕ್ಕಲು ಸಾವಿರಾರು ಕೋಟಿ ರೂಪಾಯಿಗಳನ್ನು ಖರ್ಚುಮಾಡಲು ಆದ್ವಾನಿ- ಚಂದ್ರಬಾಬು ಸಿದ್ಧರಿದ್ದಾರೆ. ಆದರೆ ಅವರೇ ಪೋಷಿಸುತ್ತಿರುವ ದೊಣ್ಣೆನಾಯಕರ ದಾಂಧಲೆಗಳು ಅವರ ಗಮನಕ್ಕೆ ಬರುವುದಿಲ್ಲ. ಮಹಾಭಾರತದ ಯುದ್ಧಕ್ಕೆ ಸಮನಾದ ಅಂತರ್ಯುದ್ಧ ಭಾರತದಲ್ಲಿ ಸಧ್ಯದಲ್ಲೇ ನಡೆಯುತ್ತದೆಂದು ಮುನ್ಸೂಚನೆ ನೀಡಿರುವ ನಾಗಪುರ ಸುದರ್ಶನರೂ ಸಹ ಒಂದು ರೀತಿ ದೊಣ್ಣೆನಾಯಕರ ರೀತಿಯಲ್ಲೇ ಗುಡುಗಿದ್ದಾರೆ. ಅವರು ಯಾವುದನ್ನು ಹಿಂದುತ್ವವೆಂದು ಸ್ವೀಕರಿಸುತ್ತಾರೋ ಅದನ್ನು ಒಪ್ಪಿಕೊಳ್ಳದ ಹಿಂದುಗಳಿಗೆಲ್ಲಾ ಸಧ್ಯದಲ್ಲೇ ಬುದ್ಧಿ ಕಲಿಸುವುದಾಗಿ ಸುದರ್ಶನ್ ಪಣತೊಟ್ಟಿದ್ದಾರೆ. ಹಿಂದುಗಳಲ್ಲದವರಿಗೆ ಅವರು ಎಚ್ಚರಿಕೆಯನ್ನು ಮೊದಲಿಂದಲೂ ಕೊಡುತ್ತಲೇ ಬಂದಿದ್ದಾರೆ. ಆಸ್ಟ್ರಿಯಾದಲ್ಲಿ ನವನಾಜಿ ಪಂಥದ ನಾಯಕ ಹೈದರ್ ಅಧಿಕಾರಕ್ಕೆ ಬರುವಷ್ಟು ಬೆಳೆದ ನಂತರ ಯೂರೋಪಿನ ದೇಶಗಳು ಮೈಪರಿಚಿಕೊಂಡು ಅವನನ್ನು ದೂಷಿಸುತ್ತಿವೆ. ನಮ್ಮಲ್ಲಿ ಸುದರ್ಶನ್ ನೀಡಿರುವ ಮಹಾಭಾರತದೋಪಾದಿಯ ಸಮರದ ಬಗ್ಗೆ ನಮ್ಮ ದೇಶ ಅಷ್ಟೇನೂ ವಿಚಲಿತವಾದಂತಿಲ್ಲ. ಚಿಂತಾಮಣಿ ಬಳಿಯ ಕಂಬಾಲಪಲ್ಲಿಯಲ್ಲಿ ಇತ್ತೀಚೆಗೆ ರೆಡ್ಡಿ-ರಾಜಕೀಯಕ್ಕೆ ಆಹುತಿಯಾದ ದಲಿತರಂತೆ ಇಡೀ ದೇಶದಲ್ಲಿ ಸಾವಿರಾರು ಹಿಂದುತ್ವ ವಿರೋಧಿಗಳ ಹಾಗೂ ಅ-ಹಿಂದುಗಳ ಹೆಣಗಳು ಉರುಳಿದ ಮೇಲೆ ಆಸ್ಟ್ರಿಯಾದ ಹೈದರನನ್ನು ಮೀರಿಸಿದ ಪಟುಗಳು ನಮ್ಮಲ್ಲಿದ್ದಾರೆಂದು ಗೊಣಗಲು ನಾವು ಪ್ರಾರಂಭಿಸುತ್ತೇವೇನೋ! ಕೇವಲ ''ಸಾಂಸ್ಕೃತಿಕ''ವಾದ ಸಂಘಟನೆಯ ನೂತನ ನೇತಾರರಾದ ಸುದರ್ಶನರು ಆರಂಭದಲ್ಲೇ ತಮ್ಮ ಕಹಿ ಮನಸ್ಸಿನ ರುಚಿಯನ್ನು ತೋರಿಸಹೊರಟಿದ್ದಾರೆ.

ಅವರಿಗೆ ಸಮಾನರಾಗಿ ನಿಲ್ಲಲು ತವಕಿಸುವ ಮುಲ್ಲಾಗಳಿಗೆ ನಮ್ಮಲ್ಲಿ ಕೊರತೆಯಿಲ್ಲ. ಅವರಿಗೆ ದೇಶದ ಕಾನೂನು ಕಟ್ಟಳೆ ಅನ್ವಯಿಸುವುದಿಲ್ಲವೆಂಬ ಭಾವನೆ ಅವರಲ್ಲಿ ಬೇರೂರಿದಂತಿದೆ. ಅಸ್ಗರ್ ಆಲಿ ಇಂಜಿನಿಯರನ್ನು ಹಲ್ಲೆಗೆ ಗುರಿಪಡಿಸಿದ ಸ್ಯೇಡ್ನಾ ಪರಿವಾರವು ಸಂಘ ಪರಿವಾರದ ಸರಿಸಾಟಿಯಾಗಿ ಬೆಳೆದಿರುವ ಸೂಚನೆಗಳಿವೆ. ಹಿಂದೆ ಕೇಂದ್ರದಲ್ಲಿ ಸಂಸ್ಕೃತಿ ಸಚಿವೆಯಾಗಿದ್ದ ಉಮಾ ಭಾರತಿ ''ನೀರು'' ಚಿತ್ರೀಕರಣಕ್ಕೆ ಭೋಪಾಲಿಗೆ ಬಂದರೆ ಕಲ್ಲು ಹೊಡೆಯುವುದಾಗಿ ಹೇಳಿದಾಗ ಕಾನೂನು ಪರಿಪಾಲಕರು ಆಕೆಯ ಮೇಲೆ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ. ಅದೇ ''ಕ್ಲಿಂಟನ್ ಬೆಂಗಳೂರಿಗೆ ಬಂದರೆ ಕಲ್ಲು 'ಹೊಡೆಯುತ್ತೇವೆ'' ಎಂದು ನಾವು ಯಾರಾದರೂ ಬಹಿರಂಗ ಹೇಳಿಕೆ ಕೊಟ್ಟಿದ್ದರೆ ಕ್ಲಿಂಟನ್ ವಾಷಿಂಗ್‌ಟನ್ನಿನಲ್ಲಿ ವಿಮಾನ ಏರುವ ಮೊದಲೇ ನಮ್ಮನ್ನಿಲ್ಲಿ ದಸ್ತಗಿರಿ ಮಾಡಿರುತ್ತಿದ್ದರು!

ಉಮಾ ಭಾರತಿಯನ್ನು ಮೀರಿಸುವ ದೈತ್ಯ ಮುಸಲ್ಮಾನ ಮೌಲ್ವಿಗಳು ನಮ್ಮಲ್ಲಿದ್ದಾರೆ. ಇತ್ತೀಚೆಗೆ ತಸ್ಲಿಮಾ ನಸ್ರೀನ್ ಮುಂಬೈಗೆ ಭೇಟಿಕೊಟ್ಟರು. ಜಡ್ಡು ಮತಾಂಧತೆಯ ವಿರುದ್ಧ, ಪ್ರಜಾಪ್ರಭುತ್ವಕ್ಕಾಗಿ ಬಂಗ್ಲಾದೇಶದಲ್ಲಿ ದಿಟ್ಟ ಹೋರಾಟ ನಡೆಸುತ್ತಿರುವ ಈಕೆ ''ಲಜ್ಜಾ'' ಎಂಬ ಕೃತಿಯ ಲೇಖಕಿಯಾಗಿ ಪ್ರಸಿದ್ಧಳು. ಬಂಗ್ಲಾದೇಶದ ಮೌಲ್ವಿಗಳ ಕಾಟ ತಡೆಯಲಾರದೆ ಆಕೆ ದೇಶ ಬಿಟ್ಟು ಹೋಗಿದ್ದಾಳೆ. ಮುಂಬೈಗೆ ಬಂದರೆ ಮತ್ತೆ ಮೌಲ್ವಿಗಳ ಕಾಟ. ಮುಂಬೈನ ಒಬ್ಬ ಮೌಲ್ವಿ ಹೇಳಿಕೆ ಕೊಟ್ಟನಂತೆ: 'ತಸ್ಲಿಮಾ ಮುಂಬೈಗೆ ಬಂದರೆ ಅವಳನ್ನು ಜೀವಂತ ಸುಡುತ್ತೇವೆ,' ಎಂದು. ಈ ಬರ್ಬರ ಮತಾಂಧರ ಮೇಲೆ ಕಾನೂನಿನನ್ವಯ ಕ್ರಮಗಳೇಕೆ ಜರುಗುತ್ತಿಲ್ಲ? ನಾಗರಿಕ ಹಕ್ಕುಗಳನ್ನು ಧಿಕ್ಕರಿಸುವ ಸ್ವಾತಂತ್ರ್ಯ ಇವರಿಗೆ ಸಿಕ್ಕಿರುವುದು ಹೇಗೆ? ತಸ್ಲಿಮಾ ''ಶೋಧ್'' ಎಂಬ ತನ್ನ ಒಂದು ಪುಸ್ತಕದ ಮರಾಠಿ ಆವೃತ್ತಿಯ ಬಿಡುಗಡೆಗೆ ಮುಂಬೈಗೆ ಬರಲು ಒಂದು ವಾರ ತಡ ಮಾಡಬೇಕಾಯಿತು.

ಏನು ನಡೆಯುತ್ತಿದೆ ನಮ್ಮ ದೇಶದಲ್ಲಿ? ಕ್ಲಿಂಟನ್ ಆಗಮನದ ಸಂಭ್ರಮದಲ್ಲಿ ಇವೆಲ್ಲಾ ಮರೆಯಾಗಬೇಕೇನು? ಒಂದು ಕಡೆ ಸ್ವರ್ಗವನ್ನು ಧರೆಗಿಳಿಸಲು ಸಂವಿಧಾನದ ಪರಿಷ್ಕಾರಕ್ಕೆ ಸಮಿತಿಯ ರಚನೆ, ಇನ್ನೊಂದೆಡೆ ಪಣಿಕ್ಕರ್-ಸರ್ಕಾರ್ ಅವರ ಸ್ವಾತಂತ್ರ್ಯ ಹೋರಾಟ ಮಾಲೆಯ ಪುಸ್ತಕಗಳಿಗೆ ಕುತ್ತು, ಮುಂಬೈಯಲ್ಲಿ ಮೌಲ್ವಿಯ ಆರ್ಭಟ, ಲಕ್ನೋದಲ್ಲಿನ ಇಮಾಂಬಾರಾದಲ್ಲಿ ೧೮೫೭ರ ಚರಿತ್ರಾರ್ಹ ಘಟನೆಯ ಚಿತ್ರೀಕರಣಕ್ಕೆ ಮುಲ್ಲಾಗಳ ಅಡ್ಡಿ ಮತ್ತು ಪುರಾತತ್ತ್ವ ಇಲಾಖೆಯ ಅಸಹಾಯಕತೆ,...... ಈ ಪಟ್ಟಿಗೆ ಕೊನೆಯಿಲ್ಲ.

ಹೊಸ ಶತಮಾನವು ನಮಗೆ ಚೆನ್ನಾಗಿ ಆರಂಭವಾಗಿಲ್ಲ. ಇನ್ನೂ ಮಂಪರಿನಲ್ಲೇ ಉಳಿದರೆ ನಮ್ಮ ಮುಂದಿನ ದಿನಗಳು ಹಸನಾಗದೆ ಹೋಗುವ ಸಾಧ್ಯತೆ ಇದೆ.




ತಿಂಗಳ ಪತ್ರಿಕೆ

**ಹೊಸತು**

ನಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧ ಸಂಚಿಕೆ - ೯ ಏಪ್ರಿಲ್ ೨೦೦೦





*ಮುದ್ರಣ*

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ : ೮೩೯೭೪೮೨೬

*ಹೊಸತು ಕಚೇರಿಯ ವಿಳಾಸ*




**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ / ಫ್ಯಾಕ್ಸ್ : ೨೨೦೩೫೮೦ / ೮೧ / ೮೨
**e-mail : nkp@bgl.vsnl.net.in**


## ಇತಿಹಾಸದ ಅಧ್ಯಯನ

ದಾಖಲೆಗಳಿಲ್ಲದೆ ಇತಿಹಾಸವಿಲ್ಲವೆಂಬ ಮಾತೊಂದಿದೆ. ಯಾವುದನ್ನೂ ಸೂಕ್ತ ಪುರಾವೆಗಳ ಸಹಿತ ಮಂಡಿಸಬೇಕು, ತೀರ್ಮಾನಿಸಬೇಕು ಎಂಬುದು ಅದರ ಸೂಚನೆ. ನಮ್ಮ ಸದ್ಯದ ಅಗತ್ಯಗಳನ್ನೋ ಚಪಲಗಳನ್ನೋ ಪೂರೈಸುವುದಕ್ಕಾಗಿ ಹಿಂದಿನದನ್ನು ಬುದ್ಧಿವಂತಿಕೆಯಿಂದ ವ್ಯಾಖ್ಯಾನಿಸುವುದು, ಇದ್ದ ಆಧಾರಗಳನ್ನು ಮುಚ್ಚಿಡುವುದು, ಇಲ್ಲದ್ದನ್ನು ಸೃಷ್ಟಿಸುವುದು, ಇತ್ಯಾದಿ ಸಂಶೋಧನಾ ಕುಚೇಷ್ಟೆಗಳು ಆಗಾಗ್ಗೆ ನಡೆಯುತ್ತಿರುತ್ತವೆ. ಪುರಾವೆಗಳು ಲಿಖಿತ ರೂಪದಲ್ಲಿರಬಹುದು ಅಥವಾ ಉತ್ಖನನಗಳಲ್ಲಿ ದೊರೆತ ಸಾಮಗ್ರಿಗಳ ರೂಪದಲ್ಲಿರಬಹುದು. ಹಿಂದಿನ ಕಾಲದ ಕೊಪ್ಪರಿಗೆಯ ಹಣ ಎಲ್ಲಾದರೂ ಸಿಕ್ಕಿದರೆ ಅದನ್ನು ಮುಚ್ಚಿಟ್ಟುಕೊಳ್ಳುವ ಸ್ವಭಾವ ಅಸಾಧ್ಯವಲ್ಲ; ಅಂತೆಯೇ ಲೋಥಾಲ್‌ನಲ್ಲೋ ಹಂಪಿಯಲ್ಲೋ ಉತ್ಖನನದಲ್ಲಿ ಚಿನ್ನದ ಆಭರಣಗಳು ದೊರೆತರೆ ಅವನ್ನು ಖಾಸಗಿಯಾಗಿ ತನಗೇ ಇರಿಸಿಕೊಳ್ಳಬೇಕೆಂಬ ಪ್ರಲೋಭನೆಗೆ ಒಳಗಾದರೆ ಆಶ್ಚರ್ಯವಲ್ಲ. ಖ್ಯಾತ ಪುರಾತತ್ವ ಶಾಸ್ತ್ರಜ್ಞರಾದ ಆಲ್ಚಿನ್ ದಂಪತಿಗಳು ಇಂತಹ ಪ್ರವೃತ್ತಿಯನ್ನು ಅನಾರೋಗ್ಯಕರವೆಂದು ಟೀಕಿಸಿದ್ದಾರೆ.

ಇತಿಹಾಸದ ಬೇರೆ ಬೇರೆ ಕಾಲಘಟ್ಟಗಳಲ್ಲಿ ಜರುಗಿರುವ ಸಂಗತಿಗಳು ಬದಲಾಗುವುದಿಲ್ಲ; ಆಯಾ ಕಾಲಘಟ್ಟಗಳ ಸನ್ನಿವೇಶವನ್ನು ತಮಗೆ ತೋರಿದಂತೆ ಜನ ರೂಪಿಸಿಕೊಳ್ಳಲು ಸಹ ಸಾಧ್ಯವಾಗುವುದಿಲ್ಲ. ಸಮಕಾಲೀನ ಸಂದರ್ಭಕ್ಕೆ ಸಂಬಂಧಿಸಿ ಹೇಳುವುದಾದರೆ, ಎರಡು-ಮೂರು ದಶಕಗಳ ಹಿಂದೆ ಒಬ್ಬ ವ್ಯಕ್ತಿ ಅಥವಾ ಒಂದು ಗುಂಪು ಪ್ರತಿಕ್ರಿಯಿಸಿದ ರೀತಿಯು ಸದಾಕಾಲಕ್ಕೂ ಅದೇ ಸ್ವರೂಪದಲ್ಲೇ ಇರಬೇಕೆಂಬ ನಿಯಮವಿಲ್ಲ. ಉದಾಹರಣೆಗೆ, ಇಪ್ಪತ್ತರ ದಶಕದಲ್ಲಿ ಡಾ॥ ಅಂಬೇಡ್ಕರರನ್ನು ವಿರೋಧಿಸಿ ಹಿಂಸಿಸಿದ ಮಹಾಡಿನ ಕೆಲವು ಮಂದಿ ಇಂದೂ ಅವೇ ಸಾಮಾಜಿಕ ಭಾವನೆಗಳನ್ನಿರಿಸಿಕೊಂಡಿರುತ್ತಾರೆ ಎನ್ನಲಾಗುವುದಿಲ್ಲ. ಆದರೆ ಅಂದು ಆ ಕ್ಷುದ್ರ ರೀತಿಯಲ್ಲಿ ವರ್ತಿಸಿದ್ದು ಸುಳ್ಳಾಗುವುದಿಲ್ಲ. ಇಂದು ಗೌರವಯುತವಾದ ವ್ಯಕ್ತಿತ್ವ ಬೆಳೆಸಿಕೊಂಡಿದ್ದರೆ ಹಿಂದಿನ ಕಪ್ಪು ಚುಕ್ಕೆಯು ಅವರನ್ನು ಅಧೀರಗೊಳಿಸುವುದಿಲ್ಲ.

ಅದೇ ಮಾತನ್ನು ಇಪ್ಪತ್ತು-ಮೂವತ್ತರ ದಶಕಗಳಲ್ಲಿ ಹಿಂದೂ ಮಹಾಸಭಾ ಅನುಸರಿಸಿದ ನೀತಿಗೆ ಅನ್ವಯಿಸಬಹುದು. ಆ ಸಂಘಟನೆಯು ಅಂದು ಯಾವ ಪ್ರತೀಕ್ಷ್ಯಗಳನ್ನು ಇರಿಸಿಕೊಂಡಿದ್ದಿತೋ ಅದಕ್ಕನುಗುಣವಾಗಿ ಬ್ರಿಟನ್ನಿನ ವಸಾಹತು ಸರ್ಕಾರದೊಡನೆ ಸಂಬಂಧವನ್ನಿರಿಸಿಕೊಂಡಿದ್ದಿತು. ಅದು ಸರಿಯೇ, ತಪ್ಪೇ, ಎನ್ನುವುದರ ಬಗ್ಗೆ ಅಭಿಪ್ರಾಯಭೇದ ಸಾಧ್ಯ. ಆದರೆ ಆ ಸಂಘಟನೆಯು ಸದಾಕಾಲಕ್ಕೂ ಅಂಥದೇ ನಿಲುವನ್ನು ಹೊಂದಿರುತ್ತದೆಂಬ ತೀರ್ಮಾನ ಸರಿಯಲ್ಲವೆಂಬುದರ ಬಗ್ಗೆ ಅಭಿಪ್ರಾಯಭೇದ ಸಾಧ್ಯವಿಲ್ಲ. ಅಂದು ಮಾಡಿದ್ದು ಹುಳುಕು ಎಂದು ಇಂದು ಅನ್ನಿಸಿದರೆ ಅಂದಿನ ವರ್ತನೆಯನ್ನು ಇಲ್ಲವಾಗಿಸಲು ಇಂದು ಅಶಕ್ಯ. ಆದರೆ ಅಂದಿನ ವರ್ತನೆಯನ್ನು ಮುಚ್ಚಿಡಲು ಅಂದಿನ ದಾಖಲೆಗಳನ್ನು ಇಲ್ಲವಾಗಿಸಬಹುದು ಅಥವಾ ಕತ್ತಲೆಯ ಕೋಣೆಯಲ್ಲಿಟ್ಟು ಬೀಗ ಜಡಿಯಬಹುದು. ಈ ಮಾರ್ಗದಿಂದ ಗೌರವವನ್ನು ಕಾಪಾಡಿಕೊಳ್ಳಬಹುದೆಂಬುದು ಒಂದು ಭ್ರಮೆ.

ಭಾರತೀಯ ಇತಿಹಾಸ ಸಂಶೋಧನಾ ಸಮಿತಿಯು ಕೈಗೊಂಡಿರುವ ರಿಪೇರಿ ಕೆಲಸ ಈ ತೆರನಾದದ್ದು. ''ಸ್ವಾತಂತ್ರ್ಯದತ್ತ'' ಮಾಲಿಕೆಯ ಎರಡು ಸಂಪುಟಗಳಲ್ಲಿ ಕೆ. ಎನ್. ಪಣಿಕ್ಕರ್ ಮತ್ತು ಸುಮಿತ್ ಸರ್ಕಾರ್ ಆಯಾ ವರ್ಷಗಳ ಹತ್ತಾರು ಅಧಿಕೃತ ದಾಖಲೆಗಳನ್ನು ಸೇರಿಸಿದ್ದಾರೆ. ಅದು ಅಧ್ಯಕ್ಷ ಗ್ರೋವರ್‌ಗೆ ಇರಿಸುಮುರಿಸು ತಂದಿದೆ. ಅದ್ವಾನಿ-ಸುದರ್ಶನರಿಗೂ ಅದೇ ಅಂಜಿಕೆ. ಅದನ್ನು ತೊಡೆದುಹಾಕುವ ಜವಾಬ್ದಾರಿ ಮುರಳಿ ಮನೋಹರ ಜೋಶಿಯವರ ಪಾಲಿಗೆ ಬಂದಿದೆ. ಆ ಸಂಪುಟಗಳನ್ನು ಹಿಂತೆಗೆದುಕೊಳ್ಳುವ ಇಡೀ ಹಗರಣದಲ್ಲಿ ಮೇಲು ಹೊದಿಕೆಗಳನ್ನು ಕಿತ್ತುಹಾಕಿ ನೋಡಿದರೆ ಕಡೆಗೆ ಕಾಣುವುದು ಇಷ್ಟೇ. ಆ ಸಂಪುಟಗಳಲ್ಲಿ ಸೇರದಿದ್ದರೆ ದಾಖಲೆಗಳು ಮಂಗಮಾಯ ಆಗುವುದಿಲ್ಲ, ಇನ್ನೆಲ್ಲೋ ಪ್ರಕಟವಾಗುತ್ತವೆ. ಮೂಲಭೂತ ಪ್ರಶ್ನೆಯು ಇತಿಹಾಸದ ಅಧ್ಯಯನ ವಿಧಾನಕ್ಕೆ ಸಂಬಂಧಿಸಿದ್ದು, ಸಂಘಟನೆಯ ಮುಕ್ಕಾಗಿರುವ ವ್ಯಕ್ತಿತ್ವಕ್ಕೆ ಸಂಬಂಧಿಸಿದ್ದು. ದಾಖಲೆಗಳನ್ನು ನಾಶಮಾಡಿ ಗೌರವ ಗಿಟ್ಟಿಸಿಕೊಳ್ಳಬೇಕೆಂಬ ಅಭಿಲಾಷೆಯು ಘೋರ ಪಾತಕದಿಂದ ಕೂಡಿದೆ. ಅದನ್ನು ಬೇರೆ ಕಡೆಗಳಲ್ಲಿ ಮಾಡಿರುವವರಿದ್ದಾರೆ. ಅವರನ್ನು ಇತಿಹಾಸದಲ್ಲಿ ಫ್ಯಾಸಿಸ್ಟರು ಎಂದು ಕರೆಯಲಾಗಿದೆ.

## ಲೆನಿನ್ ತೋರಿದ ಹಾದಿ

ಕೆಲವು ಪವಿತ್ರವಾದ ದಿನಗಳನ್ನು ರಜಾ ದಿನಗಳೆಂದು ಘೋಷಿಸುವುದು ಬಹಳ ಹಿಂದಿನಿಂದ ನಡೆದು ಬಂದಿರುವ ಪದ್ಧತಿ. ಅಂತಹ ದಿನಗಳಲ್ಲಿ ಕೆಲಸ ಮಾಡುವ ಪರಿಪಾಠವನ್ನು ಆರಂಭಿಸಿದಾಗ ಅದಕ್ಕೆ 'ಸುಬೋತ್ನಿಕ್' ಎಂಬ ಹೆಸರನ್ನು ರಷ್ಯಾದಲ್ಲಿ ನೀಡಲಾಗಿತ್ತು. ಅದಕ್ಕೆ ಚಾಲನೆ ನೀಡಿದ್ದು ಲೆನಿನ್. ಅಂದಿನ ದುಡಿಮೆಗೆ ಕೂಲಿ ಇರುತ್ತಿರಲಿಲ್ಲ, ಕೇವಲ ಗೌರವ ಮತ್ತು ಸಂತೃಪ್ತಿಯ ಭಾವನೆ ಇರುತ್ತಿತ್ತು. ಅದನ್ನು ಕುರಿತು ಲೆನಿನ್ ಹೇಳಿದರು: ''ಇದು ಜೀವನದ ದೃಷ್ಟಿ ಬದಲಾಗುತ್ತಿರುವುದರ ಕುರುಹು. ಒಂದು ಬಂಡವಾಳಶಾಹಿ ಪ್ರಭುತ್ವವನ್ನು ಬದಲಾಯಿಸುವುದಕ್ಕಿಂತಲೂ ಕಷ್ಟವಾದ ಕೆಲಸವೆಂದರೆ ಈ ದೃಷ್ಟಿಯನ್ನು ಬದಲಾಯಿಸುವುದು. ಅದಿಲ್ಲದೆ ಸಮಾಜವಾದವನ್ನು ಭದ್ರವಾಗಿ ಕಟ್ಟಲಾಗುವುದಿಲ್ಲ.''

ಇಂದಿನ ಸನ್ನಿವೇಶದಲ್ಲಿ ನಮ್ಮ ದೃಷ್ಟಿ ಹೆಚ್ಚು ಸಂಕುಚಿತವಾಗುತ್ತಿದೆಯೆ, ಹೆಚ್ಚು ಸ್ವಾರ್ಥಮೂಲವಾಗುತ್ತಿದೆಯೆ, ಎಂಬ ಪ್ರಶ್ನೆಗಳು ಮುಖ್ಯವಾದುವು. ಕ್ರಾಂತಿಗೆ ಮುನ್ನ ೧೯೧೩ರಲ್ಲಿ ಲೆನಿನ್ ಬರೆದರು: ''ನಮ್ಮ ಹಿಂದಿನ ಪೀಳಿಗೆಯವರಿಗಿಂತಲೂ ನಮಗೆ ಹೆಚ್ಚು ಕಷ್ಟಗಳಿವೆ. ಆದರೆ ಅವರಿಗಿಂತಲೂ ಹೆಚ್ಚು ಅದೃಷ್ಟವಂತರು ನಾವು. ನಾವು ಕಲಿಯುವುದನ್ನು ಪ್ರಾರಂಭಿಸಿದ್ದೇವೆ ಮತ್ತು ಕ್ರಮೇಣ ಹೋರಾಡುವುದನ್ನೂ ಕಲಿಯುತ್ತಿದ್ದೇವೆ.''

ನಮಗೆ ನಾವೇ ಪ್ರಶ್ನಿಸಿಕೊಳ್ಳಬೇಕು: ನಾವು ಹೋರಾಡುವುದನ್ನು ಕಲಿತಿದ್ದೇವೆಯೇ ಮತ್ತು ಯಾವುದಕ್ಕಾಗಿ ನಾವು ಹೋರಾಡುತ್ತಿದ್ದೇವೆ? ಕೋಟಿಗಟ್ಟಲೆ ಬೆಲೆಬಾಳುವ ನಮ್ಮ ಉದ್ದಿಮೆಗಳನ್ನು ಕಸಕ್ಕಿಂತಲೂ ಕಡೆ ಎಂಬಂತೆ ಬೇಕಾಬಿಟ್ಟಿ

# ಸಂಪಾದಕೀಯ

ಖಾಸಗಿಯವರಿಗೆ ವಹಿಸಿಕೊಡುವ ದ್ರೋಹ ನಡೆಯುತ್ತಿರುವಾಗ ನಮ್ಮ ಹೋರಾಟ ಎಲ್ಲಿ? ಅಮೆರಿಕಾದ ಅಧ್ಯಕ್ಷರನ್ನು ''ವಿಶ್ವದ ಮೊದಲ ಪ್ರಜೆ'' ಎಂದು ಬಣ್ಣಿಸಿ ಮೋಹಗೊಳ್ಳುವ ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು ಅಂಥವರು ಕಲಿತಿರುವುದೇನನ್ನು? ಪೊರೋಟ್ಸ್ಕಿ ಹೇಳುವಂತೆ ಲೆನಿನ್ ಪ್ರಭುತ್ವವಿದ್ದುದು ಜನಗಳ ಮೇಲಲ್ಲ, ಅವರ ಹೃದಯಗಳ ಮೇಲೆ. ಒಂದು ಪ್ರಬಲವಾದ ಪಕ್ಷವನ್ನವರು ಕಟ್ಟಿದ್ದು ಆ ಬಲದಿಂದ. ಮಯಕೋವ್‌ಸ್ಕಿ ತನ್ನ ಲೆನಿನ್ ಗಾಥೆಯಲ್ಲಿ ಹೇಳುವಂತೆ ಪಕ್ಷವೆಂದರೆ ಲಕ್ಷಗಟ್ಟಲೆ ಬೆರಳುಗಳು ಮುಷ್ಟಿಯಲ್ಲಿ ಬೆರೆತು ಒಂದಾಗಿ, ಪ್ರಬಲವಾದ ಶಕ್ತಿಯಾಗಿ ಮಾರ್ಪಡುವುದು. ದೌರ್ಜನ್ಯ, ದಬ್ಬಾಳಿಕೆಗಳನ್ನು ಹತ್ತಿಕ್ಕಲು ಬೇಕಾಗಿರುವುದು ಅಂತಹ ಸಂಘಟನೆ. ಚಿಂತಾಮಣಿಯ ಬಳಿಯ ಹಳ್ಳಿಯಲ್ಲಿ ಜನರನ್ನು ಜೀವಂತವಾಗಿ ಸುಡುವ ನಿಕೃಷ್ಟ ರಾಜಕೀಯವನ್ನು ಕಲಿತವರ ''ಹೋರಾಟ''ವು ಸಮಾಜ ಘಾತುಕ ಶಕ್ತಿಯನ್ನುಳ್ಳದ್ದು. ''ಆಳುವ ಪಕ್ಷದ ಸದಸ್ಯರಾಗಿ ಕೆಲವು ಸವಲತ್ತುಗಳನ್ನು ಪಡೆದುಕೊಳ್ಳಲೆಂದು ನಾವು ಹೊಸ ಸದಸ್ಯರನ್ನು ಪಕ್ಷಕ್ಕೆ ಸೇರಿಸಿಕೊಳ್ಳುವುದಿಲ್ಲ; ನೈಜವಾದ ದುಡಿಮೆಗೆ ಒಂದು ಮಾದರಿಯನ್ನು ಕಲ್ಪಿಸಬೇಕಾದವರು ಪಕ್ಷದ ಸದಸ್ಯರು,'' ಎಂದು ಲೆನಿನ್ 'ಸುಬೋತ್ನಿಕ್'ಗಳ ಕಾಲದಲ್ಲಿ ಹೇಳುತ್ತಿದ್ದರು. ೧೯೨೨ರಲ್ಲಿ ನಾಲ್ಕನೆಯ ಕೊಮಿಂಟರ್ನ್ ಕಾಂಗ್ರೆಸ್‌ನಲ್ಲಿ ಮಾತನಾಡುತ್ತಾ ಲೆನಿನ್ ತಮ್ಮ ನಾಡಿನ ಅನೇಕ ಕಷ್ಟದ ಪರಿಸ್ಥಿತಿಗಳನ್ನು ವಿವರಿಸಿದರು ಮತ್ತು ತಮ್ಮ ಪಕ್ಷದ ನಿಲುವಿನಲ್ಲಿದ್ದ ಕೆಲವು ತಪ್ಪುಗಳನ್ನು ಹೆಸರಿಸಿ ಅವುಗಳಿಂದ ಕಲಿಯಬೇಕಾದ ಪಾಠಗಳತ್ತ ಗಮನ ಹರಿಸಿದರು. ಆ ಸಂದರ್ಭದಲ್ಲಿ ಅವರು ಹೇಳಿದ ಮಾತುಗಳಿವು: ''ನನ್ನ ಈ ಮಾತುಗಳನ್ನು ಕೇಳಿ ನಮ್ಮ ಶತ್ರುಗಳು ಹರ್ಷಿಸಬಹುದು; ನೋಡಿ, ಬೋಲ್ಶೆವಿಕರೂ ಹಲವಾರು ತಪ್ಪುಗಳನ್ನು ಮಾಡಿದ್ದಾರೆ, ಸ್ವತಃ ಲೆನಿನ್ ಅದನ್ನು ಒಪ್ಪಿಕೊಂಡಿದ್ದಾನೆ, ಎಂದು. ಇದೆಲ್ಲಾ ನಿಜ, ಆದರೆ ಅಷ್ಟೇ ನಿಜವಾದ ಸಂಗತಿಯೆಂದರೆ ಹೀಗೆ ಆಡಿಕೊಳ್ಳುವವರು ಮಾಡಿರುವ ಅಸಂಖ್ಯಾತ ತಪ್ಪುಗಳು. ಬೋಲ್ಶೆವಿಕನೊಬ್ಬ ಮೂರ್ಖತನದಿಂದ 'ಎರಡೆರಡಲ ಐದು' ಎನ್ನಬಹುದು. ಆದರೆ ಅವನ ವಿರೋಧಿಯಾದ ಬಂಡವಳಿಗನು ಮೂರ್ಖತನದ ತಪ್ಪು ಮಾಡಿದಾಗ ಕೊಬ್ಬಿದ ಲಾಭವನ್ನು ಪಡೆದುಕೊಳ್ಳುತ್ತಾನೆ!''

ಈ ತತ್ವದ ಆಧಾರದ ಮೇಲಿನ ಆತ್ಮಾವಲೋಕನ ಇಂದು ನಮಗೆ ಅಗತ್ಯವಾಗಿದೆ. ಲೆನಿನ್ ಬೆಳೆಸಿದ ವಿಶ್ಲೇಷಣಾ ವಿಧಾನವನ್ನೂ ನಮ್ಮ ಇಂದಿನ ಸನ್ನಿವೇಶದಲ್ಲಿ ಮನನ ಮಾಡುವುದು ಯೋಗ್ಯವಿದೆ. ೧೯೦೩ರ ಮಾರ್ಚ್‌ನಲ್ಲಿ ಲೆನಿನ್ ಬರೆದ ಒಂದು ಕಿರುಹೊತ್ತಿಗೆ ''ಹಳ್ಳಿಯ ಬಡವರಿಗೆ'' ಎಂಬುದು. ಆಗ್ಗೆ ಪ್ರಚಲಿತವಾಗಿದ್ದ ಒಂದು ವಾದ ಹೀಗಿತ್ತು : ಹಳ್ಳಿಯ ರೈತ ಎಂದಿದ್ದರೂ ಜಮೀನಿಗೆ ಜೋತುಬಿದ್ದವನು; ಅವನಿಗೆ ಆಸ್ತಿಯ ವ್ಯಾಮೋಹ ನಿರಂತರವಾದ್ದು. ಕಾರ್ಖಾನೆಯ ದುಡಿಮೆಗಾರನಿಗೆ ಅಂತಹ ಆಶಯ ಇಲ್ಲವಾದ್ದರಿಂದ ಅವನು ನಿಜವಾದ ಕ್ರಾಂತಿಕಾರನಾಗಬಲ್ಲ. ಹೀಗಿರುವಾಗ ಯಾವ ಹೋರಾಟದಲ್ಲೇ ಆಗಲಿ ರೈತ-ಕಾರ್ಮಿಕ ಜಂಟಿ ಹೋರಾಟದ ಸಂಘಟನೆಯು ಸರ್ವಥಾ ಸಾಧ್ಯವಿಲ್ಲ.

ಇದು ಒಂದು ರೀತಿಯ ತರ್ಕ. ಆದಕ್ಕೆ ಲೆನಿನ್ ಸರಳವಾದ ಒಂದು ಉತ್ತರ ಕೊಟ್ಟರು: ಭಾರಿ ಬಂಡವಳಿಗ, ಉದ್ಯಮಿ ಹಾಗೂ ಭಾರಿ ಭೂಮಾಲಿಕ, ಇವರೆಲ್ಲ ಶೋಷಕರಾಗಿ ಒಟ್ಟಾಗಿದ್ದಾರೆ. ಅವರು ಶೋಷಿಸುವ ಗುಂಪುಗಳು ಬೇರೆ ಬೇರೆ; ಆದರೆ ಶೋಷಣೆಗೆ ಪ್ರತಿರೋಧ ಒಡ್ಡಿದಾಗ ಅದನ್ನು ಅವರೆಲ್ಲಾ ಒಟ್ಟಾರೆ ಕಲೆತು, ರಾಜ್ಯದ ಪ್ರಭುತ್ವ ಶಕ್ತಿಯನ್ನು ಬಳಸಿಕೊಂಡು, ಹಿಮ್ಮೆಟ್ಟಿಸುತ್ತಾರೆ. ಅವರೆಲ್ಲರ ಆಸ್ತಿಯ ಪ್ರಮಾಣ ಬೇರೆ ಬೇರೆ ಇದ್ದರೂ ಒಟ್ಟಾಗಲು ಅಡ್ಡಿಯಿಲ್ಲ. ಹೀಗಿರುವಾಗ ಶೋಷಿತ ಸಮುದಾಯವು ಆಶಯಗಳ ಭಿನ್ನತೆಯನ್ನು ಮುಂದೊಡ್ಡಿ ಒಟ್ಟಾಗದಿರುವುದು ಶೋಷಕರಿಗೆ ಸಹಾಯ ಮಾಡಿದಂತಾಗುತ್ತದೆ.

ಸೈದ್ಧಾಂತಿಕ ಮಡಿವಂತಿಕೆಯ ತೋರಿಕೆ ಹೆಚ್ಚಾಗುತ್ತಿರುವ ಸಂದರ್ಭ ಇಂದು ನಮ್ಮಲ್ಲಿದೆ. ಸಾಮ್ರಾಜ್ಯಶಾಹಿಯನ್ನು ವಿರೋಧಿಸುವ ನಾಲ್ಕೈದು ಸಂಘಟನೆಗಳಿದ್ದರೆ ಅವು ಪರಸ್ಪರ ಕಲೆತು ಒಟ್ಟಾಗಿ ಹೋರಾಟವನ್ನು ರೂಪಿಸಹೊರಡುವುದು ಅಪರೂಪ. ಕ್ಲಿಂಟನ್ನನ ಪ್ರತಿಕೃತಿ ದಹನ ಮಾಡಬೇಕಾದರೂ ಅವರು ಬೇರೆ ಬೇರೆಯಾಗಿಯೇ ಮಾಡುವ ಸಂಭವವಿದೆ. ಇದರಿಂದ ಯಾರಿಗೆ ಅನುಕೂಲವಾಗುತ್ತಿದೆಯೆಂಬ ಕನಿಷ್ಠ ಪ್ರಜ್ಞೆಯೂ ನಮ್ಮನ್ನು ಕಲಕದಿರುವುದು ವಿಷಾದದ ವಿಷಯ. ಜೊತೆಗೆ ಹಳ್ಳಿ-ದಿಲ್ಲಿ, ಉದ್ದಿಮೆ-ಕೃಷಿ, ಇವುಗಳನ್ನು ವಿರೋಧಿ ಅಂಗಗಳೆಂದು ಗುರುತಿಸುವ ರೂಢಿಯೂ ಬೆಳೆದಿದೆ. ಬ್ಯಾಂಕುಗಳಿಂದ ಸಾಲ ಪಡೆದು ಹಿಂದಿರುಗಿಸದೆ ಉಳಿದಿರುವ ಮೊಬಲಗು ಸುಮಾರು ೫೮,೦೦೦ ಕೋಟಿ ರೂಪಾಯಿಗಳು. ಅದನ್ನು ಹಿಂದಿರುಗಿಸದೆ ಇರುವವರಲ್ಲಿ ಉದ್ದಿಮೆಯ ಕಾರ್ಮಿಕರು, ಕೃಷಿಕಾರ್ಮಿಕರು ಎಷ್ಟು ಮಂದಿ ಹಾಗೂ ಅವರು ಹಿಂದಿರುಗಿಸದಿರುವ ಮೊತ್ತವೆಷ್ಟು? ಅದು ಅಗಾಧವಲ್ಲ. ಅಗಾಧ ಮೊತ್ತವನ್ನು ಉಳಿಸಿಕೊಂಡಿರುವವರಲ್ಲಿ ಭಾರಿ ಉದ್ಯಮಪತಿಗಳಿದ್ದಾರೆ, ಭಾರಿ ಭೂಮಾಲಿಕರೂ ಇದ್ದಾರೆ; ದಿಲ್ಲಿಯವರಿದ್ದಾರೆ, ಹಳ್ಳಿಯವರೂ ಇದ್ದಾರೆ.

ಅಂದರೆ ವರ್ಗವಿಭಜಿತ ಸಮಾಜದಲ್ಲಿ ಹೋರಾಟದ ಸೂತ್ರಗಳು ವರ್ಗಗಳ ಐಕ್ಯದಿಂದ ಮೂಡಿಬರಬೇಕು. ೧೯೦೨ರಲ್ಲಿ ಲೆನಿನ್ ಒಂದು ಪತ್ರದಲ್ಲಿ ಪ್ಲೆಖನೋವ್‌ಗೆ ಬರೆದರು: ''ನಮ್ಮ ಹಳ್ಳಿಗಳಲ್ಲಿ ವರ್ಗಹೋರಾಟದ ಸೂತ್ರಗಳನ್ನು ವ್ಯಾಪಕವಾಗಿ ತಿಳಿಯಪಡಿಸಲು ನಾನು ಕಾತುರನಾಗಿದ್ದೇನೆ. ಅಲ್ಲಿ ನಾಲ್ಕು ಗುಂಪುಗಳಿವೆ: ಭಾರಿ ಭೂಮಾಲಿಕ, ಭೂಮಾಲಿಕ ಬಂಡವಳಿಗ, ಮಧ್ಯಮ ದರ್ಜೆಯ ರೈತ ಮತ್ತು ನಿರ್ಗತಿಕ ರೈತ ಕೂಲಿಯಾಳು. ಇವರೆಲ್ಲ ಹಳ್ಳಿಯಲ್ಲಿದ್ದಾರೆಂಬ ಕಾರಣದಿಂದ ಒಂದು ವರ್ಗದವರೆನಿಸಿಕೊಳ್ಳುತ್ತಾರೆಯೆ?''

ನಮ್ಮ ವಿಶ್ಲೇಷಣೆಗಳಲ್ಲಿ ಇಂತಹ ವರ್ಗ ದೃಷ್ಟಿಕೋಣದ ಬದಲು ಜಾತಿಗಳ ಮೂಲದಿಂದ ವಿಂಗಡಣೆ ಮಾಡುವ ಪದ್ಧತಿ ಹೆಚ್ಚಾಗುತ್ತಿದೆ. ಅದು ಭೂಮಾಲಿಕರ ಸ್ಥಾನವನ್ನು ಭದ್ರಗೊಳಿಸುವುದರ ಜೊತೆಗೆ ಜಡ ಸಾಮಾಜಿಕ ವ್ಯವಸ್ಥೆಯನ್ನು ಬಿಗಿಗೊಳಿಸುತ್ತಿದೆ. ಇಂಥದೇ ವಿಶ್ಲೇಷಣಾ ವಿಧಾನವು ಉದ್ಯಮಗಳ ಕಾರ್ಮಿಕರ ಸ್ಥಿತಿಗತಿಗಳನ್ನು ಪರಿಶೀಲಿಸುವಾಗಲೂ ತಲೆಹಾಕುತ್ತದೆ. ಹೋರಾಟದ ದಿಕ್ಕು ತಪ್ಪಿಸಲು ಇವೆಲ್ಲಾ ಸಹಾಯಕವಾಗುತ್ತವೆ, ಬಂಡವಳಿಗರ ಸ್ಥಾನ ಸುಭದ್ರಗೊಳ್ಳುತ್ತದೆ. ಹಾಗಾದಾಗ ಬದಲಾವಣೆಯ ಹರಿಕಾರರು ಎಲ್ಲಿಂದ ಬರಬೇಕು? ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಲೆನಿನ್ ಅಂತಹವರ ಸೈದ್ಧಾಂತಿಕ ಗಟ್ಟಿತನ, ನಿಷ್ಕೃಷ್ಟತೆಗಳು ನಮಗೆ ದಾರಿದೀಪವಾಗಬೇಕು.

ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ



ಚಂದಾ ವಿವರಗಳು

| | |
|---|---|
| ಬಿಡಿ ಸಂಚಿಕೆ | ರೂ. ೧೦/- |
| ವಾರ್ಷಿಕ ಚಂದಾ | ರೂ. ೧೦೦/- |
| ಎರಡು ವರ್ಷಗಳಿಗೆ | ರೂ. ೧೮೦/- |
| ಮೂರು ವರ್ಷಗಳಿಗೆ | ರೂ. ೨೫೦/- |

ನವಕರ್ನಾಟಕ ಶಾಖೆಗಳು

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯ ☎ : ೨೨೫೧೩೮೨
ಕೆಂಪೇಗೌಡ ವೃತ್ತದ ಬಳಿ
ಬೆಂಗಳೂರು - ೫೬೦ ೦೦೯ ☎ : ೨೮೭೨೩೮೫
ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫೦೦೧ ☎ : ೪೪೧೦೦೬
ರಾಮಸ್ವಾಮಿ ವೃತ್ತ
ಮೈಸೂರು - ೫೭೦೦೨೪ ☎ : ೪೪೪೮೯೪
ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫೧೦೨ ☎ : ೨೪೩೦೨

## ಸಾಹಿತ್ಯ ಸಮ್ಮೇಳನ

ಮುಂದೂಡಿದ ಬಾಗಲಕೋಟೆಯ ಸಾಹಿತ್ಯ ಸಮ್ಮೇಳನದ ಹಿನ್ನೆಲೆಯ ಸಂಪಾದಕೀಯ ವಾಸ್ತವ ಸ್ವರೂಪದ ಚಿತ್ರಣ ನೀಡಿದೆ. 'ಈ ಪ್ರಹಸನ ಪರಿಷೆ' ನಿಂತರೆ ನಿಜವಾದ ಸಾಹಿತಿ ಹನಿ ಕಣ್ಣೀರು ಹಾಕಲಾರ ಎಂಬ ತಮ್ಮ ಮಾತು ಸೂರ್ಯನ ಬೆಳಕಿನಷ್ಟೇ ಸತ್ಯ! ಯಾಕೆಂದರೆ ಬರೆ ಸೃಜನಶೀಲ ಮನಸ್ಸುಳ್ಳವನಿಗೆ ಇವ್ಯಾವುದರ ಅಗತ್ಯವಿಲ್ಲ ಅಲ್ಲವೇ ?

*ಬೆಳಗಾವಿ* — ***ಡಿ. ಎಸ್. ಚೌಗಲೆ***

## ಹೊಸತು – ಕಹಿ

ಮುದ್ರಣ-ವಿನ್ಯಾಸಗಳಂತೂ ಚಿತ್ತಾಕರ್ಷಕ. ಹೊರಮೈ ಅನುಪಮ. ಒಳಗಿನ ಹೂರಣವೂ ಹೋಳಿಗೆಯ ಸಿಹಿಯೇ. ಆದರೂ... 'ಒಂದೊಂದು 'ತುತ್ತಾ'ದರೂ 'ಕಹಿ'ಯಾಗುವ, ಮನಸ್ಸಿಗೆ 'ಹಿಂಸೆ' ಪಡಿಸುವಂತಿದೆ ಎಂಬುದು ಕಟುಸತ್ಯ. ಯಾರ ಪರವಾಗಿಯೂ ಇಲ್ಲದ, ಯಾರ ವಿರೋಧವೂ ಆಗಿರದ ಒಂದಾದರೂ ಪತ್ರಿಕೆ ಕನ್ನಡದಲ್ಲಿ ಬರಬಾರದೆ ಎಂದು ಹಾರೈಸುತ್ತಿದ್ದ, ಆಶಿಸುತ್ತಿದ್ದ ನನಗೆ 'ಹೊಸತು' ಮೈದಳೆದು ಕೈಸೇರಿದಾಗ ಹರ್ಷಿಸಿದ್ದೆ.

ಆದರೆ ಈಚೆಗೆ ಇದರಲ್ಲೂ 'ರಾಗ-ದ್ವೇಷ'ಗಳ ಭಾವ, ಪರ-ವಿರೋಧಿ ಅಂಶಗಳನ್ನು ಓದುಗರ ಮನಸ್ಸಿನೊಳಕ್ಕೆ ಇಳಿಯುವಂತೆ 'ಇಂಜೆಕ್ಟ್' ಮಾಡುವ ಪ್ರಯತ್ನ ನಡೆಯುತ್ತಿರುವುದು ಸುಳ್ಳಲ್ಲ. ಎಚ್ಚರ ಒಳ್ಳೆಯದು.

*ಕಡೂರು* — ***ಹೆಚ್. ಎಸ್. ಸೂರ್ಯನಾರಾಯಣ***

ಹೊಸತುವಿನ ಮಾರ್ಚ್ ೨೦೦೦ ಸಂಚಿಕೆ ತುಂಬಾ ಮನೋಜ್ಞವಾಗಿ ಮೂಡಿಬಂದಿದೆ. ಸಂಪಾದಕೀಯವು ಚಿಂತನಾರ್ಹವಾಗಿತ್ತು. ತಿಂಗಳ ವಿಷಯವು 'ಕಿನ್ನರಿ' ಯಾಗಿದ್ದರೂ ಕೋಣನ ಮುಂದೆ ಬಾರಿಸುತ್ತಿರುವಿರಿ ಎಂದು ಮಾತ್ರ ಸತ್ಯ.

ಆದರೆ ಪ್ರಧಾನ ಸಂಪಾದಕರ 'ನೆನಪು' ಮಾತ್ರ 'ಕಹಿನೆನಪು' ಆಗಿ ಮಾರ್ಪಟ್ಟಿದ್ದು 'ಹೊಸತು'ವಿಗೆ ಭೂಷಣ ವಲ್ಲ. ಉಳಿದಂತೆ ಲೇಖನಗಳು ಉತ್ತಮವಾಗಿದ್ದುವು.

*ಮುಂಬೈ* — ***ಅಹ್ಮದ್ ಕುದ್ರಡ್ಡ***

ಮಾರ್ಚ್ ತಿಂಗಳ 'ಹೊಸತು'ವಿನಲ್ಲಿ ಶ್ರೀನಿವಾಸ ಜೋಕಟ್ಟೆಯವರ ಬೂದಿ ಬಾಬಾಗಳ ಬಗೆಗಿನ ಲೇಖನ ಉತ್ತಮವಾಗಿತ್ತು. ಈ ಬೂದಿ ಬಾಬಾಗಳು ಬೆಳೆಯಲು ಜನಸಾಮಾನ್ಯರಷ್ಟೇ ಕಾರಣರಲ್ಲ; ನಮ್ಮ ಮಂತ್ರಿ ಮಹೋದಯರುಗಳ ಕೊಡುಗೆಯೂ ಇದೆ.

*ನವಮಂಗಳೂರು* — ***ಜಿ. ಆಶಾ***

## ವಿಗ್ರಹ ಭಂಜಕ ಲಂಕೇಶ್

ಮಾರ್ಚ್ ತಿಂಗಳ 'ಹೊಸತು' ಸಂಚಿಕೆಯಲ್ಲಿ ಸಂಪಾದಕರು ಬರೆದ 'ವಿಗ್ರಹ ಭಂಜಕ ಲಂಕೇಶ್' ಲೇಖನ ಲಂಕೇಶರ ಮತ್ತೂ ಕೆಲವು ಗುಣಗಳನ್ನು ಪರಿಚಯಿಸುವಂತೆ ಮಾಡಿತು. ಲಂಕೇಶರನ್ನು ಅನಗತ್ಯವಾಗಿ ಹೊಗಳದೆ ಅವರೊಂದಿಗಿನ ತಮ್ಮ ಒಡನಾಟದ ಕೆಲವು ಪ್ರಸಂಗಗಳನ್ನು ವಿವರಿಸಿರುವುದು ಓದುಗರೇ ಲಂಕೇಶರನ್ನು ಅರ್ಥೈಸಿ ಕೊಳ್ಳಲು ಸಹಾಯಕವಾಗಿದೆ. ಅದು ಸಂಪಾದಕರ ವಸ್ತುನಿಷ್ಠತೆಯನ್ನು ತೋರಿಸುತ್ತದೆ.

ಸಂಪಾದಕೀಯದಲ್ಲಿ 'ಸಾಹಿತ್ಯ ಸಮ್ಮೇಳನ'ವೆಂಬ ಪರಿಷೆಯ ಕುರಿತಾದ ಚಿಂತನೆ ಸಾಹಿತ್ಯ, ಸಂಸ್ಕೃತಿ ಎಂದರೇನೆಂದು ಚಿಂತಿಸುವಂತೆ ಮಾಡಿತು.

*ತಗಡೂರು* — ***ಮಂಜುನಾಥ್ ಗೀತಾ***

ವಿಗ್ರಹ ಭಂಜಕರಾದ ಅಲ್ಲಮ ಮತ್ತು ಲಂಕೇಶ್ ನಡುವೆ ಇರುವ ವ್ಯತ್ಯಾಸವನ್ನು ನಾನೊಂದು ರೂಪಕದ ಮೂಲಕ ಹೇಳಲಿಚ್ಛಿಸುತ್ತೇನೆ: ಅಲ್ಲಮನು ಕನ್ನಡ ಸಂಸ್ಕೃತಿ ಸರ್ಪದ ಹೆಡೆಮಣಿ. ಲಂಕೇಶ್ ಅವರು ಅದೇ ಸಂಸ್ಕೃತಿ ಸರ್ಪದ ಕೋರೆಹಲ್ಲು.

ಲಂಕೇಶ್ ಪತ್ರಿಕೆಯಲ್ಲಿ ನವಶಕ್ತಿ ಮತ್ತು ಕಾಂತಿಗಳು ಮಿಳಿತವಾಗಿದ್ದುವು. ಆರಂಭದ ಈ ಹುರುಪು ಕ್ರಮೇಣ ಇಲ್ಲವಾಯಿತು. ಬಹಳಷ್ಟು ಮಂದಿ ಕೋರೆಹಲ್ಲಿನ ಸಹವಾಸ




ದಿಂದ ದೂರ ಸರಿದರು. ಇದಕ್ಕಿರುವ ಕಾರಣವನ್ನು ನಾನು ಅಲ್ಲಮನ ಮಾತಿನಿಂದಲೇ ಸೂಚಿಸಿಬಿಡುತ್ತೇನೆ : ''ಸೂಜಿಯ ಚುಚ್ಚಿ, ದಾರವ ಮರೆತರೆ, ಹೊಲಿಗೆ ಬಿಚ್ಚದೆ?'' ಬಹುಶಃ ಎಲ್ಲರನ್ನೂ ಚುಚ್ಚಿ ಎಚ್ಚರಿಸುತ್ತೇನೆಂಬ ಲಂಕೇಶರ ರಾಜತೇಜದ ಸೂಜಿಗೆ, ದಾರವು ಇದ್ದಿದ್ದರೆ 'ಹೊಲಿಗೆ' ಬಿಚ್ಚುತ್ತಿರಲಿಲ್ಲ.

*ಕೋಲಾರ* — ***ವಿ. ಚಂದ್ರಶೇಖರ ನಂಗಲಿ***

## ನಾವು ಮತ್ತು ಅಸ್ತವ್ಯಸ್ತತೆ

ಸಹಸ್ರಾರು ಸಂಖ್ಯೆಯ ಹೊಸತು ಓದುಗರಲ್ಲಿ ನಾನೂ ಸಹ ಒಬ್ಬ. ಮಾರ್ಚ್ ತಿಂಗಳ ಸಂಚಿಕೆಯಲ್ಲಿ 'ನಾವು ಮತ್ತು ಅಸ್ತವ್ಯಸ್ತತೆ' ಎಂಬ ಲೇಖನ ತುಂಬಾ ಚೆನ್ನಾಗಿ ಮೂಡಿ ಬಂದಿದೆ. 'ನಮ್ಮ ಬದುಕಿನ ಸ್ವಲ್ಪವೇ ಪರಿವರ್ತನೆಯಲ್ಲಿ ಗಮನೀಯ ವ್ಯತ್ಯಾಸಗಳನ್ನು ಕಾಣುವ ಪರಿಸ್ಥಿತಿ ಉದ್ಭವಿಸಿರುವುದನ್ನು ಲೇಖಕರು ಅನೇಕ, ಸರಳ ನಿದರ್ಶನ ಗಳೊಂದಿಗೆ ಓದುಗರ ಮನಮುಟ್ಟುವಂತೆ ರೂಪಿಸಿದ್ದಾರೆ.

*ಸಾಸ್ವೇಹಳ್ಳಿ* — ***ಡಿ. ಪ್ರವೀಣ್‌ಕುಮಾರ್***

## ಕಥೆ

ತಿಂಗಳ ಕಥೆ 'ದೇವಮಾನವ' ಓದುತ್ತಾ ಹೋದಂತೆ ಹಸಿವಿನ ಆರ್ತನಾದ, ಬಡತನದ ಬವಣೆಯ ಬದುಕು, ಹೀಗೆ ಬದುಕಿನ ಒಂದು ಮಜಲನ್ನು ತೆರೆದಿಟ್ಟಿತು. ಶರಣ ಕುಮಾರ ಲಿಂಬಾಳೆಯವರ ಕಥೆಯನ್ನು ಚಂದ್ರಕಾಂತ ಪೋಕಳೆಯವರು ಅಷ್ಟೇ ಚೆನ್ನಾಗಿ ಅನುವಾದಿಸಿದ್ದಾರೆ. ಅಂತರರಾಷ್ಟ್ರೀಯ ಮಹಿಳಾ ದಿನಾಚರಣೆಯ ಅಂಗವಾಗಿ ಮೂಡಿಬಂದ ಸಂಪಾದಕೀಯ ಸಮಯೋಚಿತವಾಗಿತ್ತು.

*ಮೈಸೂರು* — ***ಕೆ. ವಿ. ಶಿವಕುಮಾರ್***

## ಬರಗೂರರು

''ಜನಪರ ಕಾಳಜಿಯ ಬರಗೂರರು'' ಎಂಬ ಸಂದರ್ಶನದ ಲೇಖನ ಸೊಗಸಾಗಿ ಮೂಡಿಬಂದಿದೆ. ಬಂಡಾಯ ನಡೆಸಿ ಅದರ ಬಗ್ಗೆ ಸಾರ್ವಜನಿಕರು ಸ್ಪಂದಿಸುವ ಹಾಗೇ ಹತ್ತಾರು ಕಾರ್ಯಕ್ರಮಗಳ ಬಗ್ಗೆ ವಿವರಣೆ ನೀಡುತ್ತ ಹೆಜ್ಜೆಯಿಡುತ್ತಿರುವ ಪ್ರಾಧಿಕಾರ ಸ್ವಾಗತಾರ್ಹವಾಗಿದೆ

*ರಬಕವಿ* — ***ಚಿದಾನಂದ ಪಾಗಾದ***

'ಜನಪರ ಕಾಳಜಿಯ ಬರಗೂರು' ಎಂಬ ಸಂದರ್ಶನ ಚೆನ್ನಾಗಿ ಮೂಡಿಬಂದಿದೆ. ಜಿ. ರಾಮಕೃಷ್ಣರವರು ಸೂಕ್ತವಾದ ಪ್ರಶ್ನೆಗಳನ್ನು ಕೇಳಿ ಬರಗೂರರ ವಿಚಾರಗಳನ್ನು ಹೊರ ಹಾಕಿದ್ದಾರೆ. ನಮ್ಮ ಸಂಸ್ಕೃತಿಯ ಬೇರುಗಳನ್ನು ಗುರುತಿಸುವಲ್ಲಿ ಯೋಜನೆಗಳಡಿ ಹೊರಬಂದ ಪುಸ್ತಕಗಳು ಅತಿ ಮಹತ್ವದ್ದು. ಕನ್ನಡ ಅಭಿವೃದ್ಧಿ ಪ್ರಾಧಿಕಾರವು ಅವರ ಅಧ್ಯಕ್ಷತೆಯಲ್ಲಿ ಮುನ್ನಡೆ ಸಾಧಿಸಲಿ.

*ಅಂಡಗಿ ಚಿಲವಾಡಗಿ* — ***ಎನ್. ಹನುಮಂತಪ್ಪ***

## ಶಿಕ್ಷಣ — ಸಲಹೆಗಳು

ಫೆಬ್ರವರಿ ಸಂಚಿಕೆಯಲ್ಲಿ ಶ್ರೀ ಶಿವಾನಂದ ಹೊಂಬಳರ ಶಿಕ್ಷಣ ವಿಷಯಕ ಲೇಖನ ಗಮನಾರ್ಹ. ಕೆಲವು ಬಿಂದುಗಳ ಬಗೆಗೆ ಈ ಕೆಲವು ಸಲಹೆಗಳು ಸೂಕ್ತವೇ ಎಂದು ಚಿಂತಿಸುವುದು. ಸದ್ಯಕ್ಕೆ ಒಂದು ಬಡಾವಣೆಯಲ್ಲಿನ ಶಾಲೆಗಳ ಪೈಕಿ ಯಾವುದೊಂದು ಆಟದ ಬಯಲು ಹೊಂದಿದೆಯೋ ಅದನ್ನು ಸರತಿಯ ಮೇರೆಗೆ ಸಮೀಪದ ಇತರ ಶಾಲೆಗಳು ಉಪಯೋಗಿಸುವ ಕುರಿತು ಯೋಚಿಸಬಹುದು. ಹಾಗೆಯೇ ಅವು ಕಲೆತು ತಾವೆಲ್ಲ ಉಪಯೋಗಿಸಬಲ್ಲ ಸುಸಜ್ಜಿತ ಲೈಬ್ರರಿ-ಪ್ರಯೋಗ ಶಾಲೆಯನ್ನೂ ಏರ್ಪಡಿಸಿಕೊಳ್ಳ ಬಹುದು. ತಾಯಿನುಡಿ ಯಾ ಪ್ರಾಂತೀಯ ಭಾಷೆಯೇ (ಇದೇ ಹೆಚ್ಚು ಸೂಕ್ತ) ಕಡ್ಡಾಯ ಮಾಧ್ಯಮವಿರಲೇಬೇಕು. ಪ್ರಪಂಚದ ಎಲ್ಲ ತಜ್ಞರೂ ಏಕಕಂಠದಿಂದ ಈ ಬಗ್ಗೆ ಕೂಗಿಕೊಂಡರೂ ಈ ಶಾಲೆಗಳವರು ಕಿವುಡರಾಗಿದ್ದಾರೆ. ಮಾನವೀಯ ಮೌಲ್ಯಗಳಲ್ಲಿ ಕೆಲವನ್ನು ಬಿತ್ತುವ ಕೆಲಸ ಈ ಹಂತದಿಂದಲೇ ನಡೆಯಬೇಕಲ್ಲವೇ ?

*ಸಾಗರ* — ***ಬ. ನಾ. ರಘುರಾಮ***

## ಕಣಾವಿ ಸಂದರ್ಶನ

ಕವಿ ಕಂಡಂತೆ ಈಗಲೂ ಹಳ್ಳಿಗಳಲ್ಲಿ ಹಾಡುತ್ತ ಕುಣಿಯುತ್ತ ದೇವರನ್ನು ಹೊತ್ತು ಗೌಡರ ಮನೆಗೆ ಬರುವ ಕರಬಲ್ ತಂಡಕ್ಕೆ ಬೆಲ್ಲದ ಪಾನೀಯ ವಿತರಣೆ. ಎಲ್ಲರೂ ಒಂದೆಡೆ ಸೇರಿ ಆಚರಿಸುವ ಇಂಥ ಹಬ್ಬಗಳೇ ನಿಜವಾದ ಆಚರಣೆಗಳು.

*ವರ್ತೂರು* — ***ಆದಪ್ಪ ಪಾಸೋಡಿ***

# ಆಕಸ್ಮಿಕವಲ್ಲ - ಸಾಕಸ್ಮಿಕ : ಹೇಗೆ?

ಜನವರಿ ೨೦೦೦ನೇ ವರ್ಷದ "ಹೊಸತು" ಡಾ|| ಪಂಚಾಕ್ಷರಿ ಹಿರೇಮಠರ ಚಿಕ್ಕ ಲೇಖನವೊಂದನ್ನು ಪ್ರಕಟಿಸಿದೆ. ಅವರು ಶರಣ ಆಯ್ದಕ್ಕಿಯ ಮಾರಯ್ಯ ಹಾಗೂ ಸಂತ ರೈದಾಸರ ಜೀವನದ ಕೆಲವು ಘಟನೆಗಳನ್ನು - ಅವರಿಬ್ಬರ ಒಂದೇ ರೀತಿಯ ಆಶಾವರ್ಜನೆ ಹಾಗೂ ಕಾಯಕ ನಿಷ್ಠೆಗಳನ್ನು - ಉಲ್ಲೇಖಿಸಿ ಅವು ಆಕಸ್ಮಿಕವಲ್ಲವೆಂದು ಹೇಳುತ್ತಾರೆ. ಅದೇಕೆ ಆಕಸ್ಮಿಕವಲ್ಲ? ಸಾಕಸ್ಮಿಕವೇ ಆಗಿದ್ದರೆ ಅದು ಹೇಗೆ? ಈ ಕುರಿತು ಡಾಕ್ಟರ ಸಾಹೇಬ ಏನೂ ಹೇಳಿರುವುದಿಲ್ಲ. ವಿಷಯ ಚರ್ಚಾರ್ಹ ವಾದದ್ದು. ಚರ್ಚೆಗೋಸ್ಕರ ನನ್ನದೊಂದು ಅನಿಸಿಕೆಯನ್ನು ಶ್ರುತಪಡಿಸುತ್ತಿದ್ದೇನೆ.

### ತುಕಾರಾಮ

ರೈದಾಸ ಹಾಗೂ ಮಾರಯ್ಯನವರ ಹಾಗೆಯೇ ಸಂತ ತುಕಾರಾಮ ಮಹಾರಾಜರು ಕೂಡ ಶಿವಾಜಿ ಮಹಾರಾಜರಿಂದ ಧನಕನಕ ರೂಪದ ನೆರವನ್ನು ತಿರಸ್ಕರಿಸಿದರೆಂಬ ಕತೆಯಿದೆ. 'ರಾಜ'ನನ್ನು 'ಆಸೆ'ಗೆ ಪ್ರತೀಕವೆಂದು ಹೇಳುವ ಹಾಗೂ ಅಕಾಯಕ ಪ್ರಾಪ್ತಿಯು ಅಪ್ರಸಾದವೆನ್ನುವ, ಇಂಥವೇ ಕತೆಗಳು ಬಹುತರ ಎಲ್ಲ ಸಂತ ಶರಣರ - ವಿಶೇಷವಾಗಿ ನಿರ್ಗುಣ ಸಂಪ್ರದಾಯದ ಸಾಧುಗಳ - ಕುರಿತು ಲಭ್ಯವಿದೆಯೆಂದು ತೋರುತ್ತದೆ. ಇದಕ್ಕೆ ಕಾರಣವೇನು?

### ಗಣ ಕುಲ ಪರಂಪರೆ

ನಮ್ಮ ಇಡೀ ಭಕ್ತಿ ಪರಂಪರೆ ಆದಿ ಗಣ-ಕುಲಗಳು - ಪ್ರಿಮಿಟಿವ್ ಕಮ್ಯೂನ್ಸ್ - ಭಗ್ನಗೊಂಡ ಹಿನ್ನೆಲೆಯಲ್ಲಿ ಉದಯಿಸುವಂತೆ ತೋರುತ್ತದೆ. ಆ ಮಹಾಮನೆ ವರ್ಗಗಳಾಗಿ ಒಡೆದಾಗ ಒಡೆಯ ಆಳುಗಳ ಸಂಘರ್ಷ ತಲೆದೋರುತ್ತದೆ. ಅಹಂ-ಮಮ - ಸೊಮ್ಮುಗಳು ಕೊನೆಯಿಲ್ಲದ ಸ್ವಾರ್ಥ-ಆಶೆಗಳಿಗೆ ಅವಕಾಶ ಉಂಟು ಮಾಡುತ್ತವೆ. ಅದಕ್ಕೆ ಪ್ರತಿನಿಧಿ ಅರಸನಾಗುತ್ತಾನೆ. ಆಸೆ ಅರಸಿಂಗಲ್ಲದೆ ನಮಗೇಕಯ್ಯ ಎಂಬ ವಚನ ವಿವಿಧ ರೂಪಗಳಲ್ಲಿ ಅನೇಕ ಶರಣರ ಉಕ್ತಿಯಾಗಿರುವುದು ಕಂಡುಬರುತ್ತದೆ.

### ಭಕ್ತರು

ಮಹಾಮನೆ ವಿಭಕ್ತಗೊಂಡಮೇಲೆ, ಖಾಸಗಿ ಆಸ್ತಿ ತಲೆದೋರಿದ ಮೇಲೆ, ಆಸ್ತಿವಂತರು ಹೊಸ ಸಮಾಜದ ಅಧ್ವರ್ಯುಗಳೆನಿಸಿ ಮಹಾಜನರೆನಿಸುತ್ತಾರೆ. ಅವರು ಹೇಳಿದ್ದೇ ದಾರಿ, ಅವರು ಬೋಧಿಸಿದ್ದೇ ಅಧಿಕೃತ ನೀತಿ-ಧರ್ಮ ಎನಿಸುತ್ತದೆ. ನಮ್ಮ ಪರಂಪರೆಯ ಮಟ್ಟಿಗೆ ವರ್ಣಾಶ್ರಮ ಧರ್ಮ - ಚತುರ್ವರ್ಣ ವ್ಯವಸ್ಥೆ ಅದಕ್ಕೆ ಉದಾಹರಣೆ. ಆಸ್ತಿ ವಂಚಿತರಾಗಿ ಶೋಷಿತ-ದಾಸರಾದವರ ಅಳಲು-ಆಶೋತ್ತರಗಳ ವಕ್ತಾರರಾಗಿ ಭಕ್ತಿ ಪಂಥದ ದಾಸ-ಸಂತ-ಸಾಧು ಶರಣರು ಮುಂದೆ ಬರುತ್ತಾರೆ. ಅವರ ಬೋಧೆಯ ಮುಖ್ಯಾಂಶ ಹಳೆಯ ಮಹಾಮನೆಯ ಸಮತೆ, ಸಾಮರಸ್ಯ, ಸ್ವಾರ್ಥಶೂನ್ಯತೆ, ಪ್ರಸಾದ ನಿಷ್ಠೆಗಳ ಕುರಿತಾದ ಕನವರಿಕೆಯಾಗಿದೆ. ಶಿವಶರಣರ ವಚನಗಳಲ್ಲಿ ಇದನ್ನು ಬಹಳ ಸ್ಫುಟವಾಗಿ ಕಾಣಬಹುದು. ಶಿವಶರಣರು ತಮ್ಮ ಬೋಧೆ ಗಣ-ಜಂಗಮವಾದೀ ಬೋಧೆಯೆಂದೂ, ತಮ್ಮ ಆದರ್ಶ ಹಿಂದಣ "ಮಹಾಮನೆ" ಎಂದೂ ಕಂಠೋಕ್ತವಾಗಿ ಹೇಳುತ್ತಾರೆ. "ಹಾದರದ ಕತೆಯನ್ನು ಸೋದರರ ವಧೆಯನ್ನು ಆದರದಿಂದ ಕೇಳುವವರನ್ನು" ತಿವಿಯುವ ಸರ್ವಜ್ಞಕವಿ ಇದೇ ಸಂಪ್ರದಾಯದ ಪ್ರತಿನಿಧಿ.

### ತಾಂತ್ರಿಕ ಪ್ರಗತಿ

ಮಹಾಮನೆ ಒಡೆದದ್ದಾದರೂ ಹೇಗೆ? ಉತ್ಪಾದನೆ ತಂತ್ರ ತೀರ ಕೆಳಮಟ್ಟದ್ದಾಗಿರುವಾಗ ಸಮಾಜ ಒಂದು ಮಹಾಮನೆಯ ಮಟ್ಟಕ್ಕಿಂತ ಮೇಲೇರಲು ಸಾಧ್ಯವಾಗಿರಲಿಲ್ಲ. ಮನೆಯ ಎಲ್ಲರೂ ಯಾವಾಗಲೂ ದುಡಿದರೂ ಎಲ್ಲರಿಗೂ ಸಾಲುವಷ್ಟು ಗಳಿಕೆಯಾಗುತ್ತಿರಲಿಲ್ಲ. ಹೀಗಿರುವಾಗ "ಅಕಾಯಕ" ಎನ್ನುವುದೇ ಆ ಸ್ಥಿತಿಯಲ್ಲಿ ಅಸಾಧ್ಯ. ಕಾಯಕನಿಷ್ಠೆ ಜೀವನಾಧಾರ ತತ್ವವೆನಿಸಿದ್ದು ಆಗ ತೀರ ಸಹಜ. ಅದು ಬಡತನದ ಸಮಾಜ. ಆದರೆ ಮನೆಯನ್ನು ಒಡೆಯದ್ದರಿಂದ 'ಮನ' ಒಡೆದು ಸಣ್ಣದಾಗುವುದಕ್ಕೆ ಅವಕಾಶವಿರಲಿಲ್ಲ. ಕಾರಣ "ಮನೆ ನೋಡಾ ಬಡವರು, ಮನ ನೋಡಾ ಘನ" ಎನ್ನುವ ಮಾತು ಉಚಿತವೆನಿಸಿತ್ತು. ಮಹಾಮನೆಯನ್ನು ನೆನಪಿಸುತ್ತಲೇ ಬದುಕುವ ಮಹನೀಯರಲ್ಲೆಲ್ಲ ಒಂದೇ ವಿಧವಾದ ಕಾಯಕನಿಷ್ಠೆ ಕಂಡು ಬರುವುದಕ್ಕೆ ಈ ಹಿನ್ನೆಲೆ ತಳಹದಿಯಾಗಿರುವುದು ಸಾಧ್ಯ.

### ಪರಮಾನಂದ

ಮಹಾಮನೆಯ ಸನ್ನಿವೇಶವನ್ನು ಭಾವಿಸಿಕೊಂಡರೆ, ಅದು ವ್ಯಕ್ತಿತ್ವದ ವಿಕಾಸವೇ ಇಲ್ಲದ, ಸ್ವಾರ್ಥ-ಸ್ವಾವಲಂಬನೆಗಳ ಸೋಂಕನ್ನೇ ಅರಿಯದ, ಬದುಕಿಗೋಸ್ಕರ-ಕುಲ-ಗಣಗಳನ್ನೇ ಸರ್ವಥಾ ನಂಬಿಕೊಳ್ಳಬೇಕಿದ್ದ 'ನಂಬಿಯಾರ್'ಗಳ, ಸಮಾಜವಾಗಿತ್ತೆಂದು ತಿಳಿಯುತ್ತದೆ. ಅಂಗ-ಲಿಂಗಗಳ ಸಾಮರಸ್ಯ ಅಷ್ಟು ಪರಿಪೂರ್ಣವಾಗಿದೆ ಆ ಸಮಾಜದಲ್ಲಿ. ಅಂಥ ಭಕ್ತರುಗಳಿಗೆ ಚಿಂತೆ-ಕಳವಳ ಅಥವಾ ಆ ತರಹದ ಯಾವುದೇ ವ್ಯಕ್ತಿಗತ ಭಾವನೆ ಕಾಡುವ ಸಾಧ್ಯತೆಯಿಲ್ಲ. ಅಂಥ ಮಾನಸಿಕ ಸ್ಥಿತಿಯನ್ನು "ಪರಮಾನಂದ" ಎಂದರೆ ತಪ್ಪಾಗುವುದಿಲ್ಲ. ವಚನಕಾರರ ವೀರಶೈವಾನಂತ ಇದರಿಂದ ಭಿನ್ನವಾಗಿಲ್ಲ. ಆದ್ದರಿಂದ ರೈದಾಸ ಅಥವಾ ಆಯ್ದಕ್ಕಿಯ ಮಾರಯ್ಯ ಕನಸುಕಂಡ ಆನಂದದ ಸ್ಥಿತಿ ಇಂಥದೇ ಆಗಿರುವುದರಲ್ಲಿ ಸಂದೇಹವಿಲ್ಲ. ಆದರೆ, ವರ್ಗವಿಭಕ್ತ ಸಮಾಜದಲ್ಲದು ಸಹಜ ಸಿದ್ಧಿಯಾಗಿರಲು ಸಾಧ್ಯವಿಲ್ಲ; ಷಟ್-ಸ್ಥಲ ಸಾಧನೆ ಅಥವಾ ಅಂಥದೇ ಬೇರೆ ಸಾಧನೆಯ ಮೂಲಕ ವ್ಯಕ್ತಿಗಳು ವ್ಯಕ್ತಿಗತವಾಗಿ ಸಾಧಿಸಬಹುದಾದ ಮನಃಸ್ಥಿತಿ.

### ಮಾಯೆ

"ಪ್ರಿಮಿಟಿವ್ ಕಮ್ಯೂನಿಸಂ" ಹಿಂದಾದ ಮೇಲೆ ವರ್ಣವಿಭಕ್ತ ಸಮಾಜದಲ್ಲಿ ಸುಖ-ಸೌಖ್ಯ ಶೋಷಕರಾದ ಕೆಲವರಿಗೆ ಲಭ್ಯವಾಗುತ್ತದೆ. ಬಾಕಿಯವರಿಗೆಲ್ಲ ವೃದ್ಧಿಗೊಂಡ ಸಮಾಜದ ಸಂಪತ್ತಿನಿಂದ ಸುಖವಿಲ್ಲ. ಅವರಿಗೆ ದುಃಖವೇ ಲಭ್ಯವಾಯಿತು. ಸುಖವಿದ್ದವರ ಸೌಖ್ಯ ಕೂಡ ಬಹಳ ಮಟ್ಟಿಗೆ ಅಸ್ಥಿರವಾದದ್ದು - ದ್ವೇಷಪೂರ್ಣವಾದ, ಸ್ಪರ್ಧಾಯುಕ್ತ ವಾದ ಜೀವನ ವಿಧಾನದಿಂದಾಗಿ. ಆದ್ದರಿಂದ ಅದು "ಮಾಯೆ"ಯಾಗಿ ಕಂಡಿದ್ದರೆ ಆಶ್ಚರ್ಯವೇನೂ ಇಲ್ಲ. ವರ್ಗವಿಭಕ್ತ ಸಮಾಜ ಜೀವನವಿಂದು ವಿಕಾಸಗತಿಯಲ್ಲಿ ತುತ್ತತುದಿ ಮುಟ್ಟಿದೆ. ಬಂಡವಾಳಶಾಹೀ ಸಮಾಜ ಅದ್ಭುತ ತಾಂತ್ರಿಕ ಪ್ರಗತಿಯನ್ನೂ, ಅಪೂರ್ವ ಪ್ರಮಾಣದ ಸಂಪದುತ್ಪಾದನೆಯನ್ನೂ ಸಾಧ್ಯಗೊಳಿಸಿದೆ. ಕೂಡಿ ಬಾಳಿದರೆ, ಮಹಾಮನೆಯ ವಿಧಾನ ಮರಳಿಬಂದರೆ, ಯಾರೂ ಬಡವರಾಗಿರುವ ಅಗತ್ಯವಿಲ್ಲವೆನ್ನುವಷ್ಟು ಸಮೃದ್ಧಿ ಲಭ್ಯವಿದೆ. ಆದರೆ ? ಅದರ ಫಲ 'ಪರಮಾನಂದ'ವಲ್ಲ. ಬಿಕ್ಕಟ್ಟು, ಅಭದ್ರತೆ, ಸಂಪತ್ತಿನ ದುರ್ವ್ಯಯ, ಯುದ್ಧ, ದಾರಿದ್ರ್ಯ-ಸಂಕಟ- ಇದೇ ವಾಸ್ತವತೆ. ಎಲ್ಲ ಇದ್ದೂ ಜಗಜ್ಜೀವನ ಕಣ್ಣೀರಿನ ಕೊಳ್ಳವೇ. ಹೀಗಿರುವಾಗ "ಮಾಯೆ"ಯೆಂದಲ್ಲದೆ ಬೇರೆ ಹೇಗೆ ವರ್ಣಿಸಬಹುದು?

### ಬಿನ್ನಹ

ಈ ದಿಸೆಯ ಅಧ್ಯಯನವೊಂದು ನಮ್ಮ ಇಡೀ ಭಕ್ತಪರಂಪರೆಯ ಮಹತ್ವವನ್ನು ಅರಿಯಲು ಅಗತ್ಯವೆಂದು ತೋರುತ್ತದೆ. 'ಭಕ್ತಿ' ಶಬ್ದದ ವ್ಯುತ್ಪತ್ತಿ, ಭಕ್ತಿ ಸೂತ್ರಗಳ ತಲಸ್ಪರ್ಶಿ ಅಧ್ಯಯನಗಳೊಂದಿಗೆ ಈ ಕುರಿತಾದ ಚರ್ಚೆ ಆರಂಭವಾಗಬೇಕೆಂದು ನನ್ನ ಸೂಚನೆ. ಡಾ|| ಪಂಚಾಕ್ಷರಿಯವರಿಂದ ಪ್ರಾರಂಭವಾದ ಜಿಜ್ಞಾಸೆ ಭಕ್ತಿಪಂಥ ವಿವೇಚನೆಯಾಗಿ ಪರ್ಯವಸಾನವಾಗಲೆಂದು ಹಾರೈಸುತ್ತೇನೆ.

ಪಿ. ಎಸ್. ಪಾಟೀಲ
ವಕೀಲರು, ಬಿಜಾಪುರ

## ಮೇ ತಿಂಗಳ ಸಂಚಿಕೆಯಲ್ಲಿ

- **ಮೇ ದಿನ ಮತ್ತು ಮುಂದಿನ ಸವಾಲುಗಳು** - *ಎಚ್. ವಿ. ಅನಂತಸುಬ್ಬರಾವ್*
- **ಕುವೆಂಪು ಅವರ ಕಾನೂರು ಹೆಗ್ಗಡಿತಿ : ಕಾರ್ನಾಡರ ಕ್ಯಾಮರಾ ಕಣ್ಣಿನಲ್ಲಿ** - *ಡಾ|| ಜಿ. ಪ್ರಶಾಂತ ನಾಯಕ*
- **ಕಲ್ಯಾಣ ಬಸವಣ್ಣ** - *ಬಿ. ಆರ್. ಪೋಲೀಸ್ ಪಾಟೀಲ*
- **ಅಹಿಂಸೆ ಮತ್ತು ಪ್ರಜಾಪ್ರಭುತ್ವ** - *ಕೆ. ಎಸ್. ನಾರಾಯಣಸ್ವಾಮಿ*
- **ಮಾರ್ಕ್ಸ್ ಮತ್ತು ವಿಜ್ಞಾನ** - *ಎಂ. ಎ. ಸೇತುರಾವ್*
- **'ನೈಸ್' ಜೊತೆ ಒಂದು ಸಂವಾದ** - *ನಗರಗೆರೆ ರಮೇಶ್*
- **ಗಾಡ್ಗಿಲರ ಸೈದ್ಧಾಂತಿಕ ಮುಸುಕು** - *ವಲ್ಲಂಪಾಟಿ ವೆಂಕಟಸುಬ್ಬಯ್ಯ*
- **ಕೆಲಸದ ಸ್ಥಳದಲ್ಲಿ ಹೆಂಗಸರ ಮೇಲಿನ ದೌರ್ಜನ್ಯಗಳು** - *ಡಾ|| ಎನ್. ಗಾಯತ್ರಿ*
- **ಇತ್ಯಾದಿ**

# ಮುಂಬರುವ ಸಂವಿಧಾನದ ಮುನ್ಸೂಚನೆಗಳು

ಪ್ರೊ॥ ಬಿ. ವಿ. ವೀರಭದ್ರಪ್ಪ

ಸಂವಿಧಾನ ಪರಾಮರ್ಶೆಯ ಆಯೋಗ ರಚನೆ ದಿಢೀರನೆ ತೆಗೆದುಕೊಂಡ ತೀರ್ಮಾನವೇನಲ್ಲ. ೯೦ರ ದಶಕಾರಂಭದಿಂದಲೇ ಅದಕ್ಕೆ ತಯಾರಿ ನಡೆದಿರುವುದು ಇಂದು ರಹಸ್ಯವಾಗೇನೂ ಉಳಿದಿಲ್ಲ. ವಿಶ್ವ ಹಿಂದೂ ಪರಿಷತ್ತಿನ ಸಂತ ಸಮಿತಿ ತನ್ನ ಅಕ್ಟೋಬರ್ ೧೩-೧೪, ೧೯೯೨ರ ಸಭೆಯಲ್ಲಿ ತನ್ನ ದೃಷ್ಟಿಯಲ್ಲಿ 'ಹಿಂದೂ ವಿರೋಧಿ'ಯಾದ ಸಂವಿಧಾನದ ಬಗ್ಗೆ ಒಂದು ವರದಿಯನ್ನು ಸಿದ್ಧಪಡಿಸಲು ಅದರ ನಾಯಕರಾದ ಮುಕ್ತಾನಂದ ಸರಸ್ವತಿಯವರ ಅಧ್ಯಕ್ಷತೆಯಲ್ಲಿ ನಾಲ್ವರ ಒಂದು ಉಪಸಮಿತಿಯನ್ನು ನೇಮಿಸಿತ್ತು. ಆ ವರದಿಯನ್ನು ೧೯೯೩ರ ಆರಂಭದಲ್ಲೇ ೫೦ ಪುಟಗಳ ಒಂದು ಚಿಕ್ಕ ಪುಸ್ತಕ ರೂಪದಲ್ಲಿ ಬಿಡುಗಡೆ ಮಾಡಲಾಗಿತ್ತು. ಹಿಂದಿಯಲ್ಲಿರುವ ಆ ಕಿರು ಪುಸ್ತಕದ ಶೀರ್ಷಿಕೆ ಈ ರೀತಿ ಸುದೀರ್ಘವಾಗಿದೆ : *''ಭಾರತದ ಏಕತೆ, ಅಖಂಡತೆ, ಸೋದರಭಾವ ಮತ್ತು ಸಾಂಪ್ರದಾಯಿಕ ಸದ್ಭಾವನೆಗಳ ನಾಶಕ್ಕೆ ಕಾರಣರಾರು ? ಹಸಿವು, ಬಡತನ, ಭ್ರಷ್ಟಾಚಾರ ಮತ್ತು ಅಧರ್ಮಗಳ ಹೆಚ್ಚಳಕ್ಕೆ ಕಾರಣ ಯಾರು ?- ವರ್ತಮಾನದ ಭಾರತ ಸಂವಿಧಾನ''.*

ಈಗಿನ ಭಾರತ ಸಂವಿಧಾನವು ಪ್ರಜಾಪ್ರಭುತ್ವ, ಸಾಮಾಜಿಕ ನ್ಯಾಯ, ಸಮಾನತೆ ಸೋದರಭಾವ ಮತ್ತು ಸ್ವಾತಂತ್ರ್ಯಗಳ ದ್ಯೋತಕವಾಗಿದೆ. ಸರ್ವಾಧಿಕಾರಿ ಧೋರಣೆಯ ಹಿಂದುತ್ವವಾದಿಗಳು ಈ ತತ್ವಗಳನ್ನು ಸಂಪೂರ್ಣವಾಗಿ ವಿರೋಧಿಸುತ್ತಾರೆ. ಪ್ರಾಚೀನ ಮನು ಸಂಹಿತೆಯು ಪ್ರತಿಪಾದಿಸುವ ಜಾತಿಗಳೊಳಗಿನ ಮೇಲು ಕೀಳುಗಳನ್ನು ಎತ್ತಿ ಹಿಡಿಯುವುದು ಅವರ ಗುಪ್ತ ಉದ್ದೇಶವಾಗಿದೆ. ಈಗಿನ ಸಂವಿಧಾನವು ಅವರ ಗುರಿ ಸಾಧನೆಗೆ ದೊಡ್ಡ ಅಡಚಣೆಯಾಗಿರುವುದರಿಂದ ಅದರ ನಾಶಕ್ಕೆ ಅವರು ಸನ್ನದ್ಧರಾಗುತ್ತಿದ್ದಾರೆ. ಸಾವಿರಾರು ವರ್ಷಗಳಿಂದ ಜನಸಾಮಾನ್ಯರನ್ನು ಅಕ್ಷರ ಜ್ಞಾನದಿಂದ ವಂಚಿತರನ್ನಾಗಿ ಮಾಡಿದ ಅವರು ಈಗ ಮುಗ್ಧ ಜನರನ್ನು ಧರ್ಮದ ಹೆಸರಿನಲ್ಲಿ ತಮ್ಮ ಕೈಗೊಂಬೆಗಳನ್ನಾಗಿ ಮಾಡಿಕೊಳ್ಳಲು ಅನೇಕ ಕಟ್ಟುಕಥೆಗಳನ್ನು ಹೆಣೆಯುತ್ತಿದ್ದಾರೆ, ಈಗಿನ ಸಂವಿಧಾನ ಜನರ ಹಿತಾಸಕ್ತಿಗಳಿಗೆ ವಿರುದ್ಧವಾಗಿದೆ ಎಂದು ಸಾರುತ್ತಿದ್ದಾರೆ.

ಮುಕ್ತಾನಂದರ ಪ್ರಕಾರ ''ಸಂವಿಧಾನ ಜನ ವಿರೋಧಿಯಾಗಿದೆ'' (ಪು.೭). ಮಹಿಳೆಯರ, ಹಿಂದುಳಿದವರ ಮತ್ತು ತುಳಿತಕ್ಕೊಳಗಾದ ವರ್ಗಗಳ ಜನರ ಏಳಿಗೆಗಾಗಿ ಸಂವಿಧಾನದಲ್ಲಿ ಕಲ್ಪಿಸಲಾದ ವಿಶೇಷ ಸೌಲಭ್ಯಗಳು 'ಹಿಂದು ವಿರೋಧಿ' ತತ್ವಗಳಾಗಿವೆ. ಬಡತನ ಮತ್ತು ನಿರುದ್ಯೋಗಗಳಿಗೆ ಭಾರತ ಸಂವಿಧಾನವೇ ಕಾರಣ ಎಂದು ಹೇಳಿ ಈ ಸರ್ವಾಧಿಕಾರಿ ಶಕ್ತಿಗಳು ಪ್ರಜಾಪ್ರಭುತ್ವದ ವಿರುದ್ಧ ತಾವು ಸಾರಿರುವ ಸಮರಕ್ಕೆ ಬೆಂಬಲ ಕೋರಿ ಬಡಜನರನ್ನು ತಮ್ಮತ್ತ ಸೆಳೆದುಕೊಳ್ಳುವ ಹುನ್ನಾರದಲ್ಲಿ ತೊಡಗಿವೆ.

ಆರೆಸ್ಸೆಸ್ ಕೆಳಜಾತಿಗಳ ಜನರ ಮನಸ್ಸುಗಳನ್ನು ಗೆಲ್ಲಲು ಸತತ ಪ್ರಯತ್ನ ನಡೆಸಿದೆ. ಏಕೆಂದರೆ ತಾವು ಹಾಕಿಕೊಂಡಿರುವ ಮುಸ್ಲಿಂ ವಿರೋಧಿ ಚಳವಳಿ ಹೊತ್ತಿಸುವ ಅಗ್ನಿಗೆ ಆಹುತಿ ಕೊಡಲು ಈ ಜನ ಬೇಕಾಗಿದ್ದಾರೆ. ಆದರೂ ದಲಿತರಿಗೆ, ಬುಡಕಟ್ಟು ಜನರಿಗೆ ಮತ್ತು ಹಿಂದುಳಿದ ವರ್ಗಗಳಿಗೆ ಸರ್ಕಾರಿ ಸೇವೆಯಲ್ಲಿ ಯಾವ ಮೀಸಲಾತಿಯೂ ಇರಕೂಡದು. ''ಇದರಿಂದ ಅವರಲ್ಲಿ ತಾವು ಬೇರೆ ಎಂಬ ಭಾವನೆ ಉಂಟಾಗುತ್ತದೆ'' (ಪು.೩೩) ಎಂದು ಮುಕ್ತಾನಂದರು ಪ್ರತಿಪಾದಿಸುತ್ತಾರೆ.

ಅಂತಃಕಲಹದೊಳಗೆ ತೊಳಲಾಡುವ ನೂರಾರು ಜಾತಿ, ಉಪಜಾತಿಗಳ ನಿರ್ಮಾಣಕ್ಕೆ ಮನು ಪ್ರಣೀತ ವರ್ಣ ವ್ಯವಸ್ಥೆಯೇ ಕಾರಣವೆಂಬುದನ್ನು ಮುಕ್ತಾನಂದರು ಕೌಶಲದಿಂದ ಮರೆಮಾಚುತ್ತಾರೆ. ಬುಡಕಟ್ಟು ಜನರನ್ನು ಕುರಿತು ಅವರು ಈ ರೀತಿ ಅಪ್ಪಣೆ ಕೊಡಿಸುತ್ತಾರೆ : ''ಬುಡಕಟ್ಟು ಜನರ ಪ್ರಕೃತಿದತ್ತವಾದ ಹಕ್ಕುಗಳನ್ನು ಮಾತ್ರ ನಾವು ಸಂರಕ್ಷಿಸಬೇಕು'' (ಪು.೪೨). ಅವರು ದಟ್ಟ ಕಾಡುಗಳಲ್ಲಿ ಕಾಡುಪ್ರಾಣಿಗಳಾಗಿ ಮಾತ್ರ ಬದುಕಬೇಕು. ದೇಶದ ಮುಖ್ಯ ವಾಹಿನಿಯಲ್ಲಿ ಬೆರೆತು ಸುಶಿಕ್ಷಿತರಾಗಬಾರದು, ಆಡಳಿತ ಯಂತ್ರದಲ್ಲಿ ಪಾಲ್ಗೊಳ್ಳಬಾರದು ಎಂಬುದು ಅವರ ಉದ್ದೇಶವಾಗಿದೆ.

> *ಶ್ರೀರಾಮಚಂದ್ರನ ಹೆಸರಿನಲ್ಲಿ ಹತ್ತು ವರ್ಷ 'ರಾಜಕೀಯ ಚಳವಳಿ' ನಡೆಸಿ ಈಗ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿರುವ ಸರ್ಕಾರದ ಮೂಲಾಶಯಗಳು ಎಂದೂ ಗುಪ್ತವಾಗಿರಲಿಲ್ಲ, ಈಗಲೂ ಇಲ್ಲ. ರಾಮನಾಮದ ಸಾರ್ಥಕ್ಯವನ್ನು ಪಡೆದ ಮೇಲೆ, ಜನಸಾಮಾನ್ಯರ ಆಕಾಂಕ್ಷೆಗಳ ಈಡೇರಿಕೆಗೆ ನಮ್ಮ ಹಾಳು ಸಂವಿಧಾನವೇ ಕಾರಣ, ಅದನ್ನು ಬದಲಿಸಿದರೆ ಸ್ವರ್ಗಕ್ಕೆ ಸೋಪಾನ ರಚಿತವಾಗುತ್ತದೆ, ಎಂಬ ಕೂಗು ಪ್ರಬಲವಾಗಿದೆ. ಅಧ್ಯಕ್ಷೀಯ ಮಾದರಿ ಸರ್ಕಾರ, ಎರಡೇ ಪಕ್ಷಗಳ ವ್ಯವಸ್ಥೆ ಎಂಬುವಲ್ಲದೆ ಇನ್ನೂ ಆಳವಾದ ಕೆಲವು ಮರ್ಮಗಳು ಮುಚ್ಚಿಹೋಗಿಲ್ಲ. ಅವುಗಳ ಬಗ್ಗೆ ಒಂದು ವಿಶ್ಲೇಷಣೆ ಇಲ್ಲಿದೆ.*

ಸಂತ ಸಮಿತಿಯ ಕಿರುಪುಸ್ತಕ ರಾಷ್ಟ್ರಧ್ವಜ ಮತ್ತು ರಾಷ್ಟ್ರಗೀತೆಯನ್ನು ಧಿಕ್ಕರಿಸುತ್ತದೆ. ''ರಾಷ್ಟ್ರಧ್ವಜ ಎಂದು ಕರೆಯಲಾದ ಧ್ವಜದಲ್ಲಿ ಅಶೋಕ ಚಕ್ರವಿದೆ. ಆದ್ದರಿಂದ ಅದು ಸಾಮ್ರಾಜ್ಯವಾದದ ಸಂಕೇತವಾಗಿದೆ'' (ಪು. ೫೦) ಎಂಬುದು ಮುಕ್ತಾನಂದರ ವಿತಂಡವಾದವಾಗಿದೆ. ಅಶೋಕನ ಕಾಲದ 'ಧರ್ಮ ಚಕ್ರ'ವು ಬೌದ್ಧ ಧರ್ಮದ ಮೌಲ್ಯಗಳಾದ ಪ್ರೇಮ, ಸಮಾನತೆ ಮತ್ತು ಸೋದರ ಭಾವಗಳ ಸಂಕೇತವಾಗಿದ್ದು ಹಿಂದುತ್ವವಾದಿಗಳು ಆ ಮೌಲ್ಯಗಳಿಗೆ ವಿರೋಧಿಗಳಾಗಿರುವುದೇ ಸಂತ ಮುಕ್ತಾನಂದರ ಈ ಧೋರಣೆಗೆ ಕಾರಣವಾಗಿರುವಂತೆ ತೋರುತ್ತದೆ. ಕೊಳೆತು ನಾರುತ್ತಿದ್ದ ಹಿಂದೂ ಧರ್ಮವನ್ನು ಹಿಂದಕ್ಕೆ ಸರಿಸಿ ದೇಶ ವಿದೇಶಗಳಲ್ಲಿ ಮನ್ನಣೆ ಪಡೆದ ಬೌದ್ಧ ಧರ್ಮದ ಬಗ್ಗೆ ಹಿಂದುತ್ವವಾದಿಗಳ ಅಸಹನೆ ಇದರಿಂದ ವ್ಯಕ್ತವಾಗುತ್ತದೆ.

ಒಂದು ಕಡೆ ಮುಕ್ತಾನಂದರು ನಮ್ಮ ಸಂವಿಧಾನದಲ್ಲಿ ಸಮಾನ ನಾಗರಿಕ ಸಂಹಿತೆಯನ್ನು ಕಡ್ಡಾಯಗೊಳಿಸಿಲ್ಲ ಎಂದು ಟೀಕಿಸುತ್ತಾ ''ಪ್ರತಿಯೊಬ್ಬರಿಗೂ ಸಮಾನ ಕಾನೂನು ಇರಬೇಕೆಂದು'' ಹೇಳುತ್ತಾರೆ. ಮರುಗಳಿಗೆಯೇ ಅದಕ್ಕೆ ವಿರುದ್ಧವಾಗಿ ''ಸರ್ಕಾರವು ಧಾರ್ಮಿಕ, ವೈಯಕ್ತಿಕ ವಿಚಾರಗಳಲ್ಲಿ ತಲೆ ಹಾಕಬಾರದು, ಮದುವೆಗೆ ಸಂಬಂಧಿಸಿದ ಕಾನೂನುಗಳು ಇರಕೂಡದು'' ಎಂದೂ (೧೯೯೩ರ ಜನವರಿ ೨೯ರ 'ಫ್ರಂಟ್‌ಲೈನ್' ಸಂದರ್ಶನದಲ್ಲಿ) ಘೋಷಿಸಿದ್ದಾರೆ.

ಸರ್ಕಾರವು ಮದುವೆ ಮತ್ತು ವೈಯಕ್ತಿಕ ವಿಷಯಗಳಿಗೆ ಸಂಬಂಧಿಸಿದ ಕಾನೂನುಗಳನ್ನು ಜಾರಿಗೆ ತರುವುದು ಹೇಗೆ ಸಾಧ್ಯ ? ಏಕೆಂದರೆ ಸಮಾನ ನಾಗರಿಕ ಕಾನೂನು ಮುಖ್ಯವಾಗಿ ಕುಟುಂಬ ಮತ್ತು ಮದುವೆಗೆ ಸಂಬಂಧಿಸಿದ ನಿಯಮಗಳನ್ನು ಕುರಿತದ್ದಾಗಿರುತ್ತದೆ. ಮುಕ್ತಾನಂದ ರಂಥವರು ಅಧಿಕಾರಕ್ಕೆ ಬಂದುದಾದರೆ ಅಮಾನವೀಯವಾದ ಅಸ್ಪೃಶ್ಯತೆ, ಸತಿಸಹಗಮನ, ಬಾಲ್ಯ ವಿವಾಹಗಳು ನಿರಾತಂಕವಾಗಿ ಮುಂದುವರೆಯುತ್ತವೆ. ಇಂದಿನ ಸಂವಿಧಾನ ಇಂತಹ ಪಾಶವೀ ಸಂಪ್ರದಾಯಗಳನ್ನು ನಿಷೇಧಿಸಿದೆ. ಈ ಕಾರಣಕ್ಕಾಗಿಯೇ ಇರಬೇಕು ಮುಕ್ತಾನಂದರು ಭಾರತೀಯ ಸಂವಿಧಾನವನ್ನು ಅಧಾರ್ಮಿಕ ಎಂದು ಕರೆದಿರುವುದು.

ಹಿಂದು ಧಾರ್ಮಿಕ, ಕೌಟುಂಬಿಕ ಸಂಪ್ರದಾಯದಲ್ಲಿ ಸರ್ಕಾರ ಮಧ್ಯಪ್ರವೇಶ ಮಾಡಬಾರದು ಎಂದು ಹೇಳುವ ಮುಕ್ತಾನಂದರು ಮುಸ್ಲಿಂ ವೈಯಕ್ತಿಕ ಕಾನೂನು ಮುಸ್ಲಿಂರನ್ನು ಸಂತೃಪ್ತಿಗೊಳಿಸುವ ತಂತ್ರ ಎಂದು ಟೀಕಿಸುತ್ತಾರೆ. ಮನುಸ್ಮೃತಿಯ ಆಧಾರದ ಮೇಲೆ ಹಿಂದು ಕಾನೂನುಗಳು ರಚನೆಯಾಗಬೇಕು ಎಂದು ಹೇಳುತ್ತಾರೆ. ಹಿಂದುಗಳಿಗೆ ಮನುಸ್ಮೃತಿಯ ಕಾನೂನುಗಳನ್ನು ಅನ್ವಯಿಸುವ ಅವಕಾಶ ನೀಡುವುದಾದರೆ ಮುಸ್ಲಿಂರು

ತಮ್ಮ ವೈಯಕ್ತಿಕ ಕಾನೂನುಗಳನ್ನು ಅನುಸರಿಸಲು ಮುಕ್ತಾನಂದರು ಅಡ್ಡಿಯಾಗುವುದಿಲ್ಲ.

ಬಿ.ಜೆ.ಪಿ.ಯ ಉಪಾಧ್ಯಕ್ಷರಾದ ಕೆ. ಆರ್. ಮಲ್ಕಾನಿ ತಮ್ಮ '' ಆರ್. ಎಸ್. ಎಸ್. ನ ಕಥೆ'' ಎಂಬ ಗ್ರಂಥದಲ್ಲಿ ''ಹಿಂದು ಕಾನೂನು ಪ್ರಾಚೀನ ಮನುಸ್ಮೃತಿಯೊಡನೆ ತನಗಿರುವ ಸಂಬಂಧದ ಕೊಂಡಿಗಳನ್ನು ಕಳಚಿಕೊಳ್ಳಲು ಯಾವ ಕಾರಣವೂ ಇಲ್ಲ ಎಂದು ಗುರೂಜಿ ಗೋಲ್ವಾಲ್ಕರರು ಅಭಿಪ್ರಾಯಪಡುತ್ತಾರೆ'' ಎಂದು ದಾಖಲಿಸುತ್ತಾರೆ.

ಇದರಿಂದ ಸಂವಿಧಾನವನ್ನು ನಾಶಗೊಳಿಸುವ ಸಂಘ ಪರಿವಾರದ ಹೆಬ್ಬಯಕೆಯ ಹಿಂದೆ ಅದರ ಸ್ಥಾನದಲ್ಲಿ ಮನುಸ್ಮೃತಿಯನ್ನು ಪ್ರತಿಷ್ಠಾಪಿಸುವ ಕನಸು ಸಹ ಗುಪ್ತಗಾಮಿನಿಯಾಗಿ ಕೆಲಸ ಮಾಡುತ್ತಿರುವಂತಿದೆ. ಮನುಸ್ಮೃತಿಯು ಶ್ರೇಣೀಕೃತ ಅಸಮಾನತೆಯ ವರ್ಣ ವ್ಯವಸ್ಥೆಯನ್ನು ಪವಿತ್ರವೆಂದು ಸಾರುತ್ತದೆ. ಅದು ಶೂದ್ರರು, ಸ್ತ್ರೀಯರು, ದಲಿತರು ಮತ್ತು ಮುಕ್ತ ಚಿಂತಕರನ್ನು ಅಮಾನವೀಯವಾಗಿ ತುಳಿತಕ್ಕೀಡು ಮಾಡುತ್ತದೆ. ಅದು ವರ್ಣವ್ಯವಸ್ಥೆಯ ಮೇಲ್ತುದಿಯಲ್ಲಿರುವ ಶೇ. ೧೦ರಷ್ಟು ಜನರು ಉಳಿದ ಶೇ. ೯೦ರಷ್ಟು ಭಾರತೀಯರನ್ನು ತಮ್ಮ ದಾಸಾನುದಾಸರನ್ನಾಗಿ ಮಾಡಿಕೊಳ್ಳಲು ಕಾರಣವಾಗಿದೆ. ಮನುಸ್ಮೃತಿಯು ಪ್ರತಿಪಾದಿಸುವ ಸಾಮಾಜಿಕ ವ್ಯವಸ್ಥೆ ಆಧುನಿಕ ಭಾರತೀಯರ ನ್ಯಾಯಪ್ರಜ್ಞೆಗೆ ಅಸಹ್ಯವಾಗಿದೆ.

ಗೋಲ್ವಾಲ್ಕರರ ನಿರ್ಗಮನದ ನಂತರ ಮನುಸ್ಮೃತಿಯ ಬಗ್ಗೆ ಆಸಕ್ತಿ ಉಡುಗಿಹೋಗಿದೆ ಎಂದು ಹಲವರು ಭಾವಿಸಿದ್ದರು. ಆದರೆ ಕೆಲವು ವರ್ಷಗಳ ಹಿಂದೆ ಹಿಮಾಚಲ ಪ್ರದೇಶದ ಭಾಜಪ ಸರ್ಕಾರ ಮನಾಲಿಯಲ್ಲಿರುವ ಮನು ದೇವಾಲಯದ ಜೀರ್ಣೋದ್ಧಾರಕ್ಕಾಗಿ ಕೋಟ್ಯಾಂತರ ರೂಪಾಯಿ ದುಂದುವೆಚ್ಚ ಮಾಡಿದುದನ್ನು ನೋಡಿದರೆ ಮನುವಿನ ಪುನರಾಗಮನಕ್ಕಾಗಿ ಪೂಜೆ ಸಲ್ಲಿಸುವ ಜನರೂ ನಮ್ಮ ನಡುವೆ ಇದ್ದಾರೆ ಎಂಬುದು ಸ್ಪಷ್ಟವಾಗುತ್ತದೆ.

ಆರೆಸ್ಸೆಸ್‌ನ ಸಾಪ್ತಾಹಿಕ 'ಆರ್ಗನೈಜರ್' (ಮೇ ೧೦, ೧೯೯೨)ನ ಒಂದು ವರದಿಯ ಶೀರ್ಷಿಕೆ ಈ ರೀತಿ ಇದೆ: ''ಹಿಂದುಗಳ ವಿರುದ್ಧದ ತಾರತಮ್ಯವನ್ನು ನಿವಾರಿಸಿ ಭಾರತವನ್ನು ಹಿಂದುಗಳ ಮಾತೃಭೂಮಿ ಎಂದು ಸ್ಥಾಪಿಸುವ ಸಲುವಾಗಿ ಸಂವಿಧಾನವನ್ನು ಪುನರ್ರಚಿಸಲು ಹಿಂದು ನ್ಯಾಯವಾದಿಗಳ ಒತ್ತಾಯ.''

ಅದರಲ್ಲಿ ಹೀಗೆ ವರದಿ ಮಾಡಲಾಗಿದೆ : ''ಏಪ್ರಿಲ್ ೧೮ ಮತ್ತು ೧೯ರಂದು ಮಧುರೈಯಲ್ಲಿ ನಡೆದ ಹಿಂದು ನ್ಯಾಯವಾದಿಗಳ ಎರಡನೆ ರಾಜ್ಯ ಸಮ್ಮೇಳನ ಸಂವಿಧಾನದ ಮರು ಕರಡನ್ನು ಸಿದ್ಧಪಡಿಸಲು ಮತ್ತು ಪುನರ್ರಚಿಸಲು ಒತ್ತಾಯಿಸಿತು.... ಉತ್ತರ ಪ್ರದೇಶದ ಅಡ್ವೊಕೇಟ್ ಜನರಲ್ ಆದ ವಿ. ಕೆ. ಎನ್. ಚೌಧರಿ ಅವರು ತಮ್ಮ ಪ್ರಾಸ್ತಾವಿಕ ಭಾಷಣದಲ್ಲಿ ಮನುಸ್ಮೃತಿ ಎಲ್ಲರಿಗೂ ನ್ಯಾಯವನ್ನು ನೀಡಿತು. ಮನು ಸಕಲ ಮಾನವ ಜನಾಂಗದ ಅಗತ್ಯಗಳನ್ನು ಗಮನಕ್ಕೆ ತೆಗೆದುಕೊಂಡು ತನ್ನ



ಸಿದ್ದಣ್ಣಾ, ನಿನ್ನ ಪಾಡನ್ನ ನೋಡೋಕಾಗ್ತಾ ಇಲ್ಲ. ಅದ್ಕೇ ಅಲ್ವೇ ನಮ್ಮ ಸಂವಿಧಾನಾನ ಪರಿಷ್ಕರಿಸಬೇಕು ಅಂತ ನಾವು ಹೇಳ್ತಾ ಇರೋದು! ಸ್ವಲ್ಪ ಅರ್ಥ ಮಡ್ಕೋ ಸಿದ್ದಣ್ಣ!

ಸಂಹಿತೆಯನ್ನು ರೂಪಿಸಿದ. ಮನುಸ್ಮೃತಿಯು ಎಲ್ಲ ಕಾಲಗಳಿಗೆ ಮತ್ತು ಎಲ್ಲ ಜನರಿಗೆ ಅನ್ವಯಿಸುತ್ತದೆ ಎಂದು ಪ್ರತಿಪಾದಿಸಿದರು.''

ಹಿಂದುತ್ವವಾದಿಗಳ ಸಂದೇಶ ಸ್ಪಷ್ಟವಿದೆ: ''ಈಗಿನ ಸಂವಿಧಾನವನ್ನು ಕಿತ್ತು ಹಾಕಬೇಕು ಮತ್ತು ಅದರ ಸ್ಥಾನದಲ್ಲಿ ಮನುಸ್ಮೃತಿಯನ್ನು ಸ್ಥಾಪಿಸಬೇಕು.'' ಸಂಘ ಪರಿವಾರವು ಈ ಕಾಲಘಟ್ಟದಲ್ಲಿ ತನ್ನ ಮೂಲೋದ್ದೇಶವನ್ನು ವಿಶದಪಡಿಸಲು ತಯಾರಿಲ್ಲ. ಹಾಗೆ ಮಾಡಿದರೆ ಭಾರತದ ಜನಸಂಖ್ಯೆಯ ಶೇ. ೯೦ರಷ್ಟು ಮಂದಿ, ಮನುವಿನಿಂದ ಶೋಚನೀಯವಾದ ರೀತಿಯಲ್ಲಿ ದಮನಕ್ಕೀಡಾದವರು, ಆರೆಸ್ಸೆಸ್‌ನ ಇಂಗಿತವನ್ನು ಅರಿತು ಅವರಿಗೆ ತಿರುಗಿ ಬೀಳುತ್ತಾರೆ. ಆದ್ದರಿಂದ ಅವರ ದುಃಸ್ಥಿತಿಗೆ ಈಗಿನ ಸಂವಿಧಾನವೇ ಕಾರಣ ಎಂದು ಹೇಳಿ ಅವರನ್ನು ತಮ್ಮ ಬಲೆಯಲ್ಲಿ ಬೀಳಿಸಿಕೊಳ್ಳುವ ಸನ್ನಾಹ ನಡೆಸಿದ್ದಾರೆ. ಮುಕ್ತಾನಂದರ ಕಿರುಪುಸ್ತಕ ಅನೇಕ ಸುಳ್ಳುಗಳನ್ನು, ಅರ್ಧ ಸತ್ಯಗಳನ್ನು ಬಣ್ಣ ಕಟ್ಟಿ ವರ್ಣಿಸಿದೆ. ಅದರಲ್ಲಿ ಎಲ್ಲಿಯೂ ತಮ್ಮ ಕಲ್ಪನೆಯ ಸಂವಿಧಾನದ ವಿವರಗಳನ್ನು ನೀಡದೆ ಸಮಾಜವಾದಿ, ಪ್ರಗತಿಪರ ಇತ್ಯಾದಿ ಪದ ಪ್ರಯೋಗಗಳನ್ನು ಎಚ್ಚರಿಕೆಯಿಂದ ಬಳಸಲಾಗಿದೆ.

ಹಿಂದುತ್ವವಾದಿಗಳು ಪ್ರಜಾಪ್ರಭುತ್ವದ ತತ್ವಗಳಿಗೆ ಸಂಪೂರ್ಣ ವಿರೋಧಿಗಳಾಗಿದ್ದಾರೆ. ಜನಸಾಮಾನ್ಯರಿಂದ ಆರಿಸಿ ಬಂದ ಸರ್ಕಾರಗಳು ಮಾಡಿದ ಶಾಸನಗಳಿಗೆ ಅವರು ಬದ್ಧ ವಿರೋಧಿಗಳು. ಅವರ ಪ್ರಕಾರ ಶಾಸನಗಳನ್ನು ಬ್ರಾಹ್ಮಣ ಸಂತರು ಮಾತ್ರ ಮಾಡಲು ಸಾಧ್ಯ. 'ಪಯೋನೀರ್'(ಡಿಸೆಂಬರ್೪, ೯೨)ನಲ್ಲಿ ಹೇಳಿರುವಂತೆ ವಿಶ್ವ ಹಿಂದು ಪರಿಷತ್ತಿನ ಪ್ರಧಾನ ಕಾರ್ಯದರ್ಶಿ ಅಶೋಕ ಸಿಂಘಾಲ್‌ರ ಅಭಿಪ್ರಾಯ ಹೀಗಿದೆ: ''ನಮ್ಮ ಧರ್ಮಾಚಾರ್ಯರು ಯಾವುದನ್ನು ಧರ್ಮ ಎಂದು ಉಚ್ಚರಿಸುವರೋ ಅದನ್ನು ನಾವು ಕಾನೂನಾಗಿ ಪರಿಗಣಿಸುತ್ತೇವೆ.'' ಶಂಕರಾಚಾರ್ಯರುಗಳನ್ನು ಪ್ರಮುಖ ಧರ್ಮಾಚಾರ್ಯರೆಂದು ಭಾವಿಸಲಾಗಿದೆ. ಪುರಿ ಶಂಕರಾಚಾರ್ಯರು ಜಾತಿಪದ್ಧತಿ, ಅಸ್ಪೃಶ್ಯತೆ, ಸತಿ ಸಹಗಮನಗಳು ಧರ್ಮದ ಅವಿಭಾಜ್ಯ ಅಂಗಗಳು ಎಂದು ಘೋಷಿಸಿದ್ದಾರೆ. ಅಂದರೆ ಸಿಂಘಾಲರ ಭವಿಷ್ಯತ್ತಿನ ಹಿಂದು ರಾಷ್ಟ್ರದಲ್ಲಿ ಈ ಅಮಾನವೀಯ ಪದ್ಧತಿಗಳನ್ನು ಪುನಃ ಜಾರಿಗೆ ತರಲಾಗುವುದು ಎಂದು ಸ್ಪಷ್ಟವಾಗುತ್ತದೆ. ಕಂಚಿ ಕಾಮಕೋಟಿ ಪೀಠದ ಪರಮಾಚಾರ್ಯರು ಹಿಂದು ಧರ್ಮದ ಮೂಲಭೂತ ಕೃತಿಯಾದ ಮನುಸ್ಮೃತಿಯ ಭದ್ರ ಬುನಾದಿಯ ಮೇಲೆ ಆದರ್ಶ ಹಿಂದು ರಾಷ್ಟ್ರ ಕಟ್ಟಲ್ಪಡಬೇಕು ಎಂದು ಘೋಷಿಸಿದ್ದಾರೆ.

ಕಂಚಿಯ ಪರಮಾಚಾರ್ಯರು ಭವನ್ಸ್ ಜರ್ನಲ್ (ನವಂಬರ್ ೩೦, ೮೯)ನಲ್ಲಿ ಗತಕಾಲದ ಧಾರ್ಮಿಕ ವ್ಯವಸ್ಥೆಯನ್ನು ಮೆಲಕು ಹಾಕುತ್ತಾ ಹೀಗೆ ಹೇಳುತ್ತಾರೆ: ''ಪ್ರಾಚೀನ ಕಾಲದ ವೈಶಿಷ್ಟ್ಯವೇನೆಂದರೆ ನಮ್ಮ ಎಲ್ಲ ಆಡಳಿತಕ್ಕೆ ಧರ್ಮಶಾಸ್ತ್ರ ಆಧಾರವಾಗಿ ಕೆಲಸ ನಿರ್ವಹಿಸುತ್ತಿತ್ತು. ಅದು ಇಡೀ ದೇಶಕ್ಕೆ ಅನ್ವಯವಾಗುವ ಸಂವಿಧಾನವಾಗಿತ್ತು. ಧರ್ಮಶಾಸ್ತ್ರಗಳೆಲ್ಲಾ ಮನುಧರ್ಮ ಶಾಸ್ತ್ರ ಪ್ರಾಚೀನ ರಾಜರುಗಳಿಗೆ ನಿರ್ದಿಷ್ಟ ಮತ್ತು ಸ್ಪಷ್ಟ ಮಾರ್ಗದರ್ಶನ ನೀಡುತ್ತಿತ್ತು. ನಿಸ್ವಾರ್ಥಿಗಳು ಋಷಿ ಮುನಿಗಳಿಂದ ಪ್ರತಿಪಾದಿಸಲಾದ ಧರ್ಮಶಾಸ್ತ್ರಗಳ ಸಾರವನ್ನು ಕ್ರೋಢೀಕರಿಸಿರುವ ಮನುಧರ್ಮಶಾಸ್ತ್ರದ ವಿಧಿ ನಿಯಮಗಳನ್ನು ಯಾವ ರಾಜನೂ ಮಾರ್ಪಡಿಸಲು ಯತ್ನಿಸಲಿಲ್ಲ. ಆ ನಿಯಮಗಳಿಗೆ ತಿದ್ದುಪಡಿಗಳ ಪ್ರಶ್ನೆಯೇ ಇಲ್ಲ.'' (ಪು. ೨೬)

ಕಂಚಿ ಪರಮಾಚಾರ್ಯರು ಇಂದಿಗೂ ಮನುಸ್ಮೃತಿ ಅನುಸರಣೆಗೆ ಯೋಗ್ಯವಾಗಿದೆ ಎಂದು ಭಾವಿಸುತ್ತಾರೆ. ''ಕಾಲಕ್ಕೆ ತಕ್ಕಂತೆ ನಮ್ಮ ಜೀವನ ವಿಧಾನ ಪರಿಷ್ಕಾರ ಹೊಂದಬೇಕು'' (ಪು.೩೩) ಎಂಬ ಆಧುನಿಕರ ವಾದವನ್ನು ಅವರು ತೀವ್ರವಾಗಿ ಖಂಡಿಸುತ್ತಾರೆ.

ಮತದಾನದ ಹಕ್ಕು ಕೇವಲ ಮೇಲುವರ್ಗದವರಿಗೆ ಮಾತ್ರ ಇರಬೇಕು ಎನ್ನುವ ಪರಮಾಚಾರ್ಯರು ಪ್ರಜಾಪ್ರಭುತ್ವವನ್ನು ತೀವ್ರವಾಗಿ ವಿರೋಧಿಸುತ್ತಾರೆ.

''ಸ್ವಲ್ಪವಾದರೂ ವಿದ್ಯೆ, ಆಸ್ತಿಪಾಸ್ತಿ ಮತ್ತು ರಾಜಕೀಯ ವಿದ್ಯಮಾನಗಳನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯ ಹೊಂದಿರುವವರು ಮಾತ್ರ ಮತದಾನದ ಹಕ್ಕು ಹೊಂದಿರಬೇಕು. ಅಂಥವರಿಂದ ಮಾತ್ರ ಪ್ರತಿನಿಧಿಗಳು ಚುನಾಯಿತರಾಗಬೇಕು.'' (ಅದೇ, ಪುಟ. ೨೨)

ಕೇವಲ ಶ್ರೀಮಂತರು, ಮೇಲ್ಜಾತಿಯವರು ಮಾತ್ರ ಮತದಾರರಾಗಲು ತಕ್ಕವರು ಎಂಬುದು ಮೇಲಿನ ಮಾತಿನಿಂದ ಸ್ಪಷ್ಟವಾಗುತ್ತದೆ.

ಅದೇ ರೀತಿ ಅವರ ಆಡಳಿತ ವ್ಯವಸ್ಥೆಯಲ್ಲಿ ಯಾರು ಬೇಕಾದರೂ ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕು ಹೊಂದಿರುವುದಿಲ್ಲ. ಅವರ ಪ್ರಕಾರ ಅಭ್ಯರ್ಥಿಗಳು ನಾಲ್ಕು ಅರ್ಹತೆಗಳನ್ನು ಹೊಂದಿರಬೇಕು. ಅವರು ಭೂಮಾಲೀಕರಾಗಿ ಸರ್ಕಾರಕ್ಕೆ ಕಂದಾಯ ಸಲ್ಲಿಸುವ ಸ್ಥಿತಿಯಲ್ಲಿರಬೇಕು, ವಾಸಕ್ಕೆ ಸ್ವಂತ ಮನೆಯನ್ನು ಹೊಂದಿರಬೇಕು, ೩೦ರಿಂದ

೬೦ರ ವಯಸ್ಸಿನೊಳಗಿ ರಬೇಕು ಮತ್ತು ಮುಖ್ಯವಾಗಿ ಧರ್ಮಶಾಸ್ತ್ರದಲ್ಲಿ ಸಾಕಷ್ಟು ಜ್ಞಾನ ಪಡೆದಿರಬೇಕು. ಮೊದಲ ಎರಡು ಅರ್ಹತೆಗಳು ಬಡವರನ್ನು ಚುನಾವಣೆಯ ಕಣದಿಂದ ಹೊರಗೆ ಅಟ್ಟಿದರೆ, ಕೊನೆಯ ಅರ್ಹತೆ ಬ್ರಾಹ್ಮಣರಿಗೆ ಮಾತ್ರ ಚುನಾವಣೆಯಲ್ಲಿ ಸ್ಪರ್ಧಿಸುವ ಅವಕಾಶ ನೀಡುತ್ತದೆ. ಏಕೆಂದರೆ ಶಾಸ್ತ್ರಗಳ ಪ್ರಕಾರ ಬ್ರಾಹ್ಮಣರು ಮಾತ್ರ ಧರ್ಮಗ್ರಂಥಗಳ ಅಧ್ಯಯನಕ್ಕೆ ಪಾತ್ರರು. ಹೇಗಿದೆ ಪರಮಾಚಾರ್ಯರ ರಾಜನೀತಿ ?

ಮುಕ್ತಾನಂದರು ಸಹ ಪ್ರಜಾಪ್ರಭುತ್ವವನ್ನು ವಿರೋಧಿಸುವುದರಲ್ಲಿ ಹಿಂದೆ ಬೀಳುವುದಿಲ್ಲ: ''ಪ್ರಜಾಪ್ರತಿನಿಧಿಗಳಿಂದ ಕಾನೂನುಗಳನ್ನು ರಚಿಸುವ ವಿಧಾನ ಭಾರತದಂತಹ ಬಡದೇಶಕ್ಕೆ ತುಂಬಾ ದುಬಾರಿ ಮತ್ತು ಶ್ರಮದಾಯಕವಾದುದು'' (ಪು.೧೪) ಎಂದು ಅವರು ಹೇಳುತ್ತಾರೆ. ಪ್ರಜಾಪ್ರಭುತ್ವ ವಿರೋಧಿ ಅಭಿಪ್ರಾಯವನ್ನು ಅವರು ಇನ್ನೂ ಮರೆಮಾಚುವ ಹಂತದಲ್ಲಿದ್ದಾರೆ. ಪ್ರಜಾಪ್ರಭುತ್ವ ಪದ್ಧತಿ ಎಲ್ಲಾ ಭ್ರಷ್ಟಾಚಾರಕ್ಕೆ ಕಾರಣ ಎಂದು ಹೇಳಿ ಅವರು ಜನಸಾಮಾನ್ಯರನ್ನು ತಮ್ಮತ್ತ ಸೆಳೆದುಕೊಳ್ಳಲು ಹವಣಿಸುತ್ತಾರೆ.

ಅವರ ದೃಷ್ಟಿಯಲ್ಲಿ ಭಾರತ ಸಂವಿಧಾನವೇ ಅಧಾರ್ಮಿಕ. ಹಿಂದು ಪರಿವಾರದ ಈ ಎಲ್ಲ ಚಟುವಟಿಕೆಗಳು ಮತಾಂಧರ ಹುಚ್ಚಾಟಗಳೆಂದು ಪ್ರಜ್ಞಾವಂತರು ಅಲಕ್ಷಿಸುವಂತಿಲ್ಲ. ಏಕೆಂದರೆ ಕಟ್ಟುಕಥೆಗಳನ್ನು ಮತ್ತು ಅರ್ಧ ಸತ್ಯಗಳನ್ನು ಅವರು ತಮ್ಮ ಅನುಕೂಲಕ್ಕೆ ತಕ್ಕಂತೆ ಬಳಸಿಕೊಳ್ಳಬಲ್ಲರು. ಎಲ್ಲಾ ಅಮಲಿಗಿಂತ ಧರ್ಮದ ಅಮಲು ಹೆಚ್ಚು ಪರಿಣಾಮಕಾರಿ. ಧರ್ಮಗ್ರಂಥಗಳ ಒಳಗೇನಿದೆ ಎಂದು ಅವರು ವಿವರಿಸಿ ಹೇಳುವುದಿಲ್ಲ, ಆದ್ದರಿಂದ ಮುಗ್ಧ ಜನರು ಇರುಳು ಕಂಡ ಬಾವಿಯಲ್ಲಿ ಹಗಲು ಬೀಳುವ ಸಂಭವವಿದೆ.

ಭಾರತೀಯ ಪ್ರಜೆಗಳು ಅದರಲ್ಲೂ ಸ್ತ್ರೀಯರು, ಶೂದ್ರರು, ದಲಿತರು ಮತ್ತು ಬುಡಕಟ್ಟು ಜನರು ಅಂದರೆ ಹಿಂದು ಸಮಾಜದ ಶೇ. ೯೦ರಷ್ಟು ಜನರು ಮನುಸ್ಮೃತಿ ಅಥವಾ ಭಾರತ ಸಂವಿಧಾನ, ಈ ಎರಡರಲ್ಲಿ ಒಂದನ್ನು ಆಯ್ಕೆ ಮಾಡಿಕೊಳ್ಳಬೇಕಾಗಿದೆ. ಆ ಎರಡು ಕೃತಿಗಳೊಳಗೆ ಏನು ಅಡಗಿದೆ ಎಂಬುದನ್ನು ಜನಸಾಮಾನ್ಯರಿಗೆ ವಿವರಿಸಿ ಹೇಳುವ ಹೊಣೆ ಪ್ರಜಾಪ್ರಭುತ್ವವಾದಿ ನಾಯಕರ ಮತ್ತು ಪ್ರಜ್ಞಾವಂತರ ಮೂಲಭೂತ ಕರ್ತವ್ಯವಾಗಿದೆ. (ಆವರಣದೊಳಗೆ ನೋಡಿ)

ರಾಷ್ಟ್ರೀಯ ಮಾನವ ಹಕ್ಕುಗಳ ಆಯೋಗದ ಅಧ್ಯಕ್ಷರು ಹಾಗೂ ಸರ್ವೋಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶರೂ ಆಗಿದ್ದ ಎಂ. ಎನ್. ವೆಂಕಟಾಚಲಯ್ಯ ಅವರನ್ನು ಇಂದಿನ ಸಂವಿಧಾನ ಪರಾಮರ್ಶೆ ಆಯೋಗದ ಅಧ್ಯಕ್ಷರನ್ನಾಗಿ ಆಯ್ಕೆ ಮಾಡಿಕೊಳ್ಳಲಾಗಿದೆ. ಅವರು ನಿವೃತ್ತರಾದ ಒಂದು ವಾರದೊಳಗೆ (ಅಕ್ಟೋಬರ್ ೩೧, ೯೪) ಪಿ.ಟಿ.ಐ.ಗೆ ನೀಡಿದ ಸಂದರ್ಶನದಲ್ಲಿ ಅವರ ನಿಜ ಬಣ್ಣವೇನೆಂಬುದು ಬಯಲಾಗಿದೆ: ''ನನ್ನ ಅಭಿಪ್ರಾಯದಲ್ಲಿ ಧರ್ಮನಿರಪೇಕ್ಷೆ (secularism) ಎಂದರೆ ಬಹುಸಂಖ್ಯಾಕರ ವಿರೋಧಿಯಾಗಿರುವುದಲ್ಲ.'' ಅವರ ಅಂತರಂಗದ ತುಡಿತವೇನು ಎಂಬುದನ್ನು ಇದಕ್ಕಿಂತ ಚೆನ್ನಾಗಿ ಇನ್ನೇನೂ ಹೇಳಲಾರದು. ಸಂಘ ಪರಿವಾರವು secularismನ್ನು ಮರು ನಿರ್ವಚಿಸಲು ತೊಡಗಿರುವುದರ ಹುನ್ನಾರ ಇದರಲ್ಲಿ ಅಡಗಿದೆ.

ಅವರು ತಮ್ಮ ಅಯೋಧ್ಯಾ ತೀರ್ಪನ್ನು ಪತ್ರಿಕಾ ಸಂದರ್ಶನದಲ್ಲಿ ಸಮರ್ಥಿಸಿಕೊಂಡ ರೀತಿಯನ್ನು ನೋಡಬಹುದು. ಒಂದು ನಿರ್ದಿಷ್ಟ ಸಂದರ್ಭದಲ್ಲಿ ಅವರು ತಮ್ಮನ್ನು ಸಮರ್ಥಿಸಿಕೊಂಡ ಬಗೆಯನ್ನು ಪಿ.ಟಿ.ಐ. ಹೀಗೆ ವರದಿ ಮಾಡಿದೆ: ''ಬಾಬ್ರಿ ಮಸೀದಿಯನ್ನು ನೆಲಸಮ ಮಾಡಿದ ನಂತರ ತಾತ್ಕಾಲಿಕ ದೇವಾಲಯವನ್ನು ಸ್ಥಾಪಿಸಿದ ಸ್ಥಳದಲ್ಲಿ ಜನವರಿ ೧೯,೧೯೯೩ರಿಂದ ಪರಿಮಿತ ಪೂಜೆ ನಡೆಸುವುದನ್ನು ನಿಲ್ಲಿಸುವುದು ಅಂದರೆ ನೆಲಸಮದ 'ಹೇಯ' ಕೆಲಸದಲ್ಲಿ ಭಾಗಿಗಳಾದ ಬಹುಸಂಖ್ಯಾಕರಾದ ಹಿಂದುಗಳ ವಿವಾದರಹಿತ ಹಕ್ಕುಗಳನ್ನು ನಿರಾಕರಿಸಿದಂತಾಗುತ್ತಿತ್ತು'' ಎಂದಿದ್ದಾರೆ. ಅಂದರೆ ಅಪರಾಧದ ಫಲಗಳನ್ನು ಉಳಿಸಿಕೊಳ್ಳಬೇಕು ಮತ್ತು ಸಂರಕ್ಷಿಸಬೇಕು ಎಂಬುದು ಅವರ ಮಾತಿನ ಇಂಗಿತವಾಗಿದೆ.

ಸರ್ವೋಚ್ಚ ನ್ಯಾಯಾಲಯದ ನವಂಬರ್ ೨೫,

*(ಮುಂದಿನ ಪುಟ ನೋಡಿ)*

### ಭಾರತ ಸಂವಿಧಾನ

- ★ ಭಾರತದ ಪ್ರತಿಯೊಬ್ಬ ಪ್ರಜೆಯೂ ಕಾನೂನಿನ ಪ್ರಕಾರ ಸಮಾನ ಹಾಗೂ ಸಮಾನ ರಕ್ಷಣೆಗೆ ಅರ್ಹ (೧೪)
- ★ ಸರ್ಕಾರವು ಧರ್ಮ, ಜನಾಂಗ, ಜಾತಿ, ಲಿಂಗ, ಹುಟ್ಟಿದ ಸ್ಥಳಗಳ ಆಧಾರದ ಮೇಲೆ ಯಾರನ್ನೂ ತಾರತಮ್ಯ ದೃಷ್ಟಿಯಿಂದ ನೋಡುವುದಿಲ್ಲ (೧೫-೧)
- ★ ಅಸ್ಪೃಶ್ಯತೆಯನ್ನು ನಿಷೇಧಿಸಲಾಗಿದೆ. ಯಾವುದೇ ರೀತಿಯಲ್ಲಿ ಅದರ ಆಚರಣೆಯನ್ನು ತೊಡೆದು ಹಾಕಲಾಗಿದೆ. ಅಸ್ಪೃಶ್ಯತೆ ಆಚರಿಸುವವರನ್ನು ಕಾನೂನು ಪ್ರಕಾರ ಶಿಕ್ಷೆಗೆ ಒಳಪಡಿಸಲಾಗುವುದು (೧೭)
- ★ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ನ್ಯಾಯವನ್ನುಳ್ಳ ಸಮಾಜವನ್ನು ಸ್ಥಾಪಿಸುವುದರ ಮೂಲಕ ಜನರ ಕಲ್ಯಾಣದ ಸಾಧನೆ ಮತ್ತು ರಕ್ಷಣೆಯತ್ತ ಸರ್ಕಾರವು ಶ್ರಮಿಸುತ್ತದೆ (೩೮).
- ★ ಸ್ತ್ರೀ ಪುರುಷರಲ್ಲಿ ಸಮಾನ ಶ್ರಮಕ್ಕೆ ಸಮಾನ ವೇತನ ದೊರೆಯುವಂತೆ ಮಾಡಲಾಗುವುದು (೩೯-೩)
- ★ ಭಾರತದ ಎಲ್ಲ ಪ್ರಜೆಗಳಿಗೆ ಸಮಾನ ನಾಗರಿಕ ಕಾನೂನುಗಳು ಇರುವಂತೆ ಪ್ರಯತ್ನಿಸುವುದು (೪೪)
- ★ ೧೪ ವರ್ಷದ ಎಲ್ಲ ಮಕ್ಕಳಿಗೆ ಉಚಿತ ಮತ್ತು ಕಡ್ಡಾಯ ಶಿಕ್ಷಣ ನೀಡಲು ಪ್ರಯತ್ನಿಸುವುದು (೪೫)
- ★ ದುರ್ಬಲ ವರ್ಗಗಳ ಜನರಿಗೆ ಅದರಲ್ಲೂ ಪರಿಶಿಷ್ಟ ಜಾತಿ ಮತ್ತು ವರ್ಗದವರಿಗೆ ಶೈಕ್ಷಣಿಕ ಮತ್ತು ಆರ್ಥಿಕ ಸೌಲಭ್ಯಗಳನ್ನು ಒದಗಿಸಲು ಪ್ರಯತ್ನಿಸುವುದು (೪೬)
- ★ ಪ್ರಜೆಗಳು-ಸ್ತ್ರೀಯರು ಹಾಗೂ ಪುರುಷರು-ಸಮಾನವಾಗಿ ಜೀವನ ನಡೆಸಲು ಅಗತ್ಯವಾದುದನ್ನು ಗಳಿಸುವ ಹಕ್ಕು ಪಡೆದಿರುತ್ತಾರೆ (೩೯-೧)
- ★ ಜನಹಿತಕ್ಕೆ ಅಗತ್ಯವಾದ ವಸ್ತುಗಳ ಒಡೆತನ ಮತ್ತು ನಿಯಂತ್ರಣವನ್ನು ಜನರ ಅಭ್ಯುದಯಕ್ಕೆ ಬಳಕೆಯಾಗುವಂತೆ ಸಮಾನವಾಗಿ ವಿತರಿಸಲಾಗುವುದು (೩೯-೨)

### ಮನುಸ್ಮೃತಿ

- ★ ಬ್ರಾಹ್ಮಣನಿಗೆ ಆತ್ಮಜ್ಞಾನ, ಕ್ಷತ್ರಿಯನಿಗೆ ರಕ್ಷಣೆ, ವೈಶ್ಯನಿಗೆ ಕೃಷಿ ಮತ್ತು ಶೂದ್ರನಿಗೆ ಸೇವೆಯೇ ತಪಸ್ಸು (೧೧.೨೩೬)
- ★ ಬ್ರಾಹ್ಮಣ ಸೇವೆಯೇ ಶೂದ್ರನಿಗೆ ವಿಶೇಷ ಕರ್ತವ್ಯ. ಅದರಿಂದಲೇ ಅವನಿಗೆ ಸುಖ. ಬೇರಾವುದೂ ಪ್ರಯೋಜನವಿಲ್ಲ (೧೦.೧೨೩)
- ★ ಬ್ರಾಹ್ಮಣರ ಸೇವೆಗೆ ದೇವರು ಶೂದ್ರರನ್ನು ಸೃಷ್ಟಿಮಾಡಿದ್ದಾನೆ. ಆದ್ದರಿಂದ ಅವರನ್ನು ದಾಸರನ್ನಾಗಿ ನೋಡಿಕೊಳ್ಳಬೇಕು (೮.೪೧೩)
- ★ ಒಡೆಯನು ಶೂದ್ರನನ್ನು ಬಿಡುಗಡೆ ಮಾಡಿದರೂ ಅವನು ದಾಸ್ಯತ್ವದಿಂದ ವಿಮುಕ್ತನಾಗುವುದಿಲ್ಲ. ದಾಸ್ಯವು ಅವನಿಗೆ ಹುಟ್ಟಿನಿಂದ ಬಂದಿರುತ್ತದಾದ್ದರಿಂದ ದಾಸ್ಯದಿಂದಲೇ ಅವನಿಗೆ ಪುಣ್ಯ (೮.೪೧೪)
- ★ ಬ್ರಾಹ್ಮಣನು ಯಾವಾಗ ಬೇಕಾದರೂ ಶೂದ್ರನ ಆಸ್ತಿಯನ್ನು ತನ್ನ ವಶಕ್ಕೆ ತೆಗೆದುಕೊಳ್ಳಬಹುದು. ಏಕೆಂದರೆ ಶೂದ್ರನಿಗೆ ಆಸ್ತಿಯ ಮೇಲಿನ ಹಕ್ಕು ಇಲ್ಲ, ಅವನ ಆಸ್ತಿಯ ಹಕ್ಕು ಅವನ ಯಜಮಾನನಿಗೆ ಸೇರುತ್ತದೆ (೮-೮೧೭).
- ★ ಬ್ರಾಹ್ಮಣನು ತಾನು ಉಂಡನಂತರ ಉಳಿದ ಎಂಜಲು ಅನ್ನ, ಹಳೆಯಬಟ್ಟೆ, ಆರಿಸಿದ ಧಾನ್ಯ, ಹಾಸಿಗೆ, ಹೊದಿಕೆಗಳನ್ನು ಶೂದ್ರನಿಗೆ ಕೊಡಬೇಕು (೧೦.೧೨೫)
- ★ ಸ್ತ್ರೀಯನ್ನು ಬಾಲ್ಯದಲ್ಲಿ ತಂದೆ, ಯೌವ್ವನದಲ್ಲಿ ಗಂಡ ಮತ್ತು ಮುಪ್ಪಿನಲ್ಲಿ ಮಕ್ಕಳು ರಕ್ಷಿಸುತ್ತಾರೆ. ಆದುದರಿಂದ ಸ್ತ್ರೀಯರು ಸ್ವಾತಂತ್ರ್ಯಕ್ಕೆ ಅರ್ಹರಲ್ಲ (೯.೩)
- ★ ಸ್ತ್ರೀಯರ ಕಾಮುಕತನವು ಸೌಂದರ್ಯ, ವಯಸ್ಸು ಒಂದನ್ನೂ ಲೆಕ್ಕಿಸುವುದಿಲ್ಲ, ಅವರು ಕುರೂಪಿಗೂ, ಮುದುಕನಿಗೂ, ಹುಡುಗನಿಗೂ ಒಲಿಯುತ್ತಾರೆ. ಶಯನ, ಅಲಂಕಾರ, ಕಾಮ, ಕ್ರೋಧ, ಕಪಟ, ದ್ರೋಹ, ದುರ್ವರ್ತನೆ ಮತ್ತು ಮನೋವಿಕಾರಗಳು ಸ್ತ್ರೀಯರಿಗೆ ಜನ್ಮಸಿದ್ಧಗಳು (೯.೩,೧೪,೧೭)

# ಗೀತಾ ಮುಖರ್ಜಿ



ಆಕೆ ಕಣ್ಣು ಮುಚ್ಚಿ ಮಾತನಾಡಲಾರಂಭಿಸಿದರೆ ಇದೇನು ಶೈಲಿ ಎಂದು ಮೊದಲಿಗೆ ಭಾಸವಾಗುತ್ತಿತ್ತು. ಒಂದೆರಡು ನಿಮಿಷಗಳಲ್ಲಿ ಪ್ರವಾಹವು ಉಕ್ಕಿ ಹರಿದು ಜನರಿಗೆ ಹೊಸ ಹುರುಪು ಉಂಟಾಗುತ್ತಿತ್ತು. ಸಾರ್ವಜನಿಕ ಸಭೆಗಳಲ್ಲಿ ಇದ್ದಂತೆ ಶಾಸನಸಭೆ, ಲೋಕಸಭೆಗಳಲ್ಲೂ ಈಕೆ ಯಾವಾಗಲೂ ವಿಷಯ ಮಂಡನೆಯಲ್ಲಿ ನಿಸ್ಸೀಮಳು. ಅಗತ್ಯವಾದ ಎಲ್ಲಾ ಮಾಹಿತಿಗಳನ್ನು ಸಂಗ್ರಹಿಸಿಕೊಂಡು ಯಾರೂ ನಿರಾಕರಿಸಲಾಗದಂತಹ ವಾದಗಳನ್ನು ಮುಂದಿಡುವುದರಲ್ಲಿ ಅಗ್ರಗಣ್ಯೆ. ಆ ಸಂಸತ್ ಪಟು ಗೀತಾ ಮುಖರ್ಜಿ ಇನ್ನಿಲ್ಲ. ಮಾರ್ಚ್ ೪ರಂದು ಹೃದಯಾಘಾತದಿಂದ ಅವರು ದೆಹಲಿಯಲ್ಲಿ ನಿಧನರಾದರು. ಅಂದಿನ ಲೋಕಸಭಾ ಅಧಿವೇಶನದಲ್ಲಿ ಬಿಹಾರದಲ್ಲಿ ರಾಜ್ಯಪಾಲರು ಎಸಗಿದ್ದ ಕುಕೃತ್ಯವನ್ನು ಹರಿತವಾಗಿ ಖಂಡಿಸಿ ಹೊರಬಂದಿದ್ದ ಕಾಮ್ರೇಡ್ ಗೀತಾ ಕೆಲವೇ ಗಂಟೆಗಳಲ್ಲಿ ಅಸುನೀಗಿದರು. ''ಗೀತಾದೀ'' ಎಂದೇ ಸಾರ್ವಜನಿಕರ ನಡುವೆ ಖ್ಯಾತರಾಗಿದ್ದ ಆಕೆ ಭಾರತ ಕಮ್ಯುನಿಸ್ಟ್ ಪಕ್ಷದ ನಾಯಕಿಯಾಗಿ ಹಲವು ದಶಕಗಳ ಕಾಲ ವಿವಿಧ ಕ್ಷೇತ್ರಗಳಲ್ಲಿ ನಿರಂತರವಾಗಿ ದುಡಿದಿದ್ದರು.

೧೯೨೪ರಲ್ಲಿ ಜನಿಸಿದ ಗೀತಾ ಮುಖರ್ಜಿಯವರು ವಿದ್ಯಾರ್ಥಿ ದೆಸೆಯಲ್ಲಿ ಅಖಿಲ ಭಾರತ ವಿದ್ಯಾರ್ಥಿ ಫೆಡರೇಷನ್ನಿನ ಕಾರ್ಯಕರ್ತರಾಗಿದ್ದು ಆಮೇಲೆ ಸಂಪೂರ್ಣವಾಗಿ ರಾಜಕೀಯ ಚಟುವಟಿಕೆಗಳಲ್ಲಿ ತೊಡಗಿದರು. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅನೇಕ ಕೆಚ್ಚೆದೆಯ ಹೋರಾಟಗಳ ಮುಂಚೂಣಿಯಲ್ಲಿದ್ದು ಕಾರಾಗೃಹಕ್ಕೆ ತೆರಳಿದ್ದರು. ಸ್ವಾತಂತ್ರ್ಯಾನಂತರದಲ್ಲಿ ಪಶ್ಚಿಮ ಬಂಗಾಳದ ರೈತ ಹೋರಾಟಗಳ ಅಗ್ರಪಂಕ್ತಿಯಲ್ಲಿದ್ದು ಮತ್ತೆ ಹಲವು ಬಾರಿ ಜೈಲುವಾಸ ಅನುಭವಿಸಿದ್ದರು. ಜೊತೆಗೆ ಮಹಿಳೆಯರ ಬಹುಮುಖೀ ಸಮಸ್ಯೆಗಳನ್ನು ಎದುರಿಸುತ್ತಾ ಅವುಗಳ ಪರಿಹಾರಕ್ಕಾಗಿ ಭಾರತೀಯ ಮಹಿಳೆಯರ ರಾಷ್ಟ್ರೀಯ ಒಕ್ಕೂಟದ (ಎನ್.ಎಫ್.ಐ.ಡಬ್ಲ್ಯು.) ಸಂಘಟಕರಾಗಿ ಹಲವು ದಶಕಗಳ ಕಾಲ ಶ್ರಮಿಸಿದ ಕೀರ್ತಿ ಅವರದು.

ಇತ್ತೀಚೆಗೆ ಕೇಳಿಬರುತ್ತಿರುವ ಶೇ. ೩೩ರ ಮಹಿಳಾ ಮೀಸಲಾತಿಯ ಹಕ್ಕೊತ್ತಾಯದ ಉದ್ಘಾಟಕರು ಅವರೆಂದರೆ ತಪ್ಪಾಗಲಾರದು. ಮಹಿಳೆಯರಿಗೆ ಮಾನ್ಯತೆ, ಅಧಿಕಾರ, ಪ್ರಾಪ್ತವಾಗುವಂತೆ ಮಾಡಲು ಸೂಕ್ತ ಸಲಹೆಗಳನ್ನು ನೀಡಬೇಕೆಂದು ರಚಿತವಾಗಿದ್ದ ಸಮಿತಿಯ ಅಧ್ಯಕ್ಷೆಯಾಗಿ ಶ್ರೀಮತಿ ಮುಖರ್ಜಿಯವರು ದೇಶದಾದ್ಯಂತ ಪ್ರವಾಸ ಮಾಡಿ ಮಹಿಳಾ ಸಂಘಟನೆಗಳ ಕಾರ್ಯಕರ್ತರನ್ನು ಭೇಟಿಯಾಗಿ ಅವರಿಂದ ಮಾಹಿತಿ ಸಂಗ್ರಹ ಮಾಡಿ ಮಸೂದೆಯ ಕರಡಿಗೆ ಅಗತ್ಯವಾದ ಎಲ್ಲಾ ಗ್ರಾಸವನ್ನೂ ಒದಗಿಸಿದ್ದರು. ಆ ಮಸೂದೆಗೆ ಜೀವ ತುಂಬಿದವರಲ್ಲಿ ಗೀತಾದೀ ಪ್ರಮುಖರು.

ಪಶ್ಚಿಮ ಬಂಗಾಳದ ರೈತ ಹೋರಾಟಗಳ ಸಂಘಟಕಿಯಾಗಿದ್ದಾಗಲೇ ಭಾರತ ಕಮ್ಯುನಿಸ್ಟ್ ಪಕ್ಷದ ಕಾರ್ಯಕರ್ತ ವಿಶ್ವನಾಥ ಮುಖರ್ಜಿಯವರೊಡನೆ ಸಂಗಾತಿಯಾಗಿ ಕೆಲಸ ಮಾಡಿ ಆಮೇಲೆ ಅವರ ಪತ್ನಿಯಾದರು. ಎರಡು ಬಾರಿ ಪಶ್ಚಿಮ ಬಂಗಾಳದ ಶಾಸನಸಭಾ ಸದಸ್ಯರಾಗಿ ಚುನಾಯಿತರಾಗಿದ್ದ ಆಕೆ ಆಮೇಲೆ ಸತತವಾಗಿ ಪನ್‌ಸ್ಕುರಾ ಕ್ಷೇತ್ರದಿಂದ ಲೋಕಸಭೆಗೆ ಚುನಾಯಿತರಾಗಿದ್ದರು. ಯಾವ ವಿಷಯವನ್ನು ಕುರಿತಾಗಿಯೂ ಅಸಡ್ಡೆಯ ಭಾವನೆಯನ್ನು ಬೆಳೆಸಿಕೊಳ್ಳದ ಗೀತಾದೀ ಚರ್ಚಾಪಟುವಾಗಿ ಎಲ್ಲ ಪಕ್ಷಗಳ ಸದಸ್ಯರ ಗೌರವವನ್ನೂ ಪಡೆದುಕೊಂಡಿದ್ದರು.

ಲೇಖಕಿಯಾಗಿ ಸಹ ಆಕೆ ಮಹತ್ವದ ಕಾಣಿಕೆಯನ್ನು ನೀಡಿದ್ದಾರೆಂದು ತಿಳಿದುಬರುತ್ತದೆ. ಪತ್ರಿಕೆಗಳಲ್ಲಿ ಆಗಾಗ್ಗೆ ಲೇಖನಗಳನ್ನು ಇಂಗ್ಲಿಷ್ ಭಾಷೆಯಲ್ಲಿ ಬರೆದಿರುವುದನ್ನು ಬಿಟ್ಟರೆ ಅವರ ಎಲ್ಲ ಸಾಹಿತ್ಯ ಕೃಷಿಯೂ ಬಂಗಾಲಿ ಭಾಷೆಯಲ್ಲೇ. ಮಕ್ಕಳ ಸಾಹಿತ್ಯದಲ್ಲಿ ಅವರದು ಅಪಾರ ಹೆಮ್ಮೆಯ ಕೊಡುಗೆ ಎನ್ನುತ್ತಾರೆ. ಜರ್ಮನಿಯ ಶ್ರೇಷ್ಠ ಕಾದಂಬರಿಕಾರ ಬ್ರೂನೋ ಆಪಿಟ್ಸ್‌ನ ''ಬೆತ್ತಲೆಯಾಗಿ ತೋಳಗಳ ನಡುವೆ'' ಎಂಬ ಅದ್ಭುತ ಕೃತಿಯನ್ನು ಬಂಗಾಳಿಗೆ ಭಾಷಾಂತರಿಸಿದ ಗೀತಾದೀ ಅವರು ಆ ಕಾದಂಬರಿಯನ್ನೇ ಆಯ್ಕೆ ಮಾಡಿಕೊಂಡದ್ದು ಆಶ್ಚರ್ಯವಲ್ಲ. ಹಿಟ್ಲರನ ದೌರ್ಜನ್ಯಗಳ ಸರಮಾಲೆಯನ್ನು. ಚಾರಿತ್ರಿಕ ದುರಂತವನ್ನು ಅತ್ಯಂತ ಮಾನವೀಯವಾಗಿ, ಸುಂದರವಾಗಿ ಚಿತ್ರಿಸುವ ಉತ್ತಮ ಕಾದಂಬರಿಗಳಲ್ಲಿ ಆಪಿಟ್ಸ್‌ನದು ಸರಿಸಾಟಿಯಿಲ್ಲದ ಕೃತಿ. ನಾಜಿ ದೌರ್ಜನ್ಯವು ಸಂಸ್ಕೃತಿಯ ಶತ್ರು ಮಾತ್ರವಲ್ಲ, ಮಾನವೀಯ ಅಂತಃಕರಣಕ್ಕೆ ಒಂದು ಸವಾಲು ಎಂಬುದನ್ನು ಪ್ರತಿಪಾದಿಸುವ ಆ ಕಾದಂಬರಿಯು ಗೀತಾದೀ ಅವರಿಗೆ ಪ್ರಿಯವೆನಿಸಿದ್ದು ಸಹಜವಾಗಿದೆ. ಅವರ ಲೋಕಸಭಾ ಕ್ಷೇತ್ರದಲ್ಲಿ ಆಕೆಯ ಕ್ರಿಯಾತ್ಮಕ ಚಟುವಟಿಕೆಗಳನ್ನು ಗಮನಿಸಿದ್ದವರು ಅವರನ್ನು ''ನೈಜ ಜನತಾ ಪ್ರತಿನಿಧಿ'' ಎನ್ನುತ್ತಿದ್ದುದು ಬಹುಶಃ ಇಂತಹ ಅಂತಃಕರಣವನ್ನು ಹೊಂದಿದ್ದರು ಎಂಬ ಕಾರಣಕ್ಕಾಗಿಯೇ ಇರಬೇಕು. ನಿರಾಡಂಬರ ಜೀವಿಯಾಗಿದ್ದ ಈಕೆಗೆ ತತ್ತ್ವಶಾಸ್ತ್ರದಲ್ಲಿ ವಿಶೇಷ ಆಸಕ್ತಿ ಇದ್ದಿತು. ಜನಪರ ಹೋರಾಟಗಾರ್ತಿ ಹೇಗಿರಬೇಕೆಂಬುದಕ್ಕೆ ಮಾದರಿಯಂತಿದ್ದ ಗೀತಾ ಮುಖರ್ಜಿ ಅವರಿಗೆ ''ಹೊಸತು'' ತನ್ನ ಗೌರವವನ್ನು ಸೂಚಿಸುತ್ತದೆ.

---

*(ಹಿಂದಿನ ಪುಟದಿಂದ)*

೧೯೯೧ರ ಆದೇಶ ಹಾಗೂ ಅಲಹಾಬಾದ್ ಉಚ್ಚ ನ್ಯಾಯಾಲಯದ ಜುಲೈ ೧೫, ೧೯೯೨ರ ಆದೇಶಗಳನ್ನು ಉತ್ತರ ಪ್ರದೇಶದ ಮುಖ್ಯಮಂತ್ರಿಗಳಾಗಿದ್ದ ಕಲ್ಯಾಣ ಸಿಂಗರು ಉಲ್ಲಂಘನೆ ಮಾಡಿದ್ದಕ್ಕಾಗಿ ತಾವು ನಿವೃತ್ತರಾಗುವ ಒಂದು ದಿನ ಮೊದಲು ವೆಂಕಟಾಚಲಯ್ಯನವರು ಸಂತಸಗೊಂಡರು. ಎರಡು ವರ್ಷಗಳಿಗಿಂತ ಹೆಚ್ಚು ಕಾಲ ಈ ನ್ಯಾಯಾಲಯ ನಿಂದನೆ ಮೊಕದ್ದಮೆಗಳ ವಿಚಾರಣೆಯ ನ್ಯಾಯಪೀಠದ ಅಧ್ಯಕ್ಷತೆಯನ್ನು (ಜಿ.ಎನ್.ರೇ ಜೊತೆಗೆ) ಅವರು ವಹಿಸಿದ್ದರು. ಅವರು ಕಲ್ಯಾಣ ಸಿಂಗರನ್ನು ಸಕಾಲದಲ್ಲಿ ಶಿಕ್ಷಿಸಿದ್ದರೆ ಬಾಬ್ರಿ ಮಸೀದಿ ಡಿಸೆಂಬರ್ ೬, ೧೯೯೨ರಂದು ನೆಲಸಮವಾಗುತ್ತಿರಲಿಲ್ಲ ಎಂದು ಫ್ರಂಟ್‌ಲೈನ್‌ನಲ್ಲಿ (ಮಾರ್ಚ್ ೩, ೨೦೦೦) ಎ. ಜಿ. ನೂರಾನಿ ವಿವರವಾಗಿ ವಿಶ್ಲೇಷಣೆ ಮಾಡಿದ್ದಾರೆ.

ಅಟಾರ್ನಿ ಜನರಲ್ ಮಿಲನ್ ಬ್ಯಾನರ್ಜಿ ಅವರು ಮುಂದಾಗಬಹುದಾದ ಅನಾಹುತದ ಬಗ್ಗೆ ಎಚ್ಚರಿಕೆ ನೀಡಿದಾಗ್ಯೂ ವೆಂಕಟಾಚಲಯ್ಯನವರು ಅದಕ್ಕೆ ಕಿವಿಗೊಡದಿದ್ದುದನ್ನು ಸ್ಟೇಟ್ಸ್‌ಮನ್ ಪತ್ರಿಕೆ (ಜನವರಿ ೧೮-೨೦, ೧೯೯೩) ವಿವರವಾಗಿ ನಿರೂಪಿಸಿದೆ. ನವೆಂಬರ್ ೨೫, ೧೯೯೨ರಂದು ವೆಂಕಟಾಚಲಯ್ಯನವರು 'ಪರಿಸ್ಥಿತಿಯು ಹದಗೆಡುತ್ತಿದೆ ಎಂದು ತೋರಿಸಲು ನಿಮ್ಮಲ್ಲಿ ಸಾಕ್ಷ್ಯಾಧಾರಗಳಿವೆಯೇ ?' ಎಂದು ಅಟಾರ್ನಿ ಜನರಲ್ ಅವರನ್ನು ಕೇಳಿದರು. ಅವರು ಘೋರ ಪಾತಕಕ್ಕೆ ಸಿದ್ಧತೆಗಳು ನಡೆಯುತ್ತಿವೆ ಎಂದು ಹೇಳಿದಾಗ 'ಸಿದ್ಧತೆಗಳು ನಡೆಯುವುದು ಅಪರಾಧವಾಗುವುದಿಲ್ಲ' ಎಂದರು ವೆಂಕಟಾಚಲಯ್ಯನವರು.

ಬಾಬ್ರಿ ಮಸೀದಿ ನೆಲಸಮವಾಗುವುದಕ್ಕೆ ಎರಡು ದಿನ ಮೊದಲು ಡಿಸೆಂಬರ್ ೪, ೧೯೯೨ರಂದು ವೆಂಕಟಾಚಲಯ್ಯನವರು ಕರಸೇವಕರ ಆರೋಗ್ಯ, ಅವರ ವಸತಿ ನೈರ್ಮಲ್ಯದ ಬಗ್ಗೆ ಕಾಳಜಿ ವ್ಯಕ್ತಪಡಿಸಿದರು. ಆದ್ದರಿಂದ ಅವರು ಸಂವಿಧಾನ ಪರಾಮರ್ಶೆಗೆ ಹಿಂದು ಪರಿವಾರದ ದೃಷ್ಟಿಯಿಂದ ಅತ್ಯಂತ ಆದರ್ಶಪ್ರಾಯರಾಗಿದ್ದಾರೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ.

ಪ್ರೊ॥ ಬಿ. ವಿ. ವೀರಭದ್ರಪ್ಪ
[illegible], ಬಾಪೂಜಿ ವಿದ್ಯಾನಗರ, ದಾವಣಗೆರೆ - ೫೭೭ ೦೦೪

# ಹೊಸ ಶತಮಾನದ ಹೊಸ್ತಿಲಲ್ಲಿ 'ದಲಿತ' ಪರಿಕಲ್ಪನೆಯ ಮರುವಿವೇಚನೆ

ಎ. ಚಂದ್ರಶೇಖರ ನಂಗಲಿ

ಜಾತಿ ಪದ್ಧತಿ ಮತ್ತು ಅಸ್ಪೃಶ್ಯತೆಗಳು ಇನ್ನೂ ಉಸಿರಾಡುತ್ತಿರುವ ಆಧುನಿಕ ಭಾರತದ ಶ್ರೇಣೀಕೃತ ಸಾಮಾಜಿಕ ವ್ಯವಸ್ಥೆಯಲ್ಲಿ ಒಂದೊಂದು ಜಾತಿ ಮತ್ತು ಒಂದೊಂದು ಶ್ರೇಣಿಯೂ ಒಂದೊಂದು ಪೊರಕೆ ಕಡ್ಡಿಯಂತೆ ಪ್ರತ್ಯೇಕವಾಗಿದೆ. ಒಂದು ಪೊರಕೆ ಕಡ್ಡಿಯಿಂದ ಕಸ ಗುಡಿಸಲು ಸಾಧ್ಯವಿಲ್ಲ. ಒಂದೊಂದು ಪೊರಕೆ ಕಡ್ಡಿಯೂ ತನ್ನ ಜನ್ಮಜಾತ ಬಣ್ಣವನ್ನು ಲೋಕದ ಬಿಸಿಲಿನಲ್ಲಿ ಕಳೆದುಕೊಂಡು 'ಊದರಲು' ಗಳನ್ನೆಲ್ಲ ಉದುರಿಸಿಕೊಂಡು ಐಕ್ಯವಾದರೆ 'ಕಸ ಪೊರಕೆ' ಸಿದ್ಧವಾಗುತ್ತದೆ. ಇದರಿಂದ ಸಂಸ್ಕೃತಿಯ ಕಸ ಗುಡಿಸಲು ಸಾಧ್ಯವಾಗುತ್ತದೆ. ಈ ಸರಳ ಸತ್ಯವನ್ನು ಅರ್ಥ ಮಾಡಿಕೊಂಡರೆ ಸಾಮಾಜಿಕವಾದ 'ಜಡತೆ' ಮತ್ತು 'ಚಲನ ಶೀಲತೆ'ಗಳು ಒಂದು ಅವಿರತ ಹೋರಾಟವೆಂಬುದು ಸ್ಪಷ್ಟವಾಗುತ್ತದೆ. ಇಂಥ ನಿರಂತರ ಹೋರಾಟವನ್ನು ಲಕ್ಷಿಸಿಯೇ ಬಸವಣ್ಣನು ''ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕೆ ಅಳಿವಿಲ್ಲ'' ಎಂದು ಹೇಳಿದ್ದಾನೆ. ಸ್ಥಾವರ ಸಂಸ್ಕೃತಿಯ ಕತ್ತಲೆಯನ್ನು ಕುರಿತು ಅಲ್ಲಮನ ವಚನ ಹೀಗಿದೆ :

*ಅಪರಿಮಿತದ ಕತ್ತಲೆಯೊಳಗೆ*  
*ವಿಪರೀತದ ಬೆಳಗನಿಕ್ಕಿದವರಾರೋ! ?*  
*ಬೆಳಗೂ ಅದೆ! ಕತ್ತಲೆಯೂ ಅದೆ!*  
*ಇದೇನು ಚೋದ್ಯವೋ!! ಒಂದಕ್ಕೊಂದಂಜದು!!*  
*ಆನೆಯೂ ಸಿಂಹವೂ ಒಂದಾಗಿ ಉಂಬುದ ಕಂಡು*  
*ಬೆರಗಾದೆನು ಕಾಣಾ, ಗುಹೇಶ್ವರ!*

ಈ ವಚನವನ್ನು ನಾನು ವ್ಯಾಖ್ಯಾನಿಸಲು ಇಚ್ಛಿಸುವುದಿಲ್ಲ. ಏಕೆಂದರೆ, ಇಲ್ಲಿನ ಶಬ್ದಗಳೊಳಗೆ ನಿಶ್ಶಬ್ದವಿದೆ. ಅದು ಸುಂದರವಾದ ನಿಶ್ಶಬ್ದ. ಶಬ್ದಗಳ ಮೂಲಕ ನಿಶ್ಶಬ್ದವನ್ನು ಅನುಸಂಧಾನಗೊಳಿಸುವವನೇ ನಿಜವಾದ ಕವಿ. ನನ್ನ ಬಗೆಗಣ್ಣಿಗೆ ಇಡೀ ಕನ್ನಡ ಸಾಹಿತ್ಯ ಪರಂಪರೆಯೇ ಶಬ್ದಮಯವಾಗಿ, ಅಲ್ಲಮನೊಬ್ಬನ ನಿಶ್ಶಬ್ದವಾಗಿ ಕಾಣುತ್ತಾನೆ. ' ಜಾತಿಗಳ ಹುಟ್ಟು ಮತ್ತು ಬೆಳವಣಿಗೆ'- ಎಂಬ ಪ್ರಬಂಧದಲ್ಲಿ ಅಂಬೇಡ್ಕರ್ ಅವರು ಭಕ್ತಿಪಂಥದ ಸಂತರುಗಳು ಜಾತಿ ಪದ್ಧತಿಯ ಸಮಾಜಕ್ಕೆ ಸಿಂಹಸ್ವಪ್ನವಾಗಿ ಪರಿಣಮಿಸಿದ್ದಾರೆಂದು ಅಭಿಪ್ರಾಯ ಪಟ್ಟಿದ್ದಾರೆ. ವಿಚಾರವಾದಿಗಳೆನಿಸಿಕೊಂಡವರು ಗುಮಾನಿಯಿಂದ ನೋಡುವ ಭಕ್ತಿ ಪಂಥದ ಸಂತರ ಬಗ್ಗೆ ಅಂಬೇಡ್ಕರ್ ತಳೆದಿರುವ ನಿಲುವು ಅಂತಹ ಸಾಹಿತ್ಯವನ್ನು ಹೇಗೆ ಗ್ರಹಿಸಬೇಕೆಂಬುದರ ದಿಕ್ಸೂಚಿಯೂ ಆಗಿದೆ. ಇಂದು ಸಾಹಿತ್ಯವನ್ನು ನೋಡುವ ಮತ್ತು ಗ್ರಹಿಸುವ ದೃಷ್ಟಿಗಳೆಲ್ಲ ಕಲುಷಿತವಾಗಿವೆ.

ಪೃಥಕ್ಕರಣಕ್ಕೆ ಅಡಿಯಾಳಾಗಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಬಗೆಬಗೆಯ ವಿಭಜನೆಗಳು, ವಿಭಾಗ ಕ್ರಮಗಳು ವಿಜೃಂಭಿಸುತ್ತಿವೆ. ಇವೆಲ್ಲ ಒಂದೊಂದು ಸ್ಥಾವರಗಳಿದ್ದಂತೆ! ಚಲನರಹಿತವಾದ ಜಡದೃಷ್ಟಿಯ ವಿಂಗಡನೆಗಳಿವು. ಆಧುನಿಕ ಸಂದರ್ಭದಲ್ಲಿ ನವೋದಯ - ಪ್ರಗತಿಶೀಲ-ನವ್ಯ-ದಲಿತ; ಬಂಡಾಯ, ಇವು ಕೂಡ 'ಸ್ಥಾವರ'ಗಳೇ ಆಗಿವೆ. ಈ ಹಣೆಪಟ್ಟಿ ಅಥವಾ ಲಾಂಛನಗಳಡಿ ತಮ್ಮನ್ನು, ತಮ್ಮ ಸಾಹಿತ್ಯವನ್ನು ಗುರುತಿಸಿಕೊಳ್ಳಲು ಹೆಣಗಿದವರೆಲ್ಲ ಇಂದು ದಣಿದು ಹೋಗಿದ್ದಾರೆ. ವಿಭಜನೆಯ ಸ್ಥಾವರಗಳಲ್ಲಿ ಗಟ್ಟಿಯಾಗಿ ಭಜನೆ ಮಾಡುತ್ತಿದ್ದವರೆಲ್ಲ ಗಂಟಲೊಣಗಿ ಹೊಸ ನೀರಿಗಾಗಿ ತಹತಹಿಸುತ್ತಿದ್ದಾರೆ.

'ದಲಿತ ಸಾಹಿತ್ಯ' ಮತ್ತು 'ಬಂಡಾಯ ಸಾಹಿತ್ಯ'ಕ್ಕೆ ಒಂದು ಏಕರೂಪಾತ್ಮಕ ಕೇಂದ್ರದಿಂದ ಹುಟ್ಟಿದ ಲಕ್ಷಣ ಸಂಪನ್ನತೆಯ ನಿರ್ವಚನಗಳಿವೆಯಾದರೂ ಇವೆಲ್ಲ 'ಕುರುಹು' ಎಂಬುದನ್ನು ಮರೆಯಬಾರದು. ಅಂತಿಮವಾಗಿ ಈ ಕುರುಹನ್ನು ಮೀರಿ ಅರಿವಿನ ಲಕ್ಷ್ಯ ಸಿದ್ಧಿಮಾಡಿಕೊಳ್ಳಬೇಕು. ಅದೇ ನಿಜವಾದ ಸಾಹಿತ್ಯ. ಇದು ನಿರುಪಾಧಿಕ ಲಿಂಗ :

*ಅಸುರರ ಮಾಲೆಗಳಿಲ್ಲ, ತ್ರಿಶೂಲ ಡಮರುಗವಿಲ್ಲ*  
*ಬ್ರಹ್ಮಕಪಾಲವಿಲ್ಲ, ಭಸ್ಮಭೂಷಣನಲ್ಲ, ವೃಷಭ ವಾಹನನಲ್ಲ*  
*ಋಷಿಗಳೊಡನೆ ಇದ್ದಾತನಲ್ಲ, ಎಸಗುವ ಸಂಸಾರದ*  
*ಕುರುಹಿಲ್ಲದಾತಂಗೆ ಹೆಸರಾವುದು ಇಲ್ಲವೆಂದನಂಬಿಗ ಚೌಡಯ್ಯ.*




ಭಾರತ ಸಂವಿಧಾನದ ಪ್ರತಿಯೊಂದನ್ನು ಕೊಡಿ. ನಾನು ಏಕೆ ಹೀಗೆ 50 ವರ್ಷಗಳಿಂದ ನಿರ್ಗತಿಕನಾಗಿ ಇರುವುದು ತಿಳಿಯುತ್ತೆ!

ದಲಿತರು ಬರೆದದ್ದು ದಲಿತ ಸಾಹಿತ್ಯ, ಶೂದ್ರರು ಬರೆದದ್ದು ಬಂಡಾಯ ಸಾಹಿತ್ಯ ಎಂಬುದು ಬಾಲಿಶ ವಿವರಣೆ. ಹಾಗೆಯೇ ದಲಿತ ಸಾಹಿತ್ಯವನ್ನು ಎಪ್ಪತ್ತರ ದಶಕದ ಅಭಿವ್ಯಕ್ತಿಯನ್ನಾಗಿ ನೋಡುವುದು ಸ್ಥಾವರ ದೃಷ್ಟಿಯಾಗಿದೆ. ಕಾಲವನ್ನು ಹಿಂದಣ ಅನಂತ ಮತ್ತು ಮುಂದಣ ಅನಂತಗಳ ಚಲನಶೀಲವಾದ ಸಂಗಮ ಬಿಂದುವಿನಂತೆ ನೋಡುವ ಅಲ್ಲಮನ ಗ್ರಹಿಕೆ ವೈಜ್ಞಾನಿಕವಾದುದಾಗಿದೆ. ಆದರೆ ಬ್ರಿಟಿಷರು ಹೇಳಿಕೊಟ್ಟ ಕಾಲಾನುಕ್ರಮಣಿಕೆಯ ಪಾಠಗಳಿಂದ ನಮ್ಮ ಮತಿ ವಿಕಾರವಾಗಿಬಿಟ್ಟಿದೆ. ಕಾಲವನ್ನು ತುಂಡು ತುಂಡುಗಳಾಗಿ ಕತ್ತರಿಸಿ ಅಭ್ಯಾಸ ಮಾಡುವ ಸ್ಥಾವರ ದೃಷ್ಟಿಗೆ ಬದ್ಧರಾಗಿ ಒಂದು ದಿನವೆಂದರೆ ಇಪ್ಪತ್ನಾಲ್ಕು ಗಂಟೆಗಳೆಂಬ ಭ್ರಮೆಯಲ್ಲಿ ಮುಳುಗಿದ್ದೇವೆ. ಅಲ್ಲಮನ ಪ್ರಕಾರ ಒಂದು ದಿನವೆಂಬುದು :

*ಹಿಂದಣ ಅನಂತ ಏನೂ*  
*ಮುಂದಣ ಅನಂತ ಏನೂ*  
*ಒಂದು ದಿನ ಒಳಕೊಂಡಿತ್ತು ನೋಡಾ !*

ಅಲ್ಲಮನ ವಚನಗಳನ್ನು ಸಂಪಾದಿಸಿ, ಅದಕ್ಕೊಂದು ಬೆಳಕಿನ ಮುನ್ನುಡಿ ಬರೆದಿರುವ ಡಾ॥ ಎಲ್. ಬಸವರಾಜು ಅವರು ಅಲ್ಲಮನ ವಚನಗಳನ್ನು ದಲಿತ ಸಾಹಿತ್ಯವೆಂದು ವ್ಯಾಖ್ಯಾನಿಸಿರುವುದು ಸರಿಯಾಗಿದೆ. ವಚನ ಚಳುವಳಿಯನ್ನು ಕರ್ನಾಟಕದ ಪ್ರಪ್ರಥಮ ದಲಿತ ಚಳುವಳಿ ಎಂದು ಕರೆದಿರುವ ಎಲ್.ಬಸವರಾಜು ಅವರು ಇಂಥ ಹೋರಾಟವನ್ನು ಬಿತ್ತಿ ಬೆಳೆಸಿದವರೇ ದಲಿತ ವಚನಗಾರರೆಂದು ಹೇಳಿರುವುದು ಈ ಸಂದರ್ಭದಲ್ಲಿ ಸ್ಮರಣಾರ್ಹವಾಗಿದೆ.

'ಜಾತಿ' ಎಂಬ ಒಂದೊಂದು ಪೊರಕೆ ಕಡ್ಡಿಯಲ್ಲಿ ಮೊದಲು ಉದುರಿಸಬೇಕಾದ 'ಊದರಲು'ಗಳೆಂದರೆ ಜನ್ಮಜಾತ ಅಸಮಾನತೆ, ಜನ್ಮಜಾತ ಸನ್ಮಾನ, ಜನ್ಮಜಾತ ಅವಮಾನ. ಹುಟ್ಟಿನಿಂದ ಯಾರೊಬ್ಬರೂ ಶ್ರೇಷ್ಠರಲ್ಲ ಹಾಗೆಯೇ ಕನಿಷ್ಠರಲ್ಲ ಎಂಬ ಭಾವನೆ ಬೆಳೆಯಬೇಕು. 'ಜಾತಿ ಪಿರಮಿಡ್'ನ ಸಮಾಜದಲ್ಲಿ ಉತ್ತಮರು ಉತ್ತಮತ್ವದಿಂದ, ಮಧ್ಯಮರು ಮಧ್ಯಮತ್ವದಿಂದ ಅಧಮರು ಅಧಮತ್ವದಿಂದ ಮೊದಲು ಮಾನಸಿಕವಾಗಿ ಬಿಡುಗಡೆ ಪಡೆಯಬೇಕು. ಇದೊಂದು [illegible] ನಿರಂತರ ಹೋರಾಟ. ಇದು ಸಾಧ್ಯ ಕೂಡ :

*ಇಕ್ಷುದಂಡಕ್ಕೆ ಕೀಳುಮೇಲಿಲ್ಲದ*  
*ಸಕ್ಕರೆಯ ದಂಡಕ್ಕೆ ಕೀಳು ಮೇಲುಂಟೆ?*  
*ಪರುಷ ಪಾಷಾಣಕ್ಕೆ ಕೀಳು ಮೇಲಿಲ್ಲದೆ*  
*ಕಡೆಯಾಣಿಗುಂಟೆ ಒರೆಗಲ್ಲು ?*  
*[illegible]*  
*ಗುಹೇಶ್ವರ [illegible]*  
ಮೇಲು-ಕೀಳುಗಳೆಂಬ ಸಾಮಾಜಿಕ ಪರಿಭಾಷೆಗಳ

ಮೂಲಕ ಮಾತನಾಡುತ್ತಿರುವ ಅಲ್ಲಮನು ಪರಿವರ್ತನೆಯ ಪ್ರವಾದಿಯಾಗಿ ತೋರುತ್ತಾನೆ. ಜಡ ದೃಷ್ಟಿಯ ಜಾತಿ ಸ್ಥಾವರಗಳಿಂದ ಪಾರಾದರೆ 'ದಲಿತ ಸಾಹಿತ್ಯ'ದ ಅನಂತ ವ್ಯಾಪ್ತಿ ಮತ್ತು ನಿರ್ದಿಗಂತವಾದ ವಿಸ್ತಾರಗಳು ಅರಿವಿಗೆ ಬರುತ್ತದೆ: ಇಲ್ಲದಿದ್ದರೆ ಇಲ್ಲ. ನನ್ನ ಮಾತುಗಳನ್ನು ಕಾಲಾದೇಶಾತೀತವಾದ 'ಶುದ್ಧಸಾಹಿತ್ಯ'ದ ಪ್ರತಿಪಾದನೆಯೆಂದು ಭಾವಿಸಿಬಿಡುವ ಅಪಾಯವಿರುವುದರಿಂದ ಇಲ್ಲೊಂದು ಸ್ಪಷ್ಟನೆ ನೀಡಬೇಕಾಗಿದೆ. ನಾನು ಬದುಕಿನಿಂದ ದೂರ ಸಿಡಿದು ನಿಂತ 'ಶುದ್ಧಸಾಹಿತ್ಯ'(?)ದ ಸ್ವತಂತ್ರ ಸಾಕ್ಷಿತ್ವವನ್ನು ಒಪ್ಪುವುದಿಲ್ಲ, ಕಾಲವನ್ನು ಅಂತ ಮತ್ತು ಅನಂತಗಳ ಕೂಡಲ ಸಂಗಮವಾಗಿ ಗ್ರಹಿಸಬೇಕೆಂಬ ನಿಲುವು ನನ್ನದು. ಇದನ್ನು ಅರಿವಿನ ಎಲ್ಲ ನೆಲೆಗಳಿಗೂ ಅನ್ವಯಿಸಿಕೊಳ್ಳಬೇಕು.

'ದಲಿತ' ಎಂಬ ಪರಿಕಲ್ಪನೆಯನ್ನೂ 'ಅಂತ' ಮತ್ತು 'ಅನಂತ'ಗಳ ಕೂಡಲ ಸಂಗಮದಲ್ಲಿ ಗ್ರಹಿಸಬೇಕು. 'ದಲಿತ' ಎಂಬುದು ಪ್ರತ್ಯೇಕ ದ್ವೇಷವಾಗಿ ಉಳಿಯದೆ ಸಮಾಜದ ಮುಖ್ಯ ಪ್ರವಾಹದಲ್ಲಿ ಐಕ್ಯವಾಗಬೇಕಾದರೆ 'ಜಾತಿ ಪಿರಮಿಡ್'ನಿಂದ ಆರಂಭಿಸಿ 'ಹಸಿರು ಪಿರಮಿಡ್'ನವರೆಗೆ 'ದಲಿತ' ಪರಿಕಲ್ಪನೆಯ ಮರು ನಿರ್ವಚನವಾಗಬೇಕು. ಈ ನಿಟ್ಟಿನಲ್ಲಿ ದಲಿತ ಜಾತಿ, ದಲಿತ ವರ್ಗ ಮತ್ತು ದಲಿತ ಭೂಗೋಳ ಎಂಬ ಮುಪ್ಪರಿ ಬಂಧವೊಂದನ್ನು ಕಂಡುಕೊಳ್ಳಬೇಕು. ಇವು ಮೂರು ಒಂದನ್ನೊಂದು ಮೀರುವ ಮತ್ತು ಒಳಗೊಳ್ಳುವ ಪರಿಭಾಷೆಗಳಾಗಿವೆ. 'ದಲಿತ ಜಾತಿ' ಎಂದರೆ ನಮ್ಮ ಸಂದರ್ಭದಲ್ಲಿ ಹುಟ್ಟಿನಿಂದ ಅವಮಾನಿತರು, ಅಸ್ಪೃಶ್ಯರು ಎಂದರ್ಥ. 'ದಲಿತ' ಪರಿಕಲ್ಪನೆಯ ವ್ಯಾಖ್ಯಾನದ ಆರಂಭ ಬಿಂದುವಿದು. ಇಲ್ಲೇ ನಿಂತುಹೋದರೆ 'ದಲಿತಜಾತಿ' ಒಂದು 'ಏಕಮಾತ್ರ' ಪೊರಕೆ ಕಡ್ಡಿಯಾಗಿ ಉಳಿದು ಬಿಡುವ ಅಪಾಯವಿದೆ. ಸಂಸ್ಕೃತಿಯ ಯಾನದಲ್ಲಿ ನಾನಾ ಅವಸ್ಥೆಗೊಳಗಾದ 'ದಲಿತವರ್ಗ'ವೇ ಇದೆ. ಇವರನ್ನು ಮಾರ್ಕ್ಸ್‌ವಾದದ ಪ್ರಕಾರ ತುಳಿತಕ್ಕೆ ಒಳಗಾದವರು, ಶೋಷಿತರು, ಅಲಕ್ಷಿತರು ಎಂದು ಗುರುತಿಸಲಾಗಿದೆ. ದಲಿತ ಜಾತಿ ಮತ್ತು ದಲಿತ ವರ್ಗಗಳೆರಡನ್ನೂ ಒಂದೇ ಮಾತಿನಲ್ಲಿ 'ದಲಿತ ಸಮುದಾಯ'ಗಳೆಂದು ಕರೆಯಬಹುದು. ಇದಿಷ್ಟು ಜಾತಿ ಮತ್ತು ಶ್ರೇಣೀಕೃತವಾದ 'ಮನುಷ್ಯ ಕೇಂದ್ರಿತ' ಚಿಂತನೆಯಾಗಿದೆ. ಆದರೆ, 'ಜೀವ ಕೇಂದ್ರಿತ' ಚಿಂತನೆಯ ವಿಸ್ತರಣೆಯಾಗಿ 'ಹಸಿರು ಪಿರಮಿಡ್'ನ ಮೂಲಕ 'ದಲಿತ' ಪರಿಕಲ್ಪನೆಯನ್ನು ಪುನರ್ ಪರಿಶೀಲಿಸೋಣ :

ಪಂಚಭೂತಾತ್ಮಕ ಜೀವ ಮೂಲಗಳಾದ ಮಣ್ಣು-ನೀರು-ಗಾಳಿ-ಬೆಳಕು-ಆಕಾಶಗಳೊಂದಿಗೆ ನೇರವಾದ ಜೈವಿಕ ಸಂಬಂಧವನ್ನು ಹೊಂದಿರುವ ದಲಿತ ಜಾತಿ ಮತ್ತು ದಲಿತ ವರ್ಗದ ಜನ ಸಮುದಾಯಗಳು ಅದೇ ಪಂಚಭೂತಗಳನ್ನು ನಂಬಿ ಬದುಕುತ್ತಿವೆ. ಪಾಶ್ಚಾತ್ಯ ಪ್ರಣೀತವಾದ ಆಧುನಿಕ ನಾಗರಿಕತೆ ಇಂದು ವಿಶ್ವದಾದ್ಯಂತ ಹರಡಿಕೊಂಡು ಪ್ರಗತಿ ಮೀಮಾಂಸೆಯ ಕಬಂಧ ಬಾಹುಗಳಿಂದ ಮಣ್ಣು-ನೀರು-ಗಾಳಿ-ಬೆಳಕು-ಆಕಾಶಗಳನ್ನೆಲ್ಲ ಕಲುಷಿತಗೊಳಿಸಿ ಗೋಚರ ಮತ್ತು ಅಗೋಚರ ಮಾಲಿನ್ಯದಿಂದ ಭೂಮಿಯನ್ನು ವಿಷಮಯವನ್ನಾಗಿಸುತ್ತಿದೆ. ಪಂಚಭೂತಗಳೊಂದಿಗೆ ನಿಕಟ ಮೈತ್ರಿಯುಳ್ಳ ದಲಿತ ಜಾತಿ ಮತ್ತು ಜನ ಸಮುದಾಯಗಳು ಇದರ ಘನಘೋರ ಪರಿಣಾಮಗಳಿಗೆ ಮೊದಲ ಬಲಿಪಶುಗಳಾಗಿ ತತ್ತರಿಸಿ ಹೋಗಿದ್ದಾರೆ. 'ಜೀವ' ಮಾರಕ ಅಣುಸಂಸ್ಕೃತಿ. 'ಹಸಿರು' ಭಂಜಕ ಕೈಗಾರಿಕೀಕರಣ, ಮತ್ತು ಸತ್ವ ನಾಶಕ ರಾಸಾಯನಿಕ ವಸ್ತುಗಳ ಬಳಕೆಯಿಂದಾಗಿ ನಮ್ಮೆಲ್ಲರ ಜೀವ ಮೂಲಗಳಾದ ಮಣ್ಣು-ನೀರು-ಗಾಳಿ-ಬೆಳಕು-ಆಕಾಶಗಳೆಲ್ಲ ಕಲುಷಿತ ಮತ್ತು ವಿಷಪೂರಿತವಾಗುತ್ತಿವೆ. ಹೀಗೆ ಅವಮಾನಿತಗೊಳ್ಳುತ್ತಿರುವ ಜೀವ ಮೂಲಗಳಿಂದಾಗಿ ದಲಿತ ಪರಿಕಲ್ಪನೆಯನ್ನು ಬೃಹತ್ ನೆಲೆಯಲ್ಲಿಯೂ ನೋಡಬೇಕೆನಿಸುತ್ತಿದೆ. ಉಪಭೋಗ ಪ್ರಧಾನ ದೃಷ್ಟಿಯಿಂದಾಗಿ ನಮ್ಮ ದೇಶದ ಕಾಡುಗಳು, ಬೆಟ್ಟ ಗುಡ್ಡಗಳು ಪ್ರಗತಿ - ಗ್ರಾನೈಟ್-ಪೇಟೆಂಟ್ ಹೆಸರಿನಲ್ಲಿ ಕುರಿಯಯ್ಯನ ಹಾದಿ ಹಿಡಿದು ನಾಶವಾಗುತ್ತಿವೆ. ಇಡೀ ಭೂಮಂಡಲಕ್ಕೆ ಬೇಕಾದ ಪ್ರಾಣವಾಯುವಿನಲ್ಲಿ ಮಹತ್ವದ ಭಾಗವನ್ನು ಉತ್ಪಾದಿಸುವ ಅಮೆಜಾನ್ ಕಾಡುಗಳು ಕೂಡ ವಿನಾಶದತ್ತ ಮುಖ ಮಾಡಿವೆ. ನಮ್ಮ ದೇಶದ ನದಿಗಳು, ಕೆರೆಗಳು ಮನುಕುಲದ ಇತಿಹಾಸದಲ್ಲಿ ಪ್ರಥಮ ಬಾರಿಗೆ ಮನುಷ್ಯರ ಮಲ, ಕಾರ್ಖಾನೆಗಳ ಮಲ, ಅಣು ಸ್ಥಾವರಗಳ ಮಲವನ್ನು ಹೊತ್ತೊಯ್ಯುವ ಅವಮಾನಕ್ಕೆ ತುತ್ತಾಗಿವೆ. ಈ ದೃಷ್ಟಿಯಿಂದ ನೋಡಿದರೆ ಭಾರತದಲ್ಲಿ ಮಲ ಹೊರುವ ಪದ್ಧತಿಯು ವಿರಾಟ್ ಸ್ವರೂಪದಲ್ಲಿದೆ. ನಮ್ಮ ದೇಶದ ಕಾಡುಗಳಲ್ಲಿರುವ ಅಮೂಲ್ಯ ಗಿಡಮೂಲಿಕೆಗಳನ್ನು ಬಹುರಾಷ್ಟ್ರೀಯ ಕಂಪೆನಿಗಳಿಗೆ ಪೇಟೆಂಟ್ ನೀಡಿದ್ದೇವೆ. ಬೇವಿನ ಬೇರಿನಿಂದ ಹಿಡಿದು ಹೂವಿನವರೆಗೆ ಎಲ್ಲ ಭಾಗಗಳನ್ನು ಪೇಟೆಂಟ್ ಕೊಟ್ಟಿರುವುದು ಜೀತ ಪದ್ಧತಿಯಲ್ಲವೇನು? ದಖ್ಖನ್ ಪ್ರಸ್ಥಭೂಮಿಯ ಮಾಂಸಖಂಡಗಳಂತಿರುವ ಬೆಟ್ಟಗುಡ್ಡಗಳನ್ನು ಕ್ಯುಬಿಕ್ ಅಳತೆಗಳಲ್ಲಿ ಕತ್ತರಿಸಿಟ್ಟು ವಿದೇಶಗಳಿಗೆ ರಫ್ತು ಮಾಡುತ್ತಿರುವುದು ನನ್ನ ಕಣ್ಣಿಗೆ ಒಂದು ಅತ್ಯಾಚಾರ ಪ್ರಕರಣದಂತೆಯೇ ಕಾಣುತ್ತಿದೆ. ಪ್ರತಿ ಬೇಸಿಗೆಯಲ್ಲೂ ಕಿಡಿಗೇಡಿಗಳಿಂದ ಸಜೀವ ದಹನವಾಗುತ್ತಿರುವ ಕಾಡು ಪ್ರದೇಶಗಳು ಜೀವ ಸಂಕುಲಗಳ ಮಾರಣ ಹೋಮಕ್ಕೆ ಉದಾಹರಣೆಯಾಗಿದೆ. ಒಬ್ಬ ಯಃಕಶ್ಚಿತ್ ಮನುಷ್ಯ ತನ್ನ ಕೈಯಲ್ಲಿ ಸ್ವಯಂಚಾಲಿತ ಗರಗಸವನ್ನು ಹಿಡಿದು ಗಗನಚುಂಬಿ ವೃಕ್ಷವನ್ನು ಕೆಲವೇ ಸೆಕೆಂಡುಗಳಲ್ಲಿ ಧರಾಶಾಯಿಗೊಳಿಸಿದ ಕೃತ್ಯಗಳನ್ನು ಕಂಡು ನಾನು ಬೆಚ್ಚಿ ಬಿದ್ದಿದ್ದೇನೆ.

'ಹಸಿರುಗೋಳ'ವೆಂದು ಹೆಸರಾದ ಭೂಗ್ರಹ-ತೀವ್ರಗತಿಯ ಅರಣ್ಯನಾಶ, ಕಾಳ್ಗಿಚ್ಚುಗಳಿಗೆ ಬಲಿಯಾಗಿ ಕಾರ್ಬನ್ ಮೂಲದ ವಿಸರ್ಜಿತಗಳನ್ನು ಹೀರಿಕೊಳ್ಳುವಷ್ಟು ಸಸ್ಯಸಂಪತ್ತಿಲ್ಲದೆ, ಭೂ ವಾತಾವರಣದಲ್ಲಿ ಏರುಪೇರುಗಳುಂಟಾಗಿ ಧ್ರುವ ಪ್ರದೇಶದ ಹಿಮದ ಟೊಪ್ಪಿಗೆಗಳು ಕರಗಿಹೋಗುತ್ತಿವೆ. ಮುಂಬರುವ ದಶಕಗಳಲ್ಲಿ ಸಾಗರ ಮಧ್ಯದ ಅನೇಕ ದ್ವೀಪಗಳಲ್ಲಿ ಜಲಸಮಾಧಿಯಾಗುವ ಸಾಧ್ಯತೆಗಳು ಕಂಡುಬರುತ್ತಿವೆ. ಕರ್ನಾಟಕವನ್ನೆ ತೆಗೆದುಕೊಂಡರೆ ಬಯಲು ಸೀಮೆಯ ಕೋಲಾರ ಚಿತ್ರದುರ್ಗ-ತುಮಕೂರು ಜಿಲ್ಲೆಗಳು ಗಂಭೀರವಾದ ಅಂತರ್ಜಲ ಕುಸಿತದ ಅಪಾಯವನ್ನು ಎದುರಿಸುತ್ತಿದ್ದು ಮುಂಬರುವ ದಶಕಗಳಲ್ಲಿ ನೀರಿಗಾಗಿ ಪರದಾಡುವ ಕಪ್ಪು ವಲಯಗಳಾಗಿ ಗುರುತಿಸಲ್ಪಟ್ಟಿವೆ. ಡಾಲರ್ ದೇಶಗಳ ಪಾಲಿಗೆ ಭಾರತದಂತಹ ಡಾಲರೇತರ ದೇಶಗಳು ಕಸದ ತೊಟ್ಟಿಗಳಾಗಿವೆ; ಅವರಿಗೆ ಬೇಡವಾದ ಉದ್ಯಮಗಳು, ಬೃಹತ್ ಪ್ರಮಾಣದ ವಿಸರ್ಜಿತಗಳಿಗಾಗಿ ಅಂಗಲಾಚುತ್ತಾ ನಿಲ್ಲುವ ಪರಿಸ್ಥಿತಿಯನ್ನು ತ್ರಿಕರಣ ನಿಷ್ಠೆಯಿಂದ (ಉದಾರೀಕರಣ - ಖಾಸಗೀಕರಣ - ಜಾಗತೀಕರಣ) ನಮ್ಮ ಅದಲು ಬದಲು ಸರ್ಕಾರಗಳು ನಿರ್ಮಾಣ ಮಾಡುತ್ತಿವೆ. ಜನ್ಮ ಆಧಾರಿತ ಅಸಮಾನತೆಯ ಮತ್ತು ವರ್ಗ ಆಧಾರಿತ ಅಸಮಾನತೆಯಂತೆಯೇ ಇಲ್ಲಿ ಪ್ರಗತಿ ಆಧಾರಿತ ಅಸಮಾನತೆಯನ್ನೂ ಮನಗಾಣಬಹುದು. ಇದು ಗ್ರಾಮ-ನಗರ, ದೇಶ-ವಿದೇಶಗಳೆಂಬ ವಿಸ್ತೃತ ಜಾಲದಲ್ಲಿ ಪ್ರಕಟಗೊಳ್ಳುತ್ತಲಿದೆ.

ನಮ್ಮ ದೇಶದ ಅರಣ್ಯ ಉತ್ಪನ್ನಗಳ ಮೇಲೆ ಸ್ವದೇಶಿ ಬಂಡವಾಳಶಾಹಿಗಳು ಸ್ಥಾಪಿಸುತ್ತಿರುವ ಯಜಮಾನಿಕೆ ಹಾಗೂ ಆಸೇತು ಹಿಮಾಚಲ ಪರ್ಯಂತ ಜೈವಿಕ ಪರಿಸರದ ಮೇಲೆ ವಿದೇಶಿ ಬಂಡವಾಳಶಾಹಿಗಳು ಸ್ಥಾಪಿಸುತ್ತಿರುವ ಆಧಿಪತ್ಯ - ಇವು ಪರೋಕ್ಷವಾಗಿ ಅರಣ್ಯ ಮತ್ತು ಜೈವಿಕ ಪರಿಸರಗಳನ್ನೇ ನಂಬಿಕೊಂಡಿರುವ ಬಹುಸಂಖ್ಯಾತರಾದ ಕೆಳ ವರ್ಗದ ಪ್ರಜಾಸಮುದಾಯಕ್ಕೆ ಕೊಡುತ್ತಿರುವ ಬಲವಾದ ಪೆಟ್ಟು ಆಗಿದೆ ಎಂಬುದನ್ನು ಗ್ರಹಿಸದಿದ್ದರೆ ಪ್ರಧಾನ ಶತ್ರುವಿನ ವಿರಾಟ್ ಸ್ವರೂಪವನ್ನರಿಯದ ಎಗ್ಗತನಕ್ಕೆ ಒಳಗಾಗುತ್ತೇವೆ. ಪರಿಸರದ ಬಗ್ಗೆ ಎಬ್ಬಿಸಿರುವ ಕೂಗು ದಲಿತರ ಕೂಗು ಹೌದೋ ಅಲ್ಲವೋ ಎಂಬ ಚರ್ಚೆಗೆ ತೊಡಗುವ ಮುನ್ನ ನಾವೆಲ್ಲರೂ ನೆನಪಿನಲ್ಲಿಡಬೇಕಾದ ವಿಚಾರವೆಂದರೆ ಮಾಲಿನ್ಯಮುಕ್ತ ಭೂಗೋಳಕ್ಕಾಗಿ ನಡೆಸುವ ಹೋರಾಟವು ವಾಸ್ತವವಾಗಿ ಪರಿಶೀಲಿಸಿದಲ್ಲಿ ಮಾಲಿನ್ಯ ಮುಕ್ತ ಅನ್ನಕ್ಕಾಗಿ ನಡೆಸುವ ಹೋರಾಟವೆಂಬುದನ್ನು ಗ್ರಹಿಸಬೇಕು. ಅನ್ನ ಎಂದರೆ ಬೇಯಿಸಿದ ಅಕ್ಕಿ ಮಾತ್ರವಲ್ಲ! ಮಣ್ಣು-ನೀರು-ಗಾಳಿ-ಬೆಳಕು ಕೂಡ ಅನ್ನಗಳೇ ಎಂಬುದನ್ನು ಕವಿ ಬೇಂದ್ರೆ ಅನ್ನ ಎಂಬ ವಿಚಾರಪೂರ್ಣ ಲೇಖನದಲ್ಲಿ ಸಮರ್ಥವಾಗಿ ನಿರೂಪಿಸಿದ್ದಾರೆ. ಜಾತಿಯ ಸಮಸ್ಯೆಗಳಿಗೆ, ರಾಷ್ಟ್ರೀಯ ಸಮಸ್ಯೆಗಳಿಗೆ ಸರಹದ್ದುಗಳಿರುತ್ತವೆ. ಆದರೆ ಪರಿಸರ ಸಮಸ್ಯೆಗಳಿಗೆ ಯಾವುದೇ ಸರಹದ್ದುಗಳಿಲ್ಲ. ಜಾಗತಿಕವಾದ ಆಲೋಚನೆ ಮತ್ತು ಕ್ರಿಯೆ ಎಂಬುವುದೇ ಪರಿಸರ ಕಾಳಜಿಯ ಮೂಲತತ್ವವಾಗಿದೆ. ಒಟ್ಟಿನಲ್ಲಿ ಪಂಚಭೂತಗಳೊಂದಿಗೆ ಹೊಕ್ಕುಳುಬಳ್ಳಿ ಸಂಬಂಧವನ್ನು ಹೊಂದಿರುವುದೇ ದಲಿತ ಸಂಸ್ಕೃತಿಯ ವೈಶಿಷ್ಟ್ಯವಾಗಿದೆ. ಈ ದೃಷ್ಟಿಯಿಂದ ನೋಡಿದರೆ ಪಂಚಭೂತಾತ್ಮಕ ದಲಿತ ಭೂಗೋಳದ ಪರಿಕಲ್ಪನೆಯು ಜಾತಿನಿಷ್ಠೆಯಿಂದಾಗಿ ಪ್ರತ್ಯೇಕ ಕಾಲೂನಿಯಾಗಿಬಿಡುವ ದಲಿತ ಚಳುವಳಿ, ದಲಿತ ಸಾಹಿತ್ಯವನ್ನು ಸ್ಥಾವರತೆಯ ಗರ್ಭದಿಂದ ಪಾರು ಮಾಡುವ ಚಲನಶೀಲ ಆಯಾಮವಾಗಿದೆ.

ವಿ. ಚಂದ್ರಶೇಖರ ನಂಗಲಿ
೩೮೮೪, ಪಿ. ಸಿ. ಬಡಾವಣೆ, ಕೋಲಾರ-೫೬೩೧೦೧

# ವಿಶ್ವಮಾನವನ ಕನಸು ಎತ್ತ ಸಾಗುತ್ತಿದೆ ?

ಪ್ರಚಲಿತ ಮಾಸಪತ್ರಿಕೆಯೊಂದು ಕುವೆಂಪುರವರನ್ನು 'ಶತಮಾನದ ಕನ್ನಡಿಗ' ಎಂದು ನಿರ್ಧರಿಸಿ ತನ್ನ ಆಯ್ಕೆಯನ್ನು ಸಮರ್ಥಿಸುತ್ತ ಓದುಗರ ಅಭಿಪ್ರಾಯವನ್ನು ಹೀಗೆ ವಿಶ್ಲೇಷಿಸಿದೆ: 'ಕುವೆಂಪು ಅಂದು ಬ್ರಾಹ್ಮಣ ಮಯವಾಗಿದ್ದ ಸಾಹಿತ್ಯವನ್ನು ಹೊಸ ದಿಕ್ಕಿಗೆ ಕೊಂಡೊಯ್ದರು. ನಂತರ ಒಕ್ಕಲಿಗರಿಗೆ ಹಾಗೂ ಲಿಂಗಾಯಿತರಿಗೆ ಆತ್ಮವಿಶ್ವಾಸ ತುಂಬಿ ರಾಜಕೀಯದಲ್ಲಿ ಮುಂದೆ ಬರಲು ಪ್ರೋತ್ಸಾಹಿಸಿದರು'. ಬಹುಶಃ ಕುವೆಂಪುಗೆ ಅವಮಾನ ಮಾಡಲು ಈ ಮಾತುಗಳಿಗಿಂತ ಬೇರಾವೂ ಸಿಗಲಾರವು ! ವಿಶ್ವಮಾನವ ಸಂದೇಶ ಸಾರಿದ ಮಹಾತ್ಮ ಯಾವುದೋ ಜಾತಿಗಳ ಬೆಳವಣಿಗೆಗೆ ಸೀಮಿತರಾಗಿಬಿಟ್ಟರೇ......?

ಹೌದು, ನಮ್ಮ ಭಾರತದ ಪರಂಪರೆಯೇ ಹೀಗೇನೋ! ಮಹಾಮಾನವತಾವಾದಿ ಬಸವಣ್ಣ ವೀರಶೈವರ ಆಸ್ತಿ, ಕನಕದಾಸ ಕುರುಬರ ಸ್ವತ್ತು ! ಭವ್ಯ ಕನಸುಗಾರ ಅಂಬೇಡ್ಕರ್ ಮತ್ತೊಂದು ವರ್ಗಕ್ಕೆ ಮಾತ್ರ ಸೀಮಿತ. ಇದೇ ಸರದಿಯಲ್ಲಿ ಈಗ ರಸಋಷಿ, ಅದ್ವಿತೀಯ ಕವಿ, ಕಾದಂಬರಿಕಾರ, ನಾಟಕಕಾರ ಕುವೆಂಪು ! ಇನ್ನು ಕೆಲವೇ ದಿನಗಳಲ್ಲಿ ಇವರ ಭಾವಚಿತ್ರಗಳನ್ನು ಪೂಜಿಸುವ ಜನ ಹುಟ್ಟುತ್ತಾರೆ. ಬುದ್ಧ, ಬಸವರಂತೆ ಇವರ ತಲೆಯ ಹಿಂದೆಯೂ ಒಂದು ಪ್ರಭಾವಳಿ ಸೃಷ್ಟಿಯಾಗುತ್ತದೆ. ಪ್ರತಿದಿನವೂ ಪೂಜೆ, ಪುನಸ್ಕಾರ, ಮಂಗಳಾರತಿಗಳು ಸಾಂಗವಾಗಿ ನೆರವೇರುತ್ತವೆ.

ಸಿಲುಕದಿರಿ ಮತವೆಂಬ ಮೋಹದ ಜ್ವಾಲಕ್ಕೆ;
ಮತಿಯಿಂದ ಮಡಿಯಿರೈ ಲೋಕಹಿತಕೆ
ಸಾಕಿನ್ನು ಸೇರಿರೈ ಮನುಜಮತಕೆ !

ಓ, ಬನ್ನಿ ಸೋದರರೇ ವಿಶ್ವಪಥಕೆ !

ಕುವೆಂಪು ಮನುಜಮತಕ್ಕೆ ಯುವಕರನ್ನು ಹೀಗೆ ಆಹ್ವಾನಿಸಿದರು. ಹಳೆಯ ಎಲ್ಲ ಗೊಡ್ಡುಮತಗಳನ್ನು ತೂರಿ ಹೊಸಮತಕ್ಕೆ ಬನ್ನಿ ಎಂದು ಅಂದು ಅವರು ನೀಡಿದ ಆಹ್ವಾನವೇ ಇಂದು ಕುವೆಂಪು ವಿಚಾರಧಾರೆಯ ಕನಸನ್ನ ನುಚ್ಚುನೂರು ಮಾಡಲು ಮೂಢರಿಗೆ ಸಾಕಾಯಿತೇನೋ ? ಎಲ್ಲರೂ ಸಮಾನರು, ಕಾಯಕವೇ ಕೈಲಾಸ ಅಂತ ಸಾರಿ 'ಅನುಭವಮಂಟಪ'ಕ್ಕೆ ಸಮಸ್ತರನ್ನು ಆಹ್ವಾನಿಸಿದ ಬಸವಣ್ಣನವರಿಗೆ ಆದ ಗತಿಯೇ ಇಂತಹುದು. ''ಕುಲಕುಲಕುಲವೆಂದು ಹೊಡೆದಾಡದಿರಿ, ನಿಮ್ಮ ಕುಲದ ನೆಲೆಯನೇನಾದರೂ ಬಲ್ಲಿರಾ'' ಎಂದು ಸಾರಿದ ಕನಕದಾಸನ ನೆರಳಲ್ಲಿ ಕಾಗಿನೆಲೆಯಲ್ಲೇ ಮತ್ತೊಂದು ಮತಪೀಠ ಸ್ಥಾಪನೆಯಾಯಿತು ! ಸಾಕಿಷ್ಟು ಉದಾಹರಣೆಗಳು.

ಯಾರ್‍ಯಾರು ಹೊಸದೊಂದು ದಿಕ್ಕನ್ನು ತೋರಿಸಿ ವಿಕಾಸಗೊಳ್ಳಲು ಕರೆಕೊಟ್ಟರೋ ಅವರನ್ನೆಲ್ಲ ಬಂಧಿಸಿತು ಈ ಜನ. ಶಿವರಾಮ ಕಾರಂತರಾಗಲಿ, ಬೇಂದ್ರೆಯವರಾಗಲಿ ಹೊಸದೊಂದು ವಿಶಾಲ ಧರ್ಮದ ಕಡೆಗೆ ಯಾರನ್ನೂ ತಮ್ಮ ಸಾಹಿತ್ಯದ ಮೂಲಕ ಆಹ್ವಾನಿಸಿಬಿಟ್ಟಿದ್ದರೆ ಇವರಿಗೂ ಇದೇ ಗತಿಯಾಗುತ್ತಿತ್ತು.

'ವಿಚಾರಕ್ರಾಂತಿಗೆ ಕರೆ', 'ಆತ್ಮಶ್ರೀಗಾಗಿ ನಿರಂಕುಶ ಮತಿಗಳಾಗಿ', 'ಜನತಾಪ್ರಜ್ಞೆ ಮತ್ತು ವೈಚಾರಿಕ ಜಾಗೃತಿ' ಎಂಬ ಅನೇಕ ವಿಚಾರವಂತ ಲೇಖನಗಳ ಮೂಲಕ ಯುವಕರ ಭವಿಷ್ಯವನ್ನೇ ಉದ್ದೀಪನಗೊಳಿಸಲು ಪ್ರಯತ್ನಪಟ್ಟವರು ಕುವೆಂಪು. ಇಂದು ವೈಚಾರಿಕತೆ ಯಾವ ಕಡೆ ಸಾಗುತ್ತಿದೆ ?

ಮುಖ್ಯವಾಗಿ ಇಂದಿನ ಸಮಾಜದಲ್ಲಿ ನುಡಿದಂತೆ ನಡೆಯುವವರಿಲ್ಲ. ಓದಿದಂತೆ ಜಾಗೃತರಾಗುವವರಿಲ್ಲ. ಕುವೆಂಪು, ವಿವೇಕಾನಂದ, ಗಾಂಧಿ ಅವರನ್ನು ಓದಿಕೊಂಡಂತೆ ತಿರುಗುವ ಬುದ್ಧಿಜೀವಿಗಳು ಎನಿಸಿಕೊಳ್ಳುವ ಜನ ಇಂದು ಮಾಡುತ್ತಿರುವುದೇನು ? ಅಬ್ಬಬ್ಬಾ ! ಅಂದರೆ ಒಂದು ಜಾತಿ ಸಂಘ ಕಟ್ಟಿ ತಮ್ಮ ಮೀಸಲಾತಿಗೆ ಸತ್ಯಾಗ್ರಹ ಮಾಡುತ್ತಾರೆ, ಹೋರಾಟ ನಡೆಸುತ್ತಾರೆ ! ವಿದ್ಯಾರ್ಥಿ ಮಟ್ಟದಲ್ಲಿಯೇ ಯುವಕರಲ್ಲಿ ಜಾತೀಯತೆ ಬಿತ್ತುತ್ತಾರೆ. ಇನ್ನೂ ಮುಂದೆ ಹೋಗಿ ರಾಜಕೀಯ ಪುಢಾರಿಯಾಗುತ್ತಾರೆ.

ನಾವು ದಿನಂಪ್ರತಿ ನೋಡುವುದೇ ಇದನ್ನ. ಲಕ್ಷಗಟ್ಟಲೆ ಆದಾಯವಿದ್ದರೂ ಆದಾಯ ಪ್ರಮಾಣ ಪತ್ರ ಸಲ್ಲಿಸಿ ಸೌಲಭ್ಯಪಡೆಯುವ ಬುದ್ಧಿಜೀವಿಗಳು (?) ಎಷ್ಟು ಜನ ಬೇಕು ? ವಿವೇಕಾನಂದರಿಂದ ತುಂಬಾ ಪ್ರಭಾವಕ್ಕೊಳಗಾಗಿದ್ದೇನೆ ಎನ್ನುವ ಜನ ತರಗತಿಗಳಲ್ಲಿ ಗುಂಪು ಕಟ್ಟುತ್ತಾರೆ. ಸಹ ವಿದ್ಯಾರ್ಥಿನಿಯರೊಂದಿಗೆ ತೀರಾ ಕೆಳಮಟ್ಟದಲ್ಲಿ ವರ್ತಿಸುತ್ತಾರೆ. ಇವರೇ ಭಾರತದ ಭಾವಿ ಭವ್ಯ ಪ್ರಜೆಗಳು.

ಇಂದಿನ ಬಹುತೇಕ ಶಿಕ್ಷಕರು ಈ ಅಪವಾದದಿಂದ ಹೊರತೇನಲ್ಲ. ನಾಲ್ಕು ಗೋಡೆಯ ಮಧ್ಯೆ ತರಗತಿಗಳಲ್ಲಿ, ಸಾರ್ವಜನಿಕ ಸಮಾರಂಭಗಳಲ್ಲಿ ಆದರ್ಶ ಸಮಾಜದ ಬಗ್ಗೆ ಉಪದೇಶ ಮಾಡುವ ಜನ ದೈನಂದಿನ ಜೀವನದಲ್ಲಿ ಮಾಡುವುದೇನನ್ನ ! ಮೌಲ್ಯಮಾಪನದಲ್ಲಿ ಅಕ್ರಮ, ಪ್ರಾಯೋಗಿಕ ಅಂಕಗಳನ್ನು ನೀಡುವಾಗ ತಾರತಮ್ಯ, ಇನ್ನೂ ಮುಂದೆ ಹೋಗಿ ೨೦,೦೦೦ ರೂ.ಗಳಿಗೆ ಪಿಎಚ್.ಡಿ ಪದವಿ ಮಾರುವುದು ! ಇಂಥ ಶಿಕ್ಷಕ ಸಮೂಹದಿಂದ ಎಂತಹ ಸಮಾಜ ನಿರ್ಮಾಣವಾಗಬಲ್ಲುದು ?

ಹೋಗಲಿ ತಿಂಗಳ ಕೊನೆಯಲ್ಲಿ ಸಂಬಳ ಎಣಿಸುತ್ತಾರಲ್ಲ ಅದಕ್ಕಾದರೂ ನಿಯತ್ತಾಗಿ ಪಾಠ ಮಾಡುತ್ತಾರಾ ? ಅದೂ ಇಲ್ಲ; ವಿದ್ಯಾರ್ಥಿಗಳು ವಾರಕ್ಕೆರಡು ಸ್ಟ್ರೈಕ್ ನೆಪಹಚ್ಚಿ ಕಾಲೇಜನ್ನು ಮುಚ್ಚಿಸುತ್ತಾರೆ; ನಿಗದಿತವಾಗಿ ತರಗತಿಗಳಲ್ಲಿ ಹಾಜರಾಗುವವರೂ ಬೆರಳೆಣಿಕೆಯಷ್ಟು ಮಂದಿ !

ಇಂತಹ ಸಂದಿಗ್ಧ ಪರಿಸ್ಥಿತಿಯ ನಡುವೆಯೂ ನುಡಿದಂತೆ ನಡೆದುಕೊಳ್ಳುತ್ತಾ, ವಿದ್ಯಾರ್ಥಿ ಸಮೂಹದೊಂದಿಗೆ ಸಹಕರಿಸುತ್ತಾ ಪ್ರತಿಭೆಗಳಿಗೆ ಪ್ರೋತ್ಸಾಹಿಸುತ್ತಿರುವ ಕೆಲವು ಮಂದಿಯಾದರೂ ನಮ್ಮೊಂದಿಗಿರುವುದು ನಮ್ಮ ಸೌಭಾಗ್ಯವೇ ಸರಿ.

ಏನೇ ಆಗಲಿ ೨೧ನೇ ಶತಮಾನದಲ್ಲಾದರೂ ವಿಶ್ವಮಾನವನ ಕನಸುಗಳು ನನಸಾಗುತ್ತವೆಂದು ಆಶಿಸೋಣವೇ ?

ಪಿ. ಟಿ. ಸತೀಶ್
[illegible] ವಿದ್ಯಾರ್ಥಿ, ಮಹಾರಾಜಾ ಕಾಲೇಜು
[illegible]

## ಗುಂಡಣ್ಣನ ವೆಬ್ ಸೈಟು!

ಅಂಥಾಂಗ ಇಂದಿನ ಜಮಾನಾದಾಗ
ಈ - ಮೇಲು, ಮೊಬೈಲ್ ಫೋನು
ಪೇಜರ್ ಗೀಜರ್‌ಗಳೇ ಗಿಜುಗುಟ್ಟುತ್ತಿರುವಾಗ
ಮಾಹಿತಿ ತಂತ್ರಜ್ಞಾನದ ಅಬ್ಬರವೇ
ಎಲ್ಲೆಡೆ ಉಬ್ಬೇರಿರುವಾಗ
ವೆಬ್ ಸೈಟ್ ಉಳ್ಳವನೇ ಗಬರೂ
ಎಂಬ ಭಾವನೆ ಸರ್ವತ್ರ ಹಬ್ಬಿರುವಾಗ
ಉಬ್ಬುಬ್ಬಿ ಬೊಬ್ಬೆ ಕುಟ್ಟಿದ
ನಂ ಗುಂಡಣ್ಣ ಎತ್ತರದ ದನಿಯಲಿ
'ನಂದೂ ಒಂದು ವೆಬ್ ಸೈಟು
ಹೊಂದಿಸ್ಕೊಂಡೀನಿ ನೋಡ ಬರ್‍ರ್ಯೋ' ಎಂದು

'ಮಬ್ಬು ಮುಂಡೇದು, ಎಂಥ ವೆಬ್ ಸೈಟ್
ಹೊಂದೇದ?' ಅಂತ ತಬ್ಬಿಬ್ಬಾಗಿ
ಗುಂಡಣ್ಣನ ಗಬ್ಬು ನಾತಿನ
ಕೋಣೆ ಹೊಕ್ಕು ಕಂಡಾಗ ತಲೆಬಾಗಿ,
ಕಾಣಿಸಿತಲ್ಲಿ ಕತ್ತಲೆ ಕವಿದ ಮೂಲೆಯಲ್ಲಿ
ಜೇಡ ನೇಯ್ದ ವಿಸ್ತಾರದ ಬಲೆ!
ಹಾಬ್ ವೆಬ್ ಸೈಟು!!

ಈ ಹಾಬ್ ವೆಬ್ ಸೈಟ್‌ನ್ನೇ ಕಂಡು
ಗುಂಡ ಬೀಗಿಕೊಂಡು ಸಾರಿದ್ದ
ತನ್ನದೊಂದು; ವೆಬ್ ಸೈಟ್ ಉಂಟೆಂದು
ಮಬ್ಬು ಹರಿದಾಗ ಮನಸಾರೆ ನಕ್ಕೆವು
ಗುಂಡಣ್ಣ ನೇಯ್ದ ಮಾತಿನ ಬಲೆಯಲಿ
ಅನಾಯಾಸ ಹುಳುಗಳಂತೆ ಸಿಕ್ಕೆವು;
ಸಿಕ್ಕು ಬಿದ್ದೆವು!

ಅನಂತ ಕಲ್ಲೋಳ
೫೦೬, ಕುಲಕರ್ಣಿ ಬೀದಿ, ಬೆಳಗಾವಿ-೨

# ಬಡವರ ಭಾಗ್ಯವಿಧಾತ - ವಿ.ಐ.ಲೆನಿನ್



*ಭಾರಿ ಭೂಮಾಲೀಕರು ಹಾಗೂ ಕೈಗಾರಿಕೋದ್ಯಮಿಗಳು ಒಂದಾಗಿ ತ್ಸಾರನ ಆಡಳಿತವು ಜನರಿಗೆ ಹಿಂಸೆಯ ಕೂಪವಾಗಿ ಪರಿಣಮಿಸಿತ್ತು. ಜನತೆಯ ನಾಡಿಮಿಡಿತವನ್ನು ಗ್ರಹಿಸಿದ ಲೆನಿನ್ ಕ್ರಮೇಣ ಕ್ರಾಂತಿಯ ಹಾದಿಯಲ್ಲಿ ಹೋರಾಟಗಳನ್ನು ಸಂಘಟಿಸಿ ಹೊಚ್ಚ ಹೊಸ ಸಾಮಾಜಿಕ - ಆರ್ಥಿಕ ವ್ಯವಸ್ಥೆಯೊಂದನ್ನು ಅಸ್ತಿತ್ವಕ್ಕೆ ತಂದರು. ''ನೀನಿಲ್ಲ, ಆದರೆ ನಿನ್ನಷ್ಟು ಜೀವಂತವಿರುವ ಬೇರಾವನಿದ್ದಾನೆ'' ಎಂದು ಕವಿ ಮಯಕೋವ್‌ಸ್ಕಿ ಬಹಳ ಹಿಂದೆಯೇ ಹಾಡಿದ. ಆತನ ಇಂಗಿತ ಇಂದಿಗೂ ನಿಜ.*

ಒಂದು ಸಹಸ್ರಮಾನ ಕಳೆದು ಇನ್ನೊಂದರ ಹೊಸ್ತಿಲಿನಲ್ಲಿರುವ ನಾವಿಂದು ಕಳೆದ ಸಹಸ್ರಮಾನದಲ್ಲಿ ಕಂಗೊಳಿಸಿದ ಮಹೋಜ್ಜ್ವಲಮತಿಗಳ ಹೆಸರುಗಳನ್ನು ನೆನಪಿಸಿಕೊಳ್ಳುವುದು ಸಹಜವೇ. ಹಾಗೆ ನೋಡಿದಾಗ ಅಂತಹ ಮಹಾಮಹಿಮರ ಮಧ್ಯೆ ರಷ್ಯದ ರಾಷ್ಟ್ರಪಿತ ವಿ. ಐ. ಲೆನಿನ್ ಮೇರುಪುರುಷರಾಗಿ ಎದ್ದುಕಾಣುತ್ತಾರೆ.

ನಮ್ಮ ರಾಷ್ಟ್ರಪಿತ ಮಹಾತ್ಮ ಗಾಂಧಿಯವರಂತೆಯೇ ಲೆನಿನರೂ ತಮ್ಮ ಜೀವಮಾನ ಪೂರ್ತಿ ತಮ್ಮ ತಾಯ್ನಾಡಿನ ಏಳಿಗೆಗಾಗಿ ಶ್ರಮಿಸಿ ಹುತಾತ್ಮರಾದರು. ಅವರಂತೆ ಇವರೂ ಜಗದ್ವಂದ್ಯರಾಗಿ ಇತಿಹಾಸದ ಪುಟಗಳಲ್ಲಿ ಶಾಶ್ವತ ಸ್ಥಾನ ಪಡೆದಿದ್ದಾರೆ. ಅವರ ನೆನಪು, ಅವರ ನಾಮಸ್ಮರಣೆ, ಅವರು ಎಸಗಿದ ಶ್ರೇಷ್ಠ ಕಾರ್ಯ-ಕೃತಿಗಳು ಎಲ್ಲ ದೇಶಗಳ ಜನಾಂಗಗಳ ರಾಷ್ಟ್ರಪ್ರೇಮಿಗಳಿಗೂ ಸ್ಫೂರ್ತಿಯ ಸೆಲೆಯಾಗಿವೆ. ಇದು ಕೇವಲ ರಷ್ಯನ್ ಜನರಾಗಲಿ, ಲೆನಿನ್ ವಿಚಾರಧಾರೆಯ ಅನುಯಾಯಿಗಳಾಗಲಿ ಹೇಳುವಂಥ ಮಾತಲ್ಲ. ಅವರ ವಿರೋಧಿಗಳೂ ಇದನ್ನು ಮಾನ್ಯ ಮಾಡಿದ್ದಾರೆ.

ನಮ್ಮ ನಾಡಿಗೆ ಸ್ವಾತಂತ್ರ್ಯ ದೊರಕಿಸಿ ಕೊಡುವುದರಲ್ಲಿ ನಿಸ್ಸೀಮ ಪಾತ್ರವಹಿಸಿದರು, ನಿಜ. ಆದರೆ ದೇಶದ ಪುನರ್ ನಿರ್ಮಾಣ ಕಾರ್ಯದಲ್ಲಿ ಮಾರ್ಗದರ್ಶಕರಾಗಿದ್ದರಷ್ಟೇ ಹೊರತು ಪ್ರಾಯೋಗಿಕವಾಗಿ ಅಷ್ಟಾಗಿ ಭಾಗವಹಿಸಲಿಲ್ಲವೆಂಬುದನ್ನು ಅಲ್ಲಗಳೆಯಲಾಗದು. ಆ ಕಾರ್ಯವನ್ನೆಲ್ಲ ಅವರು ತಮ್ಮ ನೆಚ್ಚಿನ ಶಿಷ್ಯ ನೆಹರೂರವರಿಗೇ ವಹಿಸಿಕೊಟ್ಟು ಬಿಟ್ಟರು.

ಆದರೆ ಲೆನಿನರು ಹಾಗಲ್ಲ. ಅವರು ತಾತ್ವಿಕ ಹಾಗೂ ಸೈದ್ಧಾಂತಿಕ ಕ್ಷೇತ್ರದಲ್ಲಷ್ಟೇ ಅಲ್ಲ, ಪ್ರಾಯೋಗಿಕ ಕ್ಷೇತ್ರದಲ್ಲೂ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡಿದ್ದರು. ಶ್ರಮಜೀವಿವರ್ಗದ ಕ್ರಾಂತಿಯ ನೇತಾರರಾಗಿ ಅದನ್ನು ಆಗುಮಾಡಿದರಷ್ಟೇ ಅಲ್ಲ, ಅನಂತರ ನವಸಮಾಜ ನಿರ್ಮಾಣದಲ್ಲೂ ತನ್ಮಯತೆಯಿಂದ ಕೊನೆಯುಸಿರೆಳೆಯುವವರೆಗೂ ದುಡಿದರು.

ಈ ದೃಷ್ಟಿಯಲ್ಲಿ ಅವರೊಬ್ಬ 'ಶಕಪುರುಷ'ರೆಂದೇ ಹೇಳಬೇಕು. – ಅವರು ಸಮಾಜವಾದಿ ಶಕೆಯ ಆರಂಭ ಕರ್ತೃವಾಗಿದ್ದರು. ನಿಜ, ಸಮಾಜವಾದಿ ಚಿಂತನೆಗೆ ಅನ್ನುವುದನ್ನು ಸೈದ್ಧಾಂತಿಕವಾಗಿಯಷ್ಟೆ ಅಲ್ಲ ಪ್ರಾಯೋಗಿಕವಾಗಿಯೂ ಮಾಡಿ ತೋರಿಸಿಕೊಟ್ಟರು. ಹಾಗೆಂದೇ ಇಂದು ವೈಜ್ಞಾನಿಕ ಸಮಾಜವಾದಿ ಚಿಂತನೆಯನ್ನು 'ಮಾರ್ಕ್ಸ್‌ವಾದ'ವೆಂದಷ್ಟೇ ಅಲ್ಲ 'ಮಾರ್ಕ್ಸ್‌ವಾದ-ಲೆನಿನ್‌ವಾದ' ಎಂದೇ ವರ್ಣಿಸುವುದು ತೀರ ಸಹಜವಾಗಿದೆ, ಸೂಕ್ತವಾಗಿದೆ.

ಈಗ ಎಲ್ಲರಿಗೂ ವೇದ್ಯವಾಗಿರುವಂತೆ ಮಾರ್ಕ್ಸ್ ಹಾಗೂ ಏಂಗೆಲ್ಸ್‌ರು ತಮ್ಮ ಬರಹಗಳಲ್ಲಿ ವರ್ಗರಹಿತ ಆದಿಮ ಸಮಾಜದ ರೂಪುರೇಷೆಗಳನ್ನು ನೀಡಿ, ಅನಂತರ ಉತ್ಪಾದನಾ ಸಾಧನಗಳು ವಿಕಾಸಗೊಂಡಂತೆ ಹೇಗೆ ಉತ್ಪಾದನಾ ಸಂಬಂಧಗಳಲ್ಲಿ ಬದಲಾವಣೆಗಳಾದವು, ವರ್ಗರಹಿತ ಸಮಾಜ ಲುಪ್ತವಾಗಿ ವರ್ಗ-ವಿಭಜಿತ ಸಮಾಜ ಅಸ್ತಿತ್ವಕ್ಕೆ ಬಂದಿತು, ಅದರೊಂದಿಗೇ ಭೂಮಾಲಿಕರ, ಆಸ್ತಿ ಒಡೆಯರ, ಬಂಡವಾಳಶಾಹಿಗಳ ಆಳ್ವಿಕೆ ಹಾಗೂ ಅವರಿಂದ ಶ್ರಮಜೀವಿಗಳ ಮಿಗುತಾಯ ಮೌಲ್ಯದ ಅಪಹರಣವಾಗಿ ನಿರ್ದಯ ಶೋಷಣೆ ಆರಂಭವಾಯಿತು ಅನ್ನುವುದನ್ನು ತಿಳಿಸಿಕೊಟ್ಟು,

ನಮ್ಮ ಕವಿವರ್ಯ ಕುವೆಂಪುರವರೂ ''***ಧಮನಿಯಲಿ ಬಿಸಿನೆತ್ತರುಕ್ಕದೆ ನೆನೆಯಲಾರೆ ನಿನ್ನಂ, ಲೆನಿನ್!***'' ಎಂದು ಲೆನಿನ್ ಬಗೆಗಿನ ತಮ್ಮ ಮೆಚ್ಚಿಕೆಯನ್ನು ಸೂಚಿಸಿ, ''***ನಿನ್ನ ಹೆಸರದು ಸಿಡಿಲ್‌ಸದ್ದು ದೊರೆಗಿವಿಗೆ ... ಜಮದಗ್ನಿ ಸುತನಂತೆ ನೀನು ಪಾರ್ಥಿವ ಕುಲಕೆ ಬಡಬಾಗ್ನಿ; ದುಡಿವ ದೀನರ ದೈವವನ್ಯರ್ಗೆ ಯಮದಂಡ...***'' ಎಂದು ಲೆನಿನರ ಹಿರಿಮೆಗರಿಮೆಗಳನ್ನು ಪ್ರಶಂಸಿಸುತ್ತ ೧೯೩೭ರಲ್ಲಿ ಒಂದು ಕವನವನ್ನೇ ರಚಿಸಿದ್ದಾರೆ. ಅಲ್ಲದೆ ಲೆನಿನ್ ಕುರಿತ ಕಿರು ಹೊತ್ತಗೆಯೊಂದು ಭಾರತದಲ್ಲಿ ಕರ್ನಾಟಕದಲ್ಲೇ ಮೊದಲ ಬಾರಿಗೆ ಪ್ರಕಟವಾಯಿತೆಂಬುದನ್ನೂ ಇಲ್ಲಿ ನೆನಪಿಸಬಹುದಾಗಿದೆ. ಅದು ಕೃಷ್ಣ ಗುರು ಸಂಗಮರದು.

**ಶಕಪುರುಷ.....**

ಆದರೂ ಲೆನಿನ್, ಇತರೆಲ್ಲ ಮಹಾಪುರುಷರಂತಲ್ಲದ ಒಬ್ಬ ಅನನ್ಯಾದೃಶ ವ್ಯಕ್ತಿಯಾಗಿದ್ದರು ಅನ್ನುವ ಮಾತನ್ನೂ ಇಲ್ಲಿ ಒತ್ತಿ ಹೇಳಬೇಕು. ಏನು ಇವರ ವೈಶಿಷ್ಟ್ಯ? –ಇತರೆಲ್ಲ ಮಹಾಮಹಿಮರ ಕಾರ್ಯಕಲಾಪಗಳೂ ಹೆಗ್ಗಳಿಕೆಗಳೂ ವೈಚಾರಿಕ ಹಾಗೂ ತಾತ್ವಿಕ ಕ್ಷೇತ್ರಗಳಿಗಷ್ಟೇ ಸೀಮಿತವಾಗಿದ್ದವು. ಗಾಂಧಿಯವರ ವಿಷಯದಲ್ಲೂ ಅಷ್ಟೆ. ಅವರು

ವೈಜ್ಞಾನಿಕ-ತಾತ್ವಿಕ ಅಡಿಗಲ್ಲು ಹಾಕಿಕೊಟ್ಟವರು ಮಾರ್ಕ್ಸ್ ಮತ್ತು ಏಂಗೆಲ್ಸ್. ಆದರೆ ಅದನ್ನು ಪ್ರಾಯೋಗಿಕವಾಗಿ ಕಾರ್ಯರೂಪಕ್ಕೆ ತಂದವರು, ಹೊಸ ರೀತಿಯ ಸಮಾಜವಾದಿ ಸಮಾಜವನ್ನು ವಾಸ್ತವವಾಗಿ ನಿರ್ಮಿಸಿ ದೀನ ದಲಿತರ ವಿಮೋಚನೆಗೆ ಕಾರಣರಾಗಿ ಅವರ ನಿಷ್ಕಳಂಕ ಪ್ರೇಮಕ್ಕೆ ಪಾತ್ರರಾದವರು ಲೆನಿನ್ ಅನ್ನುವುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಮಾನವ ಸಮಾಜ ಆದಿಯಿಂದ ಬೆಳೆದುಬಂದ ರೀತಿಯನ್ನು ವೈಜ್ಞಾನಿಕವಾಗಿ ವಿಶ್ಲೇಷಿಸಿ, ಅಧ್ಯಯಿಸಿ ಮಾರ್ಕ್ಸ್ ಮತ್ತು ಏಂಗೆಲ್ಸ್ ತಮ್ಮ ಬರವಣಿಗೆಗಳಲ್ಲಿ ಮಾನವ ಸಮಾಜ ಮುಂದೆ ಬೆಳೆಯುವ ಮಾರ್ಗವನ್ನು ನಿಚ್ಚಳವಾಗಿ ತೋರಿಸಿಕೊಟ್ಟರು. ಅವರದು ಇಡೀ ಜಗತ್ತಿಗೇ ಅನ್ವಯವಾಗುವಂಥ ವಿಶಾಲ ವ್ಯಾಪ್ತಿಯ ಚಿಂತನೆಯಾಗಿದ್ದಿತು.

ಲೆನಿನ್ ಆ ಜಾಡಿನಲ್ಲೇ ನಡೆಯುತ್ತ ರಷ್ಯದ ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ಅದನ್ನು ಹೇಗೆ ಅನ್ವಯಿಸಬೇಕು

**ಕೆ. ಎಲ್. ಗೋಪಾಲಕೃಷ್ಣ ರಾವ್**

ಬಂಡವಾಳಶಾಹಿಗಳ ಹಾಗೂ ಶ್ರಮಜೀವಿಗಳ ನಡುವಿನ ಹೋರಾಟ ಉನ್ನತಮಟ್ಟಕ್ಕೇರಿ ಅಂತಿಮವಾಗಿ ಕ್ರಾಂತಿ ಜರುಗಿ ಶ್ರಮಜೀವಿಗಳಿಂದ ವರ್ಗರಹಿತ, ಶೋಷಣೆ ರಹಿತ ಸಮಾಜವಾದಿ ಸಮಾಜ ಸ್ಥಾಪಿತವಾಗುವುದು ಖಂಡಿತ ಎಂಬ ನಿಸ್ಸಂದಿಗ್ಧ ತೀರ್ಮಾನಕ್ಕೆ ಬಂದರು.

ಆದರೆ ಜಗತ್ತಿನಾದ್ಯಂತ ಶ್ರಮಜೀವಿ ವರ್ಗದಿಂದ ಕ್ರಾಂತಿಯಾಗಿ ಎಲ್ಲೆಡೆಯೂ ಆಡಳಿತ ಕಾರ್ಮಿಕರ ಕೈಗೆ ಬಂದರಷ್ಟೆ ಮತ್ತು ಬಂದಾಗಲಷ್ಟೆ ಸಮಾಜವಾದಿ ಸಮಾಜ ಹಾಗೂ ಮಾರ್ಕ್ಸ್-ಏಂಗೆಲ್ಸ್‌ರ ಆದರ್ಶ ಕಮ್ಯುನಿಸ್ಟ್ ಸಮಾಜ ಸ್ಥಾಪನೆ ಸಾಧ್ಯ, ಎಂದು ಲೆನಿನರ ಸಮಕಾಲೀನರೇ ಆಗಿದ್ದ ಕೆಲವು ಸಿದ್ಧಾಂತಿಗಳು ಹಾಗೂ ರಾಜಕಾರಣಿಗಳು ವಾದಿಸಿದರು. ಆದರೆ ಇಡೀ ಜಗತ್ತಿನಲ್ಲಿ ಕ್ರಾಂತಿಯಾಗುವವರೆಗೂ ಕಾಯಬೇಕಾಗಿಲ್ಲ, ಯಾವುದೇ ದೇಶದಲ್ಲಿ ಪರಿಸ್ಥಿತಿ ಸೂಕ್ತ ಹದಕ್ಕೆ ಬಂದಾಗ (ಸಾಮ್ರಾಜ್ಯಶಾಹಿಗಳ ಜಗದ್ವ್ಯಾಪಿ ಶೋಷಣೆಯ ಸರಪಣಿಯಲ್ಲಿ ಎಲ್ಲೋ ಒಂದು ಕೊಂಡಿ ಸಡಿಲಗೊಂಡಾಗ) ಅಲ್ಲಿ ಶ್ರಮಜೀವಿ ವರ್ಗ ಕ್ರಾಂತಿ ನಡೆಸುವ ಸಾಧ್ಯತೆ ಇದೆ ಎಂದು ವಾದಿಸಿ ಲೆನಿನ್, ರಷ್ಯಾದಲ್ಲಿ ೧೯೧೭ರಲ್ಲಿ

ಅಕ್ಟೋಬರ್ ಸಮಾಜವಾದಿ ಮಹಾಕ್ರಾಂತಿಯನ್ನು ಆಗುಗೊಳಿಸಿ ಅದನ್ನು ತೋರಿಸಿಕೊಟ್ಟರು. ಸಮಾಜವಾದಿ ಸಮಾಜ ನಿರ್ಮಾಣದ ಕಾರ್ಯ ಕೈಗೊಂಡು ಎಂದಿನ ಚಿಂತನೆಗೆ ಒಂದು ಹೊಸ ತಿರುವು, ಹೊಸ ಆಯಾಮ ಒದಗಿಸಿಕೊಟ್ಟರು. ಇದೇ ಅವರ ವೈಶಿಷ್ಟ್ಯವಾಗಿದ್ದಿತು. ಇದೇ ಅವರನ್ನು ಇತರ ಮಹಾನ್ ವ್ಯಕ್ತಿಗಳಿಂದ ಭಿನ್ನರನ್ನಾಗಿ ತೋರಿಸುವುದು. ಜಿ. ಎಚ್. ಹಾರ್ಡಿ ಹೇಳುವಂತೆ ಅವರದು 'ಬ್ರಾಡ್‌ಮನ್ ಕ್ಲಾಸ್.'

**ಕಾರ್ಮಿಕ ರಾಜ್ಯ ನಿರ್ಮಾಣ**

೧೯೧೭ರಲ್ಲಿ ಲೆನಿನರ ನೇರ ಮಾರ್ಗದರ್ಶನ ಹಾಗೂ ಸಹಭಾಗಿತ್ವದಲ್ಲಿ ಶ್ರಮಜೀವಿ ವರ್ಗದ ಅಕ್ಟೋಬರ್ ಸಮಾಜವಾದಿ ಮಹಾಕ್ರಾಂತಿ ಸಂಭವಿಸುವುದಕ್ಕೆ ಮುನ್ನ ರಷ್ಯಾದಲ್ಲಿ ನೂರಾರು ವರ್ಷಗಳಿಂದ ತ್ಸಾರ್‌ಶಾಹಿ ಸಾಮಂತಶಾಹಿ ಆಡಳಿತ ಬೇರೂರಿದ್ದಿತು. ದೀನದಲಿತರ ಶೋಷಣೆ ಪರಾಕಾಷ್ಠೆ ಮುಟ್ಟಿದ್ದಿತು. ಕ್ರಾಂತಿ ಯಶಸ್ವಿಯಾದ ನಂತರ ಲೆನಿನ್ ಕೈಗೊಂಡ ಕಾರ್ಯಗಳು ಅವರ ನಿಷ್ಠೆ, ಮುತ್ಸದ್ದಿತನಗಳನ್ನು ಬಿಂಬಿಸುತ್ತವೆ.

ಚರ್ಚಿಲ್ ನೇತೃತ್ವದಲ್ಲಿ ಪಶ್ಚಿಮದ ಸಾಮ್ರಾಜ್ಯಶಾಹಿಗಳು ಎಳೆಯ ಸಮಾಜವಾದಿ ರಾಜ್ಯದ ಕತ್ತು ಹಿಸುಕಿ ಅದನ್ನು ನಿರ್ನಾಮಗೊಳಿಸಲು ನೇರ ಮಿಲಿಟರಿ ಕಾರ್ಯಾಚರಣೆಗಳಿಂದ ಹಿಡಿದು ನಾನಾ ರೀತಿಯ ಕುಟಿಲೋಪಾಯಗಳನ್ನು ಕೈಗೊಂಡುದು ಸುವಿದಿತ. ಹಾಗಾಗಿ ಲೆನಿನ್ ಮೊದಲು ದೇಶದ ಸುಭದ್ರತೆ - ರಕ್ಷಣೆಗಳಿಗೆ ಆದ್ಯತೆ ನೀಡಿದರು. ಅನಂತರ ಸಾಮಾನ್ಯ ಜನಕೋಟಿಯನ್ನು ಅಜ್ಞಾನ ನಿರಕ್ಷರತೆಗಳ ಕೂಪದಿಂದ ಮೇಲೆತ್ತಲು ವ್ಯಾಪಕ ಶೈಕ್ಷಣಿಕ-ಆರ್ಥಿಕ ಕಾರ್ಯಕ್ರಮ ಕೈಗೊಂಡರು. ಅವರು ಆಚರಣೆಗೆ ತಂದ ಯಾವುದೇ ಕಾರ್ಯದ ಮೂಲೋದ್ದೇಶವೂ ಆಸ್ತಿರಹಿತರ ರಕ್ಷಣೆಯೇ ಆಗಿದ್ದಿತು. ಇದಕ್ಕಾಗಿ ಅವರು 'ಶಾಸ್ತ್ರೀಯ' ಆರ್ಥಿಕ ರೀತಿನೀತಿಗಳಿಗೆ ತಿಲಾಂಜಲಿ ನೀಡಲೂ ಸಿದ್ಧರಿದ್ದರು.

ಅದಕ್ಕೂ ಮಿಗಿಲಾಗಿ ಅವರು ಆಡಳಿತ ನಿರ್ವಹಣೆಯಲ್ಲಿ ಜನಸಾಮಾನ್ಯರೂ ಭಾಗವಹಿಸುವಂತೆ ಮಾಡಿದರು; ಕೃಷಿ ಕ್ಷೇತ್ರವನ್ನೂ ಒಳಗೊಂಡಂತೆ ಎಲ್ಲ ರಂಗಗಳಲ್ಲೂ ಸಹಕಾರೀ ಪದ್ಧತಿಯನ್ನು ಅನುಷ್ಠಾನಕ್ಕೆ ತಂದರು. ದೇಶದ ಸಂಪತ್ತೆಲ್ಲ ಸಾಮಾನ್ಯ ಜನರ ರಾಜ್ಯದ ಒಡೆತನದಲ್ಲಿರಬೇಕು ಎಂಬುದು ಮೂಲತತ್ವವಾಗಿದ್ದರೂ ಲೆನಿನ್ ಎನ್.ಇ.ಪಿ. ಎಂಬ ಒಂದು ಹೊಸ ಆರ್ಥಿಕ ನೀತಿಯನ್ನು ಜಾರಿಗೆ ತಂದು ಕೆಲವು ರಂಗಗಳಲ್ಲಿ, ವಿಶೇಷವಾಗಿ ಗ್ರಾಮಾಂತರಗಳಲ್ಲಿ, ಸಣ್ಣ ಪ್ರಮಾಣದ ಖಾಸಗಿ ಒಡೆತನಕ್ಕೂ ಅವಕಾಶ ಮಾಡಿಕೊಟ್ಟರು. ಆಡಳಿತ ಹಾಗೂ ಆರ್ಥಿಕ ನಿರ್ವಹಣೆಯಲ್ಲಿ ಬೂರ್ಷ್ವಾ (ಬಂಡವಾಳಶಾಹಿ) ತಜ್ಞರ ನೆರವು ಪಡೆಯಲೂ ಸಹ ಹಿಂಜರಿಯಬಾರದೆಂದು ಸಲಹೆ ನೀಡಿದರು.

ಕಮ್ಯೂನಿಸಂ ಎಂದರೆ 'ಸೋವಿಯತ್ ಆಡಳಿತ + ಇಡೀ ದೇಶದ ವಿದ್ಯುದೀಕರಣ' ಎಂಬುದು ಲೆನಿನರ ತಾರಕ ಮಂತ್ರವಾಗಿದ್ದಿತು. ಅದಕ್ಕಾಗಿಯೇ ವಿದ್ಯುದುತ್ಪಾದನೆಗೆ ವಿಶೇಷ ಗಮನ ನೀಡಿದರು. ವಿದ್ಯುಚ್ಛಕ್ತಿಯು ಆಧುನಿಕ ಕೈಗಾರಿಕೋದ್ಯಮಗಳ ನಿರ್ಮಾಣಕ್ಕೆ ಹಾಗೂ ಏಳಿಗೆಗೆ ಅತ್ಯವಶ್ಯವಾಗಿರುವಂತೆಯೇ ಅದು ಜನರ ಮನಃಪ್ರವೃತ್ತಿಯ ಮೇಲೂ ಗಾಢ ಪರಿಣಾಮ ಬೀರುತ್ತದೆ; ಅವರು ಕಂದಾಚಾರ ಪದ್ಧತಿಗಳನ್ನು ಬಿಟ್ಟುಕೊಟ್ಟು ಆಧುನಿಕ ರೀತಿಯಲ್ಲಿ ಚಿಂತಿಸುವಂತೆ ಮಾಡುತ್ತದೆಂಬುದು ಲೆನಿನರ ದೃಢ ಅಭಿಪ್ರಾಯವಾಗಿದ್ದಿತು.

ಹೀಗೆ ಹಲವು ದಶಕಗಳ ನಿರಂತರ ಯೋಜನೆಗಳ ಫಲವಾಗಿ ರಷ್ಯ ಜಗತ್ತಿನ ಒಂದು ಮಹಾನ್ ರಾಷ್ಟ್ರವಾಗಿ ಪರಿವರ್ತನೆಗೊಂಡಿತು. ದೇಶದಲ್ಲಿ ನಿರಕ್ಷರತೆ ನಿರ್ಮೂಲನವಾಯಿತು. ಶಿಕ್ಷಣವು ವಿಶ್ವವಿದ್ಯಾಲಯ ಹಂತವನ್ನೂ ಒಳಗೊಂಡಂತೆ ಎಲ್ಲ ಹಂತಗಳಲ್ಲೂ ಸಂಪೂರ್ಣವಾಗಿ ಉಚಿತವಾಯಿತು. ಸಾಮಾನ್ಯ ಜನರ ಜೀವನ ಅಸದೃಶ ರೀತಿಯಲ್ಲಿ ಸುಖಶಾಂತಿಗಳ ನೆಲೆವೀಡಾಯಿತು. ಎಲ್ಲರಿಗೂ ಉದ್ಯೋಗ, ಎಲ್ಲರಿಗೂ ವಾಸಿಸಲು ಮನೆ, ಸಂಪೂರ್ಣ ಉಚಿತ ಸಾರ್ವಜನಿಕ ಶಿಕ್ಷಣ ಹಾಗೂ ಆರೋಗ್ಯ ವ್ಯವಸ್ಥೆ, ಹಸಿವು ಬಡತನಗಳ ಸರ್ವನಾಶ, ದಿನಬಳಕೆಯ ಸಾಮಾನುಗಳ ಬೆಲೆಗಳ ಮೇಲೆ ನಿಯಂತ್ರಣ (೫೦ ವರ್ಷಗಳಿಗೂ ಹೆಚ್ಚು ಕಾಲ ಬೆಲೆ ಏರಿಕೆ ಎಂಬುದು ಹೇಳ ಹೆಸರಿಲ್ಲದಂತಾಗಿದ್ದಿತು) – ಇವು ಲೆನಿನ್ ನಿರ್ಮಿಸಿದ ನವ ಸಮಾಜದ ಪ್ರಮುಖ ಲಕ್ಷಣಗಳಾಗಿದ್ದವು.



ವೈಜ್ಞಾನಿಕ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ದಾಪುಗಾಲು ಹಾಕಿಕೊಂಡು ಹೋದ ರಷ್ಯ ಬಲಿಷ್ಠ ರಾಷ್ಟ್ರವಾಗಿ ಬೆಳೆದು ಪಾಶ್ಚಿಮಾತ್ಯ ಸಾಮ್ರಾಜ್ಯಶಾಹಿಗಳಿಗೆ ಸಿಂಹಸ್ವಪ್ನವಾಗಿ ಪರಿಣಮಿಸಿತು. ಅದೇ ಹೊತ್ತಿನಲ್ಲಿ ಅದು ಅಭಿವೃದ್ಧಿಶೀಲ ದೇಶಗಳಿಗೆ ಎಲ್ಲ ರೀತಿಯ ನೆರವು, ಬೆಂಬಲ ನೀಡುತ್ತ ಅವುಗಳಿಗೆ ಸ್ಫೂರ್ತಿದಾಯಕವಾಯಿತು. ನವ ಸಮಾಜ ನಿರ್ಮಾಣಕ್ಕೆ ಒಂದು ಜ್ವಲಂತ ಮಾದರಿ ಹಾಕಿಕೊಟ್ಟಿತು.

**ಏಳು-ಬೀಳು**

ವ್ಯಕ್ತಿ ಜೀವನದಲ್ಲಿದ್ದಂತೆ ರಾಷ್ಟ್ರ ಜೀವನದಲ್ಲೂ ಏಳುಬೀಳುಗಳಿದ್ದೇ ಇರುತ್ತವೆ. ನಡೆಯುವವರು ಎಡವುವುದು ಸಹಜವೇ. ಎಡವಿದ ಮಾತ್ರಕ್ಕೆ ಮತ್ತೆ ಏಳುವುದಿಲ್ಲವೆಂದೇನೂ ಅಲ್ಲವಲ್ಲ. ರಷ್ಯದ ರಾಷ್ಟ್ರ ಜೀವನದಲ್ಲೂ ತಾತ್ಕಾಲಿಕವಾಗಿ ಒಂದು ರೀತಿಯ ಬೀಳು, ಹಿನ್ನಡೆ ಉಂಟಾಗಿದ್ದರೂ ಅದೇ ಶಾಶ್ವತವೆಂದು ಹೇಳಲಾಗದು. ಆಡಳಿತ ಹಾಗೂ ಆರ್ಥಿಕ ಕ್ಷೇತ್ರಗಳಲ್ಲಿ ನಿರ್ವಹಣೆ ಹಾಗೂ ವ್ಯವಸ್ಥಾಪನೆಗಳ ಲೋಪದೋಷಗಳಿಂದಾಗಿ ಇಂತಹ ಹಿನ್ನಡೆ ಸಂಭವಿಸಿದೆಯೆಂಬುದು ಬಹುಜನರ ಭಾವನೆಯಾಗಿದೆ.

ಆದರೆ ಲೆನಿನರು ಹಾಕಿಕೊಟ್ಟ ಬುನಾದಿ ಭದ್ರವಾಗಿಯೇ ಇದೆ. ಅವರೇ ಇನ್ನಷ್ಟು ಕಾಲ ಜೀವಂತವಾಗಿದ್ದಿದ್ದರೆ ಬಹುಶಃ ಇಂಥ ಹಿನ್ನಡೆಗೆ ಅವಕಾಶವೇ ಇರುತ್ತಿರಲಿಲ್ಲವೇನೋ. ದುರದೃಷ್ಟವಶಾತ್ ಕ್ರಾಂತಿಯಾದ ತರುಣದಲ್ಲೇ ಕಿಡಿಗೇಡಿಯೊಬ್ಬನ ಗುಂಡೇಟಿಗೆ ಬಲಿಯಾಗಿದ್ದ ಲೆನಿನರ ಆರೋಗ್ಯ ಸ್ಥಿತಿ ಕ್ಷೀಣಿಸುತ್ತಾ ಹೋಯಿತು. ಆದರೂ ಅವರು ಅವಿಶ್ರಾಂತವಾಗಿ ದುಡಿಯುತ್ತಲೇ ಇದ್ದು ಕೊನೆಗೆ ೧೯೨೪ರ ಜನವರಿ ೨೧ರಂದು ಮೂರನೆಯ ಬಾರಿ ತೀವ್ರ ಹೃದಯಾಘಾತಕ್ಕೊಳಗಾಗಿ ತಮ್ಮ ಕೇವಲ ೫೪ನೆಯ ವಯಸ್ಸಿನಲ್ಲೇ ಕೊನೆಯುಸಿರೆಳೆದರು.

**ಪರಂಪರೆಯ ಪರಿಪಾಲಕ**

ಹೀಗೆ ಒಂದು ನವ ಸಮಾಜ ಸೃಷ್ಟಿಸಿ ಮಾನವಕೋಟಿಗೆ ಶೋಷಣೆಯಿಂದ ಮುಕ್ತಿಗೊಳಿಸಿಕೊಳ್ಳುವ ಮಾರ್ಗ ಸೂಚಿಸಿದ ವ್ಲದೀಮಿರ್ ಇಲ್ಯಿಚ್ ಲೆನಿನ್ ವಾಸ್ತವವಾಗಿ ಒಂದು ಕ್ರಾಂತಿಕಾರಿ ಪರಂಪರೆಯ ವಾರಸುದಾರರಾಗಿದ್ದರು. ಅವರು ಜನಿಸಿದ್ದು ೧೮೭೦ರ ಏಪ್ರಿಲ್ ೨೨ರಂದು. ಅವರ ನಿಜವಾದ ಹೆಸರು ವ್ಲದೀಮಿರ್ ಇಲ್ಯಿಚ್ ಉಲ್ಯಾನವ್. ಕ್ರಾಂತಿಕಾರಿ ಚಳವಳಿಯಲ್ಲಿ ಭಾಗವಹಿಸಿದ್ದಾಗ, ರಷ್ಯದ ಜೀವನದಿ ಲೇನಾ ಹೆಸರಿನಲ್ಲಿ, ಲೆನಿನ್ ಎಂಬ ಉಪನಾಮ ಇರಿಸಿಕೊಂಡರು. ಕೊನೆಗೆ ಅದೇ ಶಾಶ್ವತವಾಯಿತು.

ಅವರ ತಂದೆ ಇಲ್ಯಾ ನಿಕೊಲಾಯೆವಿಚ್ ಉಲ್ಯಾನವ್ ರಷ್ಯನ್ ಜೀತದಾಳೊಬ್ಬನ ಮಗನಾಗಿದ್ದರು; ಉನ್ನತ ನೈತಿಕ ನಿಯಮಗಳ ಸುಸಂಸ್ಕೃತ ವ್ಯಕ್ತಿಯಾಗಿದ್ದರು, ಅತ್ಯುತ್ತಮ ಅಧ್ಯಾಪಕರಾಗಿದ್ದರು. ಲೆನಿನರ ತಾಯಿ ಮರೀಯ ಅಲೆಕ್ಸಾಂಡ್ರೊವ್ನ ಅನೇಕ ವಿದೇಶಿ ಭಾಷೆಗಳನ್ನು ತಿಳಿದಿದ್ದುದರ ಜೊತೆಗೆ ಸಾಹಿತ್ಯ-ಕಲೆ-ಸಂಗೀತಗಳಲ್ಲೂ ಉತ್ತಮಾಭಿರುಚಿ ಬೆಳೆಸಿಕೊಂಡಿದ್ದರು.

ಲೆನಿನರ ಅಣ್ಣ ಅಲೆಕ್ಸಾಂಡರ್ ಉಲ್ಯಾನವ್ ರಷ್ಯನ್ ನರೋದ್ನಿಕ್ ಕ್ರಾಂತಿಕಾರಿ ಚಳವಳಿಯ ಅನುಯಾಯಿಯಾಗಿದ್ದರು. ವ್ಯಕ್ತಿಯೇ ಇತಿಹಾಸದ ನಿರ್ಮಾಪಕ ಎಂಬುದು ನರೋದ್ನಿಕ್ ಸಮಾಜಶಾಸ್ತ್ರದ ಕೇಂದ್ರ ವಿಚಾರವಾಗಿದ್ದಿತು. ವೈಯಕ್ತಿಕ ಭಯೋತ್ಪಾದನೆ ಚರ್ಯೆಗಳ ಮೂಲಕ ಸಮಾಜ ಸುಧಾರಣೆ ಅವರ ಗುರಿಯಾಗಿದ್ದಿತು. ಅಂಥ ಕಾರ್ಯಾಚರಣೆಗಳಲ್ಲಿ ತೊಡಗಿದ್ದ ಅವರು ದಸ್ತಗಿರಿಯಾಗಿ ಗಲ್ಲಿಗೇರಿಸಲ್ಪಟ್ಟರು. ಅಷ್ಟು

ಹೊತ್ತಿಗಾಗಲೇ ಪೀಟರ್ಸ್‌ಬರ್ಗ್ ವಿಶ್ವವಿದ್ಯಾಲಯದಲ್ಲಿ ನ್ಯಾಯಶಾಸ್ತ್ರ ಅಭ್ಯಸಿಸುತ್ತ ಸ್ವತಂತ್ರ ವಿಚಾರಧಾರೆ ಬೆಳೆಸಿಕೊಂಡಿದ್ದ ಲೆನಿನ್, 'ರಾಜ್ಯಾಧಿಕಾರದ ಬಿಡಿ ವ್ಯಕ್ತಿಗಳನ್ನು ಅಥವಾ ಝಾರನನ್ನೇ ಕೊಲ್ಲುವುದರಿಂದ ನಿರಂಕುಶ ಪ್ರಭುತ್ವವನ್ನಾಗಲಿ, ದಬ್ಬಾಳಿಕೆಯನ್ನಾಗಲಿ ನಾಶಗೊಳಿಸುವುದು ಸಾಧ್ಯವಿಲ್ಲ' ಎಂದು ಘೋಷಿಸಿ, ಶ್ರಮಜೀವಿ ವರ್ಗವು ಬಂಡವಾಳಶಾಹಿಯ ವಿರುದ್ಧ ಸುಸಂಘಟಿತ ಸಾಮೂಹಿಕ ಸಶಸ್ತ್ರ ಹೋರಾಟ ನಡೆಸಿ, ಕ್ರಾಂತಿ ಸಾಧಿಸಿ, ಕಾರ್ಮಿಕ ರಾಜ್ಯ ಸ್ಥಾಪಿಸಬೇಕು ಎಂಬಂಥ ಮಾರ್ಕ್ಸ್‌ವಾದಿ ವಿಚಾರಧಾರೆಯಲ್ಲಿ, ತಮ್ಮ ನಿಷ್ಠೆ ಪ್ರಕಟಿಸಿದರು. ೧೮೯೫ರಲ್ಲಿ ಅವರು ಪೀಟರ್ಸ್‌ಬರ್ಗ್‌ನಲ್ಲಿ ಸ್ಥಾಪಿಸಿದ 'ಕಾರ್ಮಿಕ ವರ್ಗ ವಿಮೋಚನಾ ಹೋರಾಟ ಸಂಸ್ಥೆ'ಯೇ ಮುಂದೆ ಶ್ರಮಜೀವಿ ವರ್ಗ ಕ್ರಾಂತಿಕಾರಿ ಪಾರ್ಟಿಯಾಗಿ ಬೆಳೆಯಿತು. ಅದೇ ವರ್ಷ ಡಿಸೆಂಬರ್ ೮ರಂದು ಇತರ ಕ್ರಾಂತಿಕಾರಿಗಳ ಜೊತೆ ಲೆನಿನರೂ ದಸ್ತಗಿರಿಯಾದರು.

ಹದಿನಾಲ್ಕು ತಿಂಗಳು ಸೆರೆಮನೆಯಲ್ಲಿರಿಸಿದ್ದ ನಂತರ ೧೮೯೭ರ ಫೆಬ್ರವರಿ ೧೩ರಂದು ಅವರನ್ನು ಸೈಬೀರಿಯಾಕ್ಕೆ ಮೂರು ವರ್ಷಗಳಿಗೆ ಗಡೀಪಾರು ಮಾಡಲಾಯಿತು. ಅಲ್ಲಿಯೂ ಅವರು ತಮ್ಮ ಕ್ರಾಂತಿಕಾರಿ ಚಟುವಟಿಕೆ ಹಾಗೂ ಬರವಣಿಗೆಗಳನ್ನು ಮುಂದುವರೆಸಿದರು. ಅವರು ಅಲ್ಲಿನ ಶೂಷೆನ್‌ಸ್ಕಯೆ ಎಂಬ ಸಣ್ಣ ಹಳ್ಳಿಯೊಂದರಲ್ಲಿ ನದ್ಯೇಜ್ದ ಕ್ರೂಪ್‌ಸ್ಕಯಾರವರನ್ನು ಸಂಧಿಸಿದರು. ೧೮೯೮ರ ಮೇ ಆರಂಭದಲ್ಲಿ ಆಕೆ ಲೆನಿನರ ಬಾಳಸಂಗಾತಿಯಾದರು.

ಗಡೀಪಾರು ಶಿಕ್ಷೆ ಮುಗಿದ ನಂತರ ೧೯೦೦ರಲ್ಲಿ ಲೆನಿನ್ ರಷ್ಯ ಬಿಟ್ಟು ಹೊರಹೋದರು. 'ಇಸ್ಕ್ರ'(ಕಿಡಿ) ಎಂಬ ವರ್ಗ ಜಾಗೃತ ಕಾರ್ಮಿಕ ಪತ್ರಿಕೆ ಪ್ರಕಟಣೆಯಲ್ಲಿ ನೆರವಾದರು. ರಷ್ಯದ ಕ್ರಾಂತಿಕಾರಿ ಪಾರ್ಟಿ ಸಂಘಟನೆಗಳನ್ನೆಲ್ಲ ಒಂದುಗೂಡಿಸಿ 'ರಷ್ಯನ್ ಸೋಷಲ್ ಡೆಮೊಕ್ರಾಟಿಕ್ ಲೇಬರ್ ಪಾರ್ಟಿ' ಎಂಬ ಸಂಘಟನೆಯನ್ನು ಸ್ಥಾಪಿಸಿದರು. ಇದರ ದ್ವಿತೀಯ ಮಹಾಧಿವೇಶನ ೧೯೦೩ರಲ್ಲಿ ಮೊದಲು ಬ್ರಸೆಲ್ಸ್‌ನಲ್ಲೂ ಅನಂತರ ಲಂಡನ್ನಿನಲ್ಲೂ ಜರಗಿತು. ಲೆನಿನರು ಅದರಲ್ಲಿ ಬೋಲ್ಶೆವಿಕ್(ಬಹುಮತೀಯ)ರ ನಾಯಕರಾದರು.

೧೯೦೫ರ ಸಶಸ್ತ್ರ ಬಂಡಾಯ ವಿಫಲಗೊಂಡನಂತರ ಲೆನಿನ್ ಹಾಗೂ ಕ್ರೂಪ್‌ಸ್ಕಯಾ ಪೊಲೀಸರ ಕೈಗೆ ಸಿಕ್ಕಿ ಬೀಳದಿರಲು ಜಿನೀವಾಕ್ಕೆ ತೆರಳಬೇಕಾಯಿತು. ೧೯೧೪ರಲ್ಲಿ ಪ್ರಥಮ ಜಾಗತಿಕ ಯುದ್ಧ ಪ್ರಾರಂಭವಾದಾಗ ಲೆನಿನರನ್ನು ಪರೊನಿನ್ (ಆಸ್ಟ್ರೋ-ಹಂಗೇರಿ)ನಲ್ಲಿ ದಸ್ತಗಿರಿ ಮಾಡಲಾಯಿತು. ಆದರೆ ಸಾರ್ವಜನಿಕರ ಒತ್ತಾಯಕ್ಕೆ ಮಣಿದು ಸರಕಾರ ಅವರನ್ನು ಬಿಡುಗಡೆ ಮಾಡಿತು. ಅವರು ಕ್ರೂಪ್‌ಸ್ಕಯಾರೊಂದಿಗೆ ತಟಸ್ಥ ಸ್ವಿಟ್ಜರ್ಲೆಂಡಿಗೆ ಹೋಗಿ ನೆಲಸಿದರು.

### ನವ ಸಮಾಜ ನಿರ್ಮಾಣ

೧೯೧೭ರ ಫೆಬ್ರವರಿಯಲ್ಲಿ ರಷ್ಯದಲ್ಲಿ ಬೂರ್ಷ್ವಾ ಕ್ರಾಂತಿ ಜರಗಿ, ಝಾರ್‌ಶಾಹಿಯ ಪತನವಾಗಿ, ಮೆನ್ಶೆವಿಕ್ (ಅಲ್ಪ ಮತೀಯ)ರ ತಾತ್ಕಾಲಿಕ ಕೇರೆನ್‌ಸ್ಕಿ ಸರಕಾರ ಅಸ್ತಿತ್ವಕ್ಕೆ ಬಂದಾಗ ಲೆನಿನ್ ರಷ್ಯಕ್ಕೆ ಹಿಂದಿರುಗಿ ಶ್ರಮಜೀವಿಗಳ ಪರ ಹೋರಾಟ ಸಂಘಟಿಸಿದರು. ಜುಲೈನಲ್ಲಿ ಕೇರೆನ್‌ಸ್ಕಿ ಸರಕಾರ ಪೆತ್ರೊಗ್ರಾದ್ ಕಾರ್ಮಿಕ ಪ್ರದರ್ಶನಗಳನ್ನು ಕ್ರೂರವಾಗಿ ದಮನಗೊಳಿಸಿದಾಗ ಲೆನಿನ್ 'ಭೂಗತ' ಚಟುವಟಿಕೆ ನಡೆಸುವ ಒತ್ತಾಯಕ್ಕೊಳಗಾದರು. ಆಗಲೇ ಅವರ ಸುಪ್ರಸಿದ್ಧ ''ರಾಜ್ಯ ಹಾಗೂ ಕ್ರಾಂತಿ'' ಗ್ರಂಥ ಪ್ರಕಟವಾಯಿತು.

೧೯೧೭ರ ನವೆಂಬರ್ ೭ (ಅಕ್ಟೋಬರ್ ೨೫)ರಂದು ಅಕ್ಟೋಬರ್ ಸಮಾಜವಾದಿ ಮಹಾಕ್ರಾಂತಿ ವಿಜಯಿಯಾಗಿ ರಾಜ್ಯಾಧಿಕಾರ ಸಂಪೂರ್ಣವಾಗಿ ಕಾರ್ಮಿಕರ ಕೈಗೆ ಬಂದಾಗ 'ಭೂಗತ'ರಾಗಿದ್ದ ಲೆನಿನ್ ಹೊರಬಂದರು. ಮಾರನೆಯ ದಿನ ನಡೆದ ಸೋವಿಯತ್‌ಗಳ (ಪಾರ್ಲಿಮೆಂಟಿನ) ದ್ವಿತೀಯ ಮಹಾಧಿವೇಶನಕ್ಕೆ ಲೆನಿನರೇ ನೇತೃತ್ವ ವಹಿಸಿದ್ದರು.

ತಕ್ಷಣವೇ ಲೆನಿನ್ ರಷ್ಯದ ರಾಜಕೀಯ, ಆರ್ಥಿಕ ಹಾಗೂ ಸಾಮಾಜಿಕ ಪುನರ್ ನಿರ್ಮಾಣ ಕಾರ್ಯದಲ್ಲಿ ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಂಡರು. ಆದರೆ ಅವರ ಅವಿಶ್ರಾಂತ ದುಡಿಮೆ ಅವರ ಆರೋಗ್ಯದ ಮೇಲೆ ಪ್ರತಿಕೂಲ ಪ್ರಭಾವ ಬೀರತೊಡಗಿತು. ವೈದ್ಯರ ಒತ್ತಾಯದ ಮೇಲೆ ಅವರು ೧೯೨೨ರಲ್ಲಿ ಮಾಸ್ಕೋ ಸಮೀಪದ ಗೋರ್ಕಿ ಹಳ್ಳಿಗೆ ಹೋಗಬೇಕಾಗಿ ಬಂದರೂ ಅನತಿಕಾಲದಲ್ಲೇ ಮಾಸ್ಕೋಗೆ ಹಿಂದಿರುಗಿದರು.

ಅವರ ಆರೋಗ್ಯಸ್ಥಿತಿ ತೀರ ಹದಗೆಡತೊಡಗಿತು; ''ನಾನೀಗ ನನ್ನ ವ್ಯವಹಾರಗಳಿಗೆ ಕೊನೆ ಹಾಕುವ ಕಾರ್ಯ ಮುಗಿಸಿದ್ದೇನೆ. ನಾನೀಗ ಮನಸ್ಸಾಕ್ಷಿಯಿಂದ ಹೋಗುವೆನು'' ಎಂದು ಅವರು ಬರೆಯುವಂತಾಯಿತು. ಆದರೂ ಕೊನೆಯ ಘಳಿಗೆಯವರೆಗೂ ತಮ್ಮ 'ದಿನಚರಿ'ಯನ್ನು ಹೇಳಿ ಬರೆಯಿಸಿದರು. ಈ 'ದಿನಚರಿ' ಪರಿಣಾಮದಲ್ಲಿ ಅವರ 'ರಾಜಕೀಯ ಮರಣ ಶಾಸನ'ವಾಗಿದ್ದಿತು. ಅದು ಲೋಕವ್ಯಾಪೀ ವಿಮೋಚನಾ ಚಳವಳಿಗೆ ಹಾಕಿಕೊಟ್ಟ ಕಾರ್ಯವ್ಯೂಹದ ಒಂದು ಬೃಹತ್ ಯೋಜನೆಯಾಗಿದ್ದಿತು.

### ಮಹಾನ್ ಮಾನವತಾವಾದಿ

ಅವರ ಜೀವನವು ಸಾಹಸಮಯವಾಗಿದ್ದಿತು. ಅದು ಸೃಜನಾತ್ಮಕ ಚಿಂತನೆಯಲ್ಲೂ, ಅವಿಶ್ರಾಂತ ಕ್ರಾಂತಿಕಾರಿ ಚಟುವಟಿಕೆಯಲ್ಲೂ ಸೈದ್ಧಾಂತಿಕ ಹಾಗೂ ರಾಜಕೀಯ ಹೋರಾಟಗಳಲ್ಲೂ ತಮ್ಮನ್ನು ಪೂರ್ಣವಾಗಿ ತೊಡಗಿಸಿಕೊಂಡ ಜೀವನವಾಗಿದ್ದಿತು. ಮಾರ್ಕ್ಸ್ ಹಾಗೂ ಏಂಗೆಲ್ಸ್‌ರ ಹೆಜ್ಜೆಗಳನ್ನೇ ಅನುಸರಿಸಿಹೋದ ಲೆನಿನ್ ಒಬ್ಬ ಹೊಸ ಮಾದರಿಯ ರಾಜನೀತಿಜ್ಞರಾಗಿದ್ದರು, ಕ್ರಾಂತಿಯಲ್ಲಿ ಮಹಾವಿಜ್ಞಾನಿಯಾಗಿದ್ದ ಅವರು ವಿಜ್ಞಾನದಲ್ಲೂ ಕ್ರಾಂತಿಯನ್ನುಂಟುಮಾಡಿದರು.

ಲೆನಿನರು ಒಬ್ಬ ಮಹಾನ್ ಮಾನವತಾವಾದಿಯಾಗಿದ್ದರು. ಸರಳ - ಉನ್ನತ ಚಿಂತನೆಯ ಮೂರ್ತಸ್ವರೂಪವಾಗಿದ್ದರು. ಅವರು ಎಲ್ಲರೊಡನೆಯೂ ಯಾವುದೇ ರೀತಿಯ ಬಿಗುಪಿಲ್ಲದೆ ಹಸನ್ಮುಖಿಯಾಗಿ ಮಾತನಾಡುತ್ತಿದ್ದರು, ವ್ಯವಹರಿಸುತ್ತಿದ್ದರು. ಮಕ್ಕಳ ಹಾಗೂ ಮಹಿಳೆಯರ ಬಗೆಗಂತೂ ಅವರು ವಿಶೇಷ ಮಮತೆ, ಕಾಳಜಿ ಹೊಂದಿದ್ದರು. ಸಮಾಜದಲ್ಲಿ ಮಹಿಳೆಯರಿಗೂ ಮಕ್ಕಳಿಗೂ ಅಗ್ರಸ್ಥಾನ ನಿರ್ಮಿಸಿಕೊಟ್ಟರು. ಆದ್ದರಿಂದಲೇ 'ಲೆನಿನರ ಸಂಘಟಿತ ಸಮಾಜವಾದಿ ಮಹಾಕ್ರಾಂತಿಯಿಂದ ಹೆಚ್ಚಿನ ಪ್ರಯೋಜನ ಪಡೆದವರೆಂದರೆ ಮಹಿಳೆಯರು ಮತ್ತು ಮಕ್ಕಳು' ಎಂಬ ಮಾತಿನಲ್ಲಿ ಉತ್ಪ್ರೇಕ್ಷೆಯೇನಿಲ್ಲ. ಅದೇ ರೀತಿ ಪರಿಸರ ಸಂರಕ್ಷಣೆಯ ಬಗೆಗೂ ಲೆನಿನ್ ಪದೇ ಪದೇ ಎಚ್ಚರಿಕೆಯ ಮಾತುಗಳನ್ನಾಡುತ್ತಿದ್ದರು. ವೈಜ್ಞಾನಿಕ ಹಾಗೂ ಯಂತ್ರಕಲಾ ಕ್ರಾಂತಿ ಯಾವ ರೀತಿಯಲ್ಲಿ ಮುಂದುವರಿಯಬೇಕೆಂದರೆ ಅದು ಪರಿಸರಕ್ಕೆ ಯಾವುದೇ ರೀತಿಯಲ್ಲೂ ಹಾನಿಯುಂಟುಮಾಡದಂತಿರಬೇಕು ಎಂದವರು ಆಗ್ರಹಿಸುತ್ತಿದ್ದರು.

ಅವರ ಸರಳ ಹಾಗೂ ನೀತಿವಂತ ಜೀವನಕ್ಕೆ ಸಂಬಂಧಿಸಿದಂತೆ ಅನೇಕ ಕತೆಗಳಿವೆ. ರಾಜ್ಯಾಧಿಕಾರದ ಅತ್ಯುನ್ನತ ಸ್ಥಾನದಲ್ಲಿದ್ದರೂ ಅವರು ತಮಗಾಗಿ ಯಾವುದೇ ವಿಶೇಷ ಸವಲತ್ತುಗಳನ್ನು ಹೊಂದಿರಲಿಲ್ಲ, ವಿಶೇಷ ಅಧಿಕಾರ ಚಲಾಯಿಸುತ್ತಿರಲಿಲ್ಲ. ಅವರು ಎಲ್ಲರಂತೆ ಸಾಮಾನ್ಯ ಸಾರ್ವಜನಿಕ ಭೋಜನಾಲಯ ಹಾಗೂ ಆಯುಷ್ಕರ್ಮ ಶಾಲೆಗಳಿಗೇ ಹೋಗುತ್ತಿದ್ದರು ಮತ್ತು ಅಲ್ಲಿ ಎಲ್ಲರಂತೆ ತಮ್ಮ ಸರದಿಗಾಗಿ ಕಾಯ್ದು ಕುಳಿತಿರುತ್ತಿದ್ದರು. ಕ್ರೆಮ್ಲಿನ್‌ನಲ್ಲಿ ಅವರನ್ನು ಕಾಣಲು ಹೋದ ಯಾರಿಗೂ ಮುಕ್ತಾವಕಾಶವಿರುತ್ತಿದ್ದಿತು.

ನಮ್ಮ ದೇಶದಲ್ಲೇ ಇಂದು ಅಧಿಕಾರದಲ್ಲಿರುವವರಿಗಷ್ಟೇ ಅಲ್ಲ, ಇಲ್ಲದವರಿಗೂ ಅವರ ಸಂಬಂಧಿಕರಿಗೂ ಸಹ, ಜನರ ಅಪಾರ ಖರ್ಚಿನಲ್ಲಿ ನಾನಾ ದರ್ಜೆಗಳ ಭದ್ರತಾ ವ್ಯವಸ್ಥೆ ಏರ್ಪಡಿಸಿರುವುದನ್ನು ನೋಡುತ್ತಿರುವ ನಮಗೆ ಲೆನಿನರ ಈ ನಡೆ ನಂಬಲ ಸಾಧ್ಯವೆನಿಸಬಹುದು. ಆದರೆ ಅದು ನೂರಕ್ಕೆ ನೂರರಷ್ಟು ನಿಜ ಎಂದು ಆ ಕಾಲದ ಪ್ರತ್ಯಕ್ಷದರ್ಶಿಗಳ ವರದಿಗಳೇ ತಿಳಿಸುತ್ತವೆ.

ಅಷ್ಟೇ ಅಲ್ಲ, ನಮ್ಮ ದೇಶದಲ್ಲಿಂದು ಬಲಿಷ್ಠ ರಾಷ್ಟ್ರ ನಿರ್ಮಾಣ ಮಾಡುವ ನೆಪದಲ್ಲಿ ಮುಕ್ತ ವ್ಯಾಪಾರ, ಜಾಗತೀಕರಣ ಹಾಗೂ ಖಾಸಗೀಕರಣಗಳ ಘೋಷಣೆಗಳು ಮೊಳಗುತ್ತಿವೆ. ಬಹುರಾಷ್ಟ್ರೀಯ ಕಂಪೆನಿಗಳಿಗೆ ಕೆಂಪುರತ್ನಗಂಬಳಿಯ - ಅಲ್ಲ ಅಲ್ಲ, ಪೂರ್ಣ ಕುಂಭದ - ಸ್ವಾಗತ ನೀಡಲಾಗುತ್ತಿದ್ದು ದೇಶೀಯ ಕೈಗಾರಿಕೆಗಳು ನೆಲಕಚ್ಚುವ ಪರಿಸ್ಥಿತಿ ಉಂಟಾಗುತ್ತಿದೆ. ಇಂಥ ಸಂದಿಗ್ಧ ಕಾಲದಲ್ಲಿ ರಷ್ಯದಲ್ಲಿ ಲೆನಿನರು ಹಿಂದುಳಿದಿದ್ದ ತಮ್ಮ ನಾಡನ್ನು ಜಗತ್ತಿನ ಬೃಹತ್ ರಾಷ್ಟ್ರಗಳಲ್ಲೊಂದನ್ನಾಗಿ ಪರಿವರ್ತಿಸಲು ಕೈಗೊಂಡ ಕ್ರಮಗಳು, ತೋರಿದ ಎಚ್ಚರಿಕೆ, ಕಾಳಜಿ ಹಾಗೂ ಚಾಕಚಕ್ಯತೆ ಇವು ನಮಗೆ ಹಿಂದೆಂದಿಗಿಂತ ಹೆಚ್ಚು ಪರಿಶೀಲನಾರ್ಹವಾಗಿವೆ, ಅನುಕರಣೀಯವಾಗಿವೆ.

**ಕೆ. ಎಲ್. ಗೋಪಾಲಕೃಷ್ಣ ರಾವ್**

ನಂ. ೨೬೧, ೨ನೇ ಕ್ರಾಸ್, ಸಿ. ಟಿ. ಬೆಡ್, ತ್ಯಾಗರಾಜ ನಗರ, ಬೆಂಗಳೂರು - ೫೬೦ ೦೨೮

# ಪಿನೋಷೆ ಪ್ರಕರಣ : ಬ್ರಿಟಿಷ್ ಸರಕಾರದ ವಂಚನೆ

ದಕ್ಷಿಣ ಅಮೆರಿಕದ ಪುಟ್ಟ ರಾಷ್ಟ್ರ ಚಿಲಿಯ ಮಾಜಿ ಅಧ್ಯಕ್ಷ ಕೊಲೆ ಪಾತಕ ಆಗಸ್ಟೊ ಪಿನೋಷೆ ಇಂದು ಸ್ವತಂತ್ರ ವ್ಯಕ್ತಿ. ಮಾನವ ಹಕ್ಕುಗಳ ಉಲ್ಲಂಘನೆ, ಚಿತ್ರಹಿಂಸೆ ಮತ್ತು ಕಗ್ಗೊಲೆಗಳ ಅಪರಾಧಗಳಿಗೆ ವಿಚಾರಣೆಗೆ ಗುರಿಯಾಗಿ ಶಿಕ್ಷೆ ಅನುಭವಿಸಬೇಕಾಗಿದ್ದ ಜನರಲ್ ಪಿನೋಷೆ ಬ್ರಿಟಿಷ್ ಸರಕಾರದ ಕೃಪೆಯಿಂದ ಮುಕ್ತ. ಚಿಲಿಯ ಮಾನವ ಹಕ್ಕುಗಳ ಹೋರಾಟಗಾರರು ಹಾಗೂ ಸ್ಪೇನಿನ ಸರಕಾರ ಅಪರಾಧಿ ಪಿನೋಷೆಯನ್ನು ವಿಚಾರಣೆಗೆ ಗುರಿಪಡಿಸಲು ತಮಗೆ ಒಪ್ಪಿಸಬೇಕೆಂದು ಬ್ರಿಟಿಷ್ ಸರಕಾರಕ್ಕೆ ಕೋರಿಕೆ ಸಲ್ಲಿಸಿದ್ದುವು. ಬ್ರಿಟಿಷ್ ಸರಕಾರ ಐದು ನೂರ ಮೂರು ದಿನಗಳು ನ್ಯಾಯಾಲಯಗಳಲ್ಲಿ ಅರ್ಜಿ ಪರಿಶೀಲನೆಯ ಕಪಟನಾಟಕ ನಡೆಸಿ ಕೊನೆಗೆ ಅನಾರೋಗ್ಯದ ಕಾರಣ ಒಡ್ಡಿ ಪಿನೋಷೆಯನ್ನು ಖುಲಾಸೆ ಮಾಡಿತು. ಎಂಬತ್ತನಾಲ್ಕು ವಯಸ್ಸಿನ ಈ ಕೊಲೆಪಾತಕಿ ಈಗ ಚಿಲಿಯ ರಾಜಧಾನಿ ಸಾಂಟಿಯಾಗೊದಲ್ಲಿ ಹಾಯಾಗಿದ್ದಾನೆ, ಆರೋಗ್ಯವಾಗಿದ್ದಾನೆ. ಸಾಂಟಿಯಾಗೋದಲ್ಲಿ ಪಿನೋಷೆ ಆಗಮಿಸಿದಾಗ ಐದು ಸಾವಿರಕ್ಕೂ ಹೆಚ್ಚು ಮಂದಿ ಪ್ರತಿಭಟನಾ ಪ್ರದರ್ಶನ ನಡೆಸಿ ಆತನನ್ನು ಬಂಧಿಸಬೇಕೆಂದು ಒತ್ತಾಯಪಡಿಸಿದರು. ಪಿನೋಷೆ ನಡೆಸಿದ ರಾಜ್ಯಕ್ರಾಂತಿಯಲ್ಲಿ ಕಗ್ಗೊಲೆಯಾದ ಚಿಲಿಯ ಚುನಾಯಿತ ಅಧ್ಯಕ್ಷ ಸಾಲ್ವಡೋರ್ ಅಲೆಂಡೆಯವರ ಪುತ್ರಿ ಇಸಬೆಲ್ ಅಲೆಂಡೆ ಪಿನೋಷೆ ಬಿಡುಗಡೆ ಬ್ರಿಟನ್, ಸ್ಪೇನ್ ಮತ್ತು ಚಿಲಿ ಸರಕಾರಗಳು ನಡೆಸಿದ ರಹಸ್ಯ ಕುತಂತ್ರ ಎಂದು ಹೇಳಿದ್ದಾರೆ.

ಸರ್ವಾಧಿಕಾರೀ ಆಡಳಿತವೇ ಹೆಚ್ಚು ಕಾಲವಿದ್ದ ಚಿಲಿಯಲ್ಲಿ ೧೯೭೦ರಲ್ಲಿ ನಡೆದ ಚುನಾವಣೆಗಳಲ್ಲಿ ಜಯಗಳಿಸಿ ಪುರೋಗಾಮಿ ರಾಜಕೀಯ ಪಕ್ಷ ಪಾಪ್ಯುಲರ್ ಯೂನಿಟಿ ಪಾರ್ಟಿ ಅಧಿಕಾರಕ್ಕೆ ಬಂದಿತು. ಸಾಲ್ವಡೋರ್ ಅಲೆಂಡೆ ಅಧ್ಯಕ್ಷರಾಗಿ ಆಯ್ಕೆಗೊಂಡು ರಾಜಕೀಯ ಸುಧಾರಣೆಗಳನ್ನು ಜಾರಿಗೆ ತಂದರು. ಅಮೆರಿಕಾದ ಬಹುರಾಷ್ಟ್ರೀಯ ಸಂಸ್ಥೆಗಳ ಒಡೆತನದಲ್ಲಿದ್ದ ತಾಮ್ರದ ಗಣಿಗಳನ್ನು, ಉದ್ಯಮಗಳನ್ನು, ರಾಷ್ಟ್ರದ ಹಿತದೃಷ್ಟಿಯಿಂದ ಅಲೆಂಡೆ ಸರಕಾರ ರಾಷ್ಟ್ರೀಕರಣ ಮಾಡಿತು. ತನ್ನ ಹಿತ್ತಲ ಪ್ರದೇಶ ಎಂದು ಅಮೆರಿಕ ಪರಿಗಣಿಸಿರುವ ಲ್ಯಾಟಿನ್ ಅಮೆರಿಕದ ಪುಟ್ಟ ದೇಶ ಚಿಲಿ ಅಮೆರಿಕದ ಹಿತಾಸಕ್ತಿಗಳಿಗೆ ಸವಾಲೊಡ್ಡಿದ್ದನ್ನು ಸಹಿಸದೆ ಹೋದ ಅಮೆರಿಕ ಚಿಲಿಯ ಮೇಲೆ ಆರ್ಥಿಕ ದಿಗ್ಬಂಧನ ಹೇರಿತು. ಬಹುರಾಷ್ಟ್ರೀಯ ಸಂಸ್ಥೆಗಳ ಮೂಲಕ ಬೇಕಾದಷ್ಟು ಹಣ ಸುರಿದು ಸೇನಾಪಡೆಯನ್ನು ಸರಕಾರದ ವಿರುದ್ಧ ಎತ್ತಿಕಟ್ಟಿತು. ಜನರಲ್ ಪಿನೋಷೆ ಅಮೆರಿಕದ ಆಜ್ಞೆ ಪಾಲಿಸಿ ಕ್ಷಿಪ್ರ ಕ್ರಾಂತಿ ನಡೆಸಿದ. ಚುನಾಯಿತ ಅಧ್ಯಕ್ಷ ಅಲೆಂಡೆ ಮತ್ತು ಅವರ ಅನುಯಾಯಿಗಳು ಕೊಲೆಗೀಡಾದರು. ಅನಂತರ ಹದಿನೇಳು ವರ್ಷಗಳ ಕಾಲ ಸರ್ವಾಧಿಕಾರಿಯಾಗಿ ದಬ್ಬಾಳಿಕೆ ನಡೆಸಿದ ಪಿನೋಷೆ ಹದಿನೈದು ಸಾವಿರಕ್ಕೂ ಹೆಚ್ಚು ಮಂದಿ ರಾಜಕೀಯ ವಿರೋಧಿಗಳನ್ನು ಕಗ್ಗೊಲೆ ಮಾಡಿದ. ನೊಬೆಲ್ ಪುರಸ್ಕಾರ ವಿಜೇತ ಕವಿ ಪಾಬ್ಲೊ ನೆರೂಡ, ನೊಬೆಲ್ ಪುರಸ್ಕಾರ ವಿಜೇತ ತತ್ವಜ್ಞಾನಿ, ಶಾಂತಿಯ ಹರಿಕಾರ ಬರ್ಟ್ರಾಂಡ್ ರಸೆಲ್ ಹಾಗೂ ಪ್ರಪಂಚದ ಎಲ್ಲ ಪುರೋಗಾಮಿಗಳು ಪಿನೋಷೆ ನಡೆಸಿದ ಸೇನಾಕ್ರಾಂತಿಯನ್ನು, ದಬ್ಬಾಳಿಕೆಯನ್ನು ಖಂಡಿಸಿದರು. ಆದರೆ ಮಾನವಹಕ್ಕುಗಳ ವಾರಸುದಾರರು ನಾವು ಎಂದು ಹೇಳಿಕೊಳ್ಳುವ ಅಮೆರಿಕನ್ ಸಾಮ್ರಾಜ್ಯಶಾಹಿಗಳು ಮಾತ್ರ ಚಕಾರವೆತ್ತಲಿಲ್ಲ ಆಗ. ಈಗಲೂ ಅಮೆರಿಕದ ವರಿಷ್ಠರಿಗೆ ಪಿನೋಷೆ ತನ್ನ ಅಪರಾಧಗಳ ವಿಚಾರಣೆಗೆ ಗುರಿಯಾಗದೆ ಬಿಡುಗಡೆ ಯಾಗಿರುವುದು ಸಮಾಧಾನದ ಸಂಗತಿ.

ಉದಾರೀಕರಣ, ಜಾಗತೀಕರಣ, ಮುಕ್ತ ಮಾರುಕಟ್ಟೆ ಆರ್ಥಿಕದ ಮಂತ್ರ ಜಪಿಸುತ್ತ ಬಹುರಾಷ್ಟ್ರೀಯ ಉದ್ದಿಮೆ ಸಂಸ್ಥೆಗಳನ್ನು ಬರಮಾಡಿಕೊಳ್ಳಲು ಹಾತೊರೆಯುತ್ತಿರುವ ನಮ್ಮ ರಾಜಕೀಯ ನಾಯಕರುಗಳು ಇಪ್ಪತ್ತೇಳು ವರ್ಷಗಳ ಹಿಂದೆ ಚಿಲಿಯಲ್ಲಿ ಸಂಭವಿಸಿದ ದುರಂತವನ್ನು ನೆನಪಿಸಿಕೊಳ್ಳುವುದು ಅಗತ್ಯ. ಅಮೆರಿಕ, ಬ್ರಿಟನ್ ಮತ್ತು ಇತರ ಸಾಮ್ರಾಜ್ಯಶಾಹಿ ದೇಶಗಳು ತಮ್ಮ ಸ್ವಹಿತಾಸಕ್ತಿಗಳಿಗೆ ಏನು ಮಾಡಲು ಸಿದ್ಧ ಎಂಬುದು ಕಳೆದ ಐವತ್ತು ವರ್ಷಗಳ ಅನುಭವ ತೋರಿಸಿಕೊಟ್ಟಿದೆ. ಮಾನವ ಹಕ್ಕುಗಳು, ಪ್ರಜಾಪ್ರಭುತ್ವ, ಮಾನವೀಯತೆ, ಇವೆಲ್ಲ ಇಂದು ಸವಕಲು ನಾಣ್ಯಗಳಂತಾಗಿವೆ. ಅವುಗಳನ್ನು ಅಮೆರಿಕ, ಬ್ರಿಟನ್‌ಗಳು ಬೇಕೆನಿಸಿದಾಗ ಬೇಕಾದ ದೇಶಗಳ ಮೇಲೆ ಸೇಡು ತೀರಿಸಿಕೊಳ್ಳಲು, ಪಾಠ ಕಲಿಸಲು ಬಳಸುತ್ತವೆ. ಚಿಲಿಯ ಜನತೆಯ ಮೇಲೆ ದಬ್ಬಾಳಿಕೆ ನಡೆಸಿದ ಕೊಲೆಗಡುಕ ಪಿನೋಷೆ ಬಿಡುಗಡೆ ಕುರಿತು ಅಮೆರಿಕದ ನಾಯಕರುಗಳಾಗಲಿ, ಪತ್ರಿಕೆಗಳಾಗಲಿ ಪ್ರತಿಭಟನೆ ಸೂಚಿಸಿಲ್ಲ.

ಪ್ರತಿವರ್ಷ ಅಮೆರಿಕದ ಮಾನವ ಹಕ್ಕುಗಳ ಪ್ರತಿಪಾದಕರು ತಯಾರಿಸುವ ಸಾವಿರಾರು ಪುಟಗಳ ವರದಿ ಪಕ್ಷಪಾತದಿಂದ ಕೂಡಿದ್ದು ಎಂಬುದನ್ನು ಎಲ್ಲರೂ ಒಪ್ಪುತ್ತಾರೆ. ಮಾನವ ಹಕ್ಕುಗಳ ವಾರಸುದಾರರು ನಾವು, ಎಲ್ಲಿ ಆ ಹಕ್ಕುಗಳ ಉಲ್ಲಂಘನೆಯಾದರೂ ಸಹಿಸುವುದಿಲ್ಲ ಎಂದು ಹೇಳಿಕೊಳ್ಳುವ ಅಮೆರಿಕದ ನಾಯಕರು ಪಿನೋಷೆ ನಡೆಸಿದ ಹಿಂಸಾಚಾರದ ವಿಚಾರದಲ್ಲಿ ಏಕೆ ಚಕಾರವೆತ್ತುವುದಿಲ್ಲ? ಅಮೆರಿಕದ ಮರ್ಜಿಗೆ ಅನುಸಾರವಾಗಿ ನಡೆದುಕೊಳ್ಳದಿರುವ ದೇಶಗಳನ್ನು, ನಾಯಕರನ್ನು ಗುರಿಮಾಡಿ ಮಾನವ ಹಕ್ಕುಗಳ ಉಲ್ಲಂಘನೆಯ ಆಪಾದನೆ ಹೊರಿಸುವುದನ್ನು ಸಾಮಾನ್ಯವಾಗಿ ಕಾಣಬಹುದು. ಯುಗೋಸ್ಲಾವಿಯಾದ ಅಧ್ಯಕ್ಷ ಮಿಲೊಸೆವಿಕ್ ಅಮೆರಿಕ ಸರಕಾರದ ದೃಷ್ಟಿಯಲ್ಲಿ ಯುದ್ಧಾಪರಾಧಿ. ಬೋಸ್ನಿಯ ಯುದ್ಧದ ಸಮಯದಲ್ಲಿ ಕಗ್ಗೊಲೆ ನಡೆಸಿದ ಆಪಾದನೆ ಅವರ ಮೇಲೆ. ಅವರನ್ನು ಬಂಧಿಸಲು ಅಮೆರಿಕದ ಸರಕಾರ ಐದು ಮಿಲಿಯ ಡಾಲರುಗಳು ಇನಾಮು ನೀಡುವುದಾಗಿ ಘೋಷಿಸಿದೆ. ಅಮೆರಿಕದ ಒತ್ತಾಯಗಳಿಗೆ ಮಣಿಯದೇ ಇದ್ದುದೇ ಮಿಲೊಸೆವಿಕ್ ಎಸಗಿದ ಅಪರಾಧ. ಅಮೆರಿಕದ ನೇತೃತ್ವದಲ್ಲಿ 'ನ್ಯಾಟೋ'ದ ವಿಮಾನಗಳು ಯುಗೋಸ್ಲಾವಿಯಾದ ಮೇಲೆ ನಡೆಸಿದ ವಿಮಾನ ದಾಳಿ ಅಪರಾಧ ಕೃತ್ಯವಲ್ಲ, ಅದು ಮಾನವೀಯ ದೃಷ್ಟಿಯಿಂದ ನಡೆಸಿದ ಬಾಂಬು ದಾಳಿ ಅಲ್ಲವೇ !

ಇಪ್ಪತ್ತು ವರ್ಷಗಳ ಕಾಲ ವಿಯೆಟ್ನಾಮಿನ ಮೇಲೆ ನಾಪಾಮ್ ಬಾಂಬು, ಪೆಲ್ಲೆಟ್ ಬಾಂಬುಗಳನ್ನು ಸುರಿದು, ರಾಸಾಯನಿಕ ವಸ್ತುಗಳನ್ನು ಸಿಂಪಡಿಸಿ ನೆಲವನ್ನು ಬರಿದಾಗಿಸಿದ ಅಮೆರಿಕ ಯುದ್ಧಾಪರಾಧಿಯಲ್ಲ. ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್‌ನ ಮೇಲೆ ಸೇಡು ತೀರಿಸಿಕೊಳ್ಳಲು ಎಲ್ಲ ಮಾನವೀಯ ಪರಿಗಣನೆಯನ್ನು ಮೂಲೆಗೊತ್ತಿ ಜನಸಾಮಾನ್ಯರ ಜೀವನವನ್ನು ದುಸ್ತರವಾಗಿಸಿ ಹೇರಿರುವ ಆರ್ಥಿಕ ದಿಗ್ಬಂಧನ ನ್ಯಾಯ ಸಮ್ಮತ. ಹಾಗೆಯೇ ಇರಾಕಿನ ನಗರದ ಮೇಲೆ ಬಾಂಬಿನ ಮಳೆಗರೆದದ್ದು ಅಪರಾಧ ಕೃತ್ಯವಲ್ಲ. ಪಟ್ಟಿ ಮಾಡುತ್ತಾ ಹೋದರೆ ಅಮೆರಿಕ ನಡೆಸಿರುವ ದುಷ್ಕೃತ್ಯಗಳಿಗೆ ಕೊನೆಯೇ ಇಲ್ಲವಾಗುತ್ತದೆ. ತನ್ನ ಮಿಲಿಟರಿ ಪ್ರಾಬಲ್ಯ, ಶ್ರೀಮಂತಿಕೆಯಿಂದ ಅಮೆರಿಕ ಎಲ್ಲವನ್ನೂ ಜೀರ್ಣಿಸಿಕೊಳ್ಳುತ್ತಿದೆ ಅಷ್ಟೆ. ಆದ್ದರಿಂದ ಮಾನವ ಹಕ್ಕುಗಳ ಕುರಿತಾಗಲಿ, ಮಾನವೀಯತೆಯ ಕುರಿತಾಗಲಿ ಮಾತನಾಡಲು ಕ್ಲಿಂಟನ್‌ಗೆ ನೈತಿಕ ಹಕ್ಕಿಲ್ಲ.

ಚಿಲಿಯ ಮಾಜಿ ಸರ್ವಾಧಿಕಾರಿಯನ್ನು ಬಿಡುಗಡೆ ಮಾಡಿದ ಬ್ರಿಟಿಷ್ ಸರಕಾರದ ತೀರ್ಮಾನ ಎಲ್ಲ ಪುರೋಗಾಮಿ ಚಿಂತಕರನ್ನು, ಮಾನವತಾವಾದಿಗಳನ್ನು ಆಕ್ರೋಶಕ್ಕೀಡುಮಾಡಿದೆ. ಬ್ರಿಟಿಷ್ ನ್ಯಾಯಾಲಯಗಳ ತೀರ್ಮಾನಗಳ ವಿಚಾರದಲ್ಲಿ ಸಂಶಯ ಹೆಚ್ಚಿದೆ. ಪ್ರಬಲ ವಲಯಗಳ ಒತ್ತಾಯಕ್ಕೆ ಈ ನ್ಯಾಯಾಲಯಗಳು ಮಣಿದಿರುವುದು ಸ್ಪಷ್ಟವಾಗಿದೆ. ಮಾನವ ಹಕ್ಕುಗಳ ಪ್ರತಿಪಾದಕರು, ಮಾನವತಾವಾದಿ ಚಿಂತಕರು ಪ್ರಪಂಚದಾದ್ಯಂತ ಎಚ್ಚೆತ್ತು ಪಿನೋಷೆಯಂಥ ದುಷ್ಕರ್ಮಿಗಳು ವಿಚಾರಣೆಗೆ ಗುರಿಯಾಗುವಂತೆ ಮಾಡಲು ಚಳುವಳಿ ನಡೆಸಬೇಕಾಗಿದೆ. ನಿಜವಾದ ಅಪರಾಧಿಗಳು ಶಿಕ್ಷೆಗೆ ಗುರಿಯಾಗುವಂತೆ ಮಾಡಲು ಒತ್ತಾಯ ತರಬೇಕಾಗಿದೆ.

– ಸೀಯಾರ್ಕೆ



*ಏ, ಕೋಳಿ! ಯಾವ ಮಸಾಲೆ ಅರೀಬೇಕು ಅಂತ ಹೇಳು ನೋಡೋಣ!*

# ಜಪ್ತಿ

ಡಿ. ಎಸ್. ಚೌಗಲೆ

ಒಂದು ನಟ್ಟ ನಸುಕು ನಗಾರಿ ಬಾರಿಸೋದಕ್ಕ ಭೀಮಪ್ಪ ಹಾಸಿಗೆ ಬಿಟ್ಟಿದ್ದ. ಊರ ದೇವರ ಸಿದ್ರಾಯನ ಪೂಜಾ ವ್ಯಾಳ್ಯಾಕ ಜಳಕ ಮಾಡಿ ಬಂದು ಕೌಲು ಹಚ್ಚುವವನಿದ್ದ. ಕೌಲು ಹಚ್ಚೋದು ಅಂದರ 'ಹೂ' ಕೇಳೋದು. ನಸುಕಿನಲ್ಲಿ ನಾಲ್ಕರ ಆಸುಪಾಸು ನುಡಿಸೋ ನಗಾರಿ ವಾಚು ಗಡಿಯಾರಗಳು ಕಮ್ಮಿಯಿದ್ದ ಆ ಜಮಾನಾದ ದಿನಗಳಲ್ಲಿ ಇಡೀ ಊರಿಗೇನೆ ಅಲಾರ್ಮ ಗಡಿಯಾರ ಇದ್ದಂಗ! ಊರ್‍ಯಾಕ ತಂಪ್ಯಾಳಾದಾಗ ಅಜುಬಾಜು ಊರತನಕ ಗುಣಕಿಪೆಟ್ಟಿನ ಸದ್ದು ಕೇಳಿಸುತ್ತಿತ್ತು. ನಗಾರಿ ಸದ್ದಿಗೆದ್ದು ಪ್ರಾತರ್ವಿಧಿಗಳನ್ನ ಮುಗಿಸೋರು ಹಲವಾರು ಮಂದಿ. ನ್ಯಾರಿಗಿ ತಂಗಳ ರೊಟ್ಟಿ, ಕೆನಿ ಮೊಸರ, ಹಸಿ ಮೆಣಸಿನಕಾಯಿ ಚಟ್ನಿ ತಿಂದ 'ವ್ಯಾರೆ'ಕ್ಕ ಹೋಗೋರೆಲ್ಲ ತೀರ ಕಾಳಜಿಯಿಂದ ಎದ್ದೇಳಲೇ ಬೇಕು. ಐದುಗಂಟೆಗಂದರ ಗಣ ಗಣ ಗಂಟೆಗಳ ಸುನಾದೊಳಗ ಸಿದ್ರಾಯನ ಪೂಜಿ ಮುಗಿಯುವಷ್ಟರಲ್ಲಿ ಕೌಲು ಕೇಳಾಕ ಸಾಲಾಗಿ ಭಕ್ತರು ಕುಂತಿರತಾರ.

ಭೀಮಪ್ಪ ಚರಿಗಿ ತಗೊಂಡು ಬೈಲಕಡಿಗಿ ಹಳ್ಳಕ ಹೋಗಿ ಹಾದ್ಯಾಗ ಬರುವಾಗ್ಯನ ಬಾವಿ ನೀರೆತ್ತಲ್ಲಿ ತಣ್ಣೀರ ಸ್ನಾನ ಮಾಡಿ ಇಬತ್ತಿ ಧಾಳಾಗಿ ಹಣಿಗೆ ಬಡಕೊಂಡು ಸಿದ್ರಾಯನ ಕೌಲು ಕೇಳಲು ನಂಬರ ಹಚ್ಚಿದ್ದ. ಬರ ಬೀಳೋ ಸೂಚನೆಗಳೆಲ್ಲವು ಇದ್ದರೂ ಪರಪ್ಪನ ಬಾವಿ ಇಂಜಿನ್ ಮಾತ್ರ ನಸುಕೀಲೆ ನೀರು ಚೆಲ್ಲತ್ತಿತ್ತು. ಅಲ್ಲಿ ಸ್ನಾನ, ಒಗ್ಯಾಣ ಎಲ್ಲವೂ ಬೆಳಗಾದಂಗ ಜೀವ ತಂದುಕೋತಿದ್ದವು. ಭೀಮಪ್ಪ ಮಿಂದೇಳೋದು ಹಳ್ಳದ ದಂಡೆಯ ಇಲ್ಲೆ.

ಸಿದ್ದರಾಯ ಜಾಗೃತ ದೇವರಂತ ಪ್ರತೀತಿ. ಇದ್ದ ಊರಿನ ಮಂದಿ ಅಷ್ಟ ಯಾಕ ಸುತ್ತಲಿನ ಪರಿಸರದ ಜನರೆಲ್ಲ ಕೌಲು ಹಚ್ಚೋದಕ್ಕ ಬರತಿದ್ದರು. ತಮ್ಮ ಹೊಲ - ಮನಿ, ಮಳಿ-ಬೆಳಿ ವಿಷಯ, ಗಂಡ-ಹೆಣ್ಣಿನ ಇಚಾರ, ಉದ್ಯೋಗ ದಂಧೆ, ಹಣದ ವ್ಯವಹಾರಗಳನ್ನೆಲ್ಲ ಕೌಲು ಕೇಳಿಯೇ ಕೆಲಸ ಕಾರ್ಯಕ್ಕ ತೊಡಗತ್ತಿದ್ದರು.

ಭೀಮಪ್ಪನೂ ತನ್ನ ಮಹತ್ವದ ಕೆಲಸಕ್ಕ ಸಿದ್ದರಾಯನ ಪರವಾನಗಿ ಕೇಳುವವನಿದ್ದ. ಅವರ ಅಣ್ಣ ತಮ್ಮಂದಿರೆಲ್ಲ ಸೇರಿ ಒಂದು ಕಾರ್ಯ ಮಾಡೋರಿದ್ದರು. ಭೀಮಪ್ಪ, ರಾಮಪ್ಪ, ತಾತೋಬಾ ಹಾಗೂ ದುಂಡಯ್ಯನ ಮನೆತನಗಳು ರಕ್ತ ಸಂಬಂಧದ ಬಂಧುಗಳು. ಇವರೆಲ್ಲ ಕೃಷಿಕರೂ ಹೌದು. ಒಕ್ಕಲುತನ ಅಥವಾ ರೈತಾಪಿ ವೃತ್ತಿ ಮನೆಮಂದಿಗೆಲ್ಲ ಅನ್ನ ಕೊಡುವ ಕುಲಕಸುಬು. ಫಲವತ್ತಾದ ಕರಿಮಣ್ಣಿನ ಬಂಗಾರ ಬೆಳೆಯೋ ನೆಲವನ್ನ ನೆಚ್ಚಿದವರು. ದುಂಡಯ್ಯ ಮಾತ್ರ ನಾಟಕ, ಸಂಗೀತ ಅಂತ ಏಣಗಿ ಬಾಳಪ್ಪನವರ ಕಂಪನೀಲಿ, ಬೇರೆ ಕಂಪನಿಗಳಲ್ಲೆಲ್ಲ ನಾಟಕದ [illegible] ಅಡ್ಡಾಡಿ ಈಗ ಊರಾಗ ಬಂದು ನೆಲೆ ಕಂಡುಕೊಳ್ಳಾಕ ಚಡಪಡಿಸುತ್ತಿದ್ದ. ಉಳಿದವರು ಚೂರುಪಾರು ಜಮೀನುಗಳನ್ನೇ ಅವಲಂಬಿಸಿದ ಬಡರೈತರು.

ಇವರೆಲ್ಲ ಕೂಡಿ ತಮ್ಮ ಹೊಲಗಳ ಮಧ್ಯದಲ್ಲಿರುವ ಸಾಮುದಾಯಿಕ ಪಾಲುಗಳ ಹಿರೇರ ಕಾಲದ ಬಾವಿ ತೋಡುವವರಿದ್ದರು. ಬರಬರತ ಮೊದಲಿನಂಗ ಮಳೆಯಿಲ್ಲ. ಬಾವಿಗಳು ನೀರಿಲ್ಲದ ಬತ್ತಲಿಕ್ಕ ಹತ್ಯಾವ. ಅಂಥ ಬಾವಿಗಳ ಸಾಲಿನಲ್ಲಿ ಇದೂ ಒಂದು. ಅದೂ ಅಲ್ಲದ ಗಾಂವದ ಮ್ಯಾಲ ಬರೀ ಏಳದಂಗ ಬರಗಾಲ ಬೀಳೋ ಎಲ್ಲ ಮುನ್ಸೂಚನೆಗಳು ಕಾಣಬರಲಿಕ್ಕ ಹತ್ಯಾವ. ಜುಲೈ ತಿಂಗಳ ಕಳೀತಾ ಬಂದರೂ ಮಳಿ ಅನ್ನೋದು ಮಟಾ ಮಾಯಾಗಿ ಅಡಗಿ ಹೋಗೇದ.

ಇಲ್ಲದಿದ್ದರೇನು? ಜರಾ ಮಳೆಯಾದರೂ ದುಡಿದುಂಬೋ ರೈತರ ಜೀವನಕ್ಕ ಒಂದಿಷ್ಟು ಕಾಳು ಕಡಿ ದಕ್ಕತಿದ್ದವು. ಯಾಕಂದರ ಚಿಕ್ಕೋಡಿ ತಾಲ್ಲೂಕಿನ ದೂಧಗಂಗಾ ಹೊಳಿಸಾಲಿನ ನೆಲದ ಪಟ್ಟೀನೆ ಅಂಥಾದ್ದು! ಹೊಳಿದಂಡಿ ಊರುಗಳಾದ ಶಾರದಗಿ, ಭೋಜ, ಸಿರದ್ವಾಡ ಮತ್ತು ಸದಲಗಿ ಜಮೀನುಗಳಂದರ ಹೊಳಿಸಾಲಿಂತನ ಪ್ರಸಿದ್ಧ ಆಗ್ಯಾವು. ಗೋಧಿ, ಜ್ವಾಳ, ಭತ್ತ, ಖಪಲಿ, ತಂಬಾಕು ಮತ್ತು ಕಬ್ಬು ಬೆಳೆಯನ್ನು ಸಮೃದ್ಧಾಗಿ ಬೆಳಿಯೋ ಎಲ್ಲ ಶಕ್ತಿಯನ್ನು ಈ ಭೂತಾಯಿ ತನ್ನೊಡಲೊಳಗ ತುಂಬಿಕೊಂಡಾಳ. ಆದರ ಏನ್ಮಾಡೋದು? ಆಗ ಕಾಳಮ್ಮವಾಡಿ ಧರಣ ಇನ್ನೂ ಆಗಿರಲಿಲ್ಲ. ಹಿಂಗಾಗಿ ಬ್ಯಾಸಗಿ ಬಂತಂದರ ದೂಧಗಂಗಾ ಬತ್ತಿ ಬಡಕಲಾಗಿ ತನ್ನೊಳಗ ಬರೀ ಧೂಳು, ಉಸುಕನ್ನು ತುಂಬಿಕೊಂಡಿರುತ್ತಿದ್ದಳು. ಹ್ಯಾಂಗ ಹೊಳೀಗಿ ನೀರು ಕಮ್ಮಿ ಆಗತಾವೋ ಹಾಂಗ ಬಾವಿಗಳು ಬರಿದಾಗಾಕ ಸುರುವು ಆಗತ್ತಿದ್ದವು. ಈಗ ಆಗ್ತಿರೋದು ಅದ! ಅದಕ್ಕ ಭೀಮಪ್ಪ ಮತ್ತು ಅಣ್ಣ ತಮ್ಮಂದಿರೆಲ್ಲ ಸೇರಿ ಬಾವಿ ತೋಡೋದಕ್ಕ ತಯಾರಾಗಿದ್ದರು ರಾಷ್ಟ್ರೀಕೃತ ಬ್ಯಾಂಕೊಂದು ಸಾಲ ಕೊಡೋದಕ್ಕೂ ಸಮ್ಮತಿಸಿತ್ತು.

ಭೀಮಪ್ಪ ಕೌಲು ಹಚ್ಚಲು ನಂಬರಿನಲ್ಲಿ ಕೂತಿದ್ದ. ಕೌಲು ಹಚ್ಚಾಕ ಪ್ರತಿಯೊಬ್ಬರಿಗೂ ಐದೈದು ನಿಮಿಷದ ವ್ಯಾಳ್ಯಾ. ಅಷ್ಟರೊಳಗ ಆಗಲಿಲ್ಲಂದರ ತಿರುಗಿ ಮತ್ತ ಸರತಿಯಲ್ಲಿ ಪಾಳಿ ಹಚ್ಚಬೇಕು. ಅದಕ್ಕ ದೇವರ ಮೈಮೇಲಿನ ಹೂವು ಉರುಳೋದನ್ನ ತದೇಕ ಚಿತ್ತದಿಂದ ಕಾಯುತ್ತಾ, ಬಿನ್ನವಿಸಿಕೊಳ್ಳುತ್ತ ಕೂತಿರತಾರ.

ಪೂಜಾರಿ ಶಿವಣ್ಣ ತೀರ್ಥ ಹಾಕತ್ತಿದ್ದ. ಭಕ್ತರು ದೇವರಿಗಿ ಬಂದು ದರ್ಶನ ಪಡೆದು, ನಮಸ್ಕರಿಸಿ ಹೋಗುತ್ತಿದ್ದರು, ಕೆಲವರು ಬರುತ್ತಿದ್ದರು. ಗಡ್ಡಧಾರಿ ಇರಪಣ್ಣ ಮಾಳಿಯ ಸರತಿ ಬಂತು. ಇರಪಣ್ಣನ ಬಳಿಕ ಭೀಮಪ್ಪಂದು. ಇರಪಣ್ಣ ಮಾಳಿ ಇಚಲಕರಂಜಿಯಲ್ಲಿ ಮಗ್ಗದ ಕೈಗಾರಿಕೆ ಶುರು ಮಾಡೋನಿದ್ದ. ಅದಕ್ಕ ಕೌಲು ಹಚ್ಚಲು ಬಂದಿದ್ದ.

ಅವ ಕೈಮುಗಿದು ಮನದೊಳಗೆ ಏನೇನೋ ಅಂದು ಕೊಳ್ಳುವಂತೆ ತುಟಿಯಲ್ಲಿ ಗುಣಗುಣಿಸುವ ಧ್ವನಿ ತೆಗೆದು ಗೋಣನ್ನು ಎಡಕ್ಕ ಬಲಕ್ಕಾಡಿಸುತ್ತ-''.....ಅಂದರ ಬಲಕೊಡು..... ಇಲ್ಲಂದರ ಎಡಕೊಡು.....'' ಅನ್ನುವುದು ತೀರ್ಥ ಹಾಕುತ್ತ ಕೂತ ಪೂಜಾರಿ ಶಿವಣ್ಣನಿಗೆ ಕೇಳಿಬರ್ತಿತ್ತು. ಒಂದೆರಡ ನಿಮಿಷ ಕಳೆದರೂ ಹೂವು ಬೀಳುತ್ತಿಲ್ಲ. ಇರಪಣ್ಣನ ಒತ್ತಡ ಅಧಿಕವಾಗುತ್ತಿತ್ತು. ಇನ್ನೊಂದೆರಡು ನಿಮಿಷದೊಳಗ ಮತ್ತ ಹತ್ತಾರ ಮಂದಿ ಹಿಂದೆ ಕೂತು ಸರದಿಗೆ ಕಾಯಬೇಕಾಗತದಲ್ಲ! ಎಂಬ ಚಡಿಪಡಿಕಿ ಆರಂಭಾಗಿತ್ತು. ಅವ್ನ ಚಡಿಪಡಿಕಿ ಕಂಡ ಪೂಜಾರಿ ಶಿವಣ್ಣ ಮಹಾ ಕಿಲಾಡಿ ಪುರೋಹಿತ. ಇರಪಣ್ಣನಿಗಿ ''ಅದ್ಯಾನ ಇರಪಣ್ಣ... ದೇವರ್‍ನ್ಗ ನಿನ್ನ ಮಾತಿನ ಉತ್ತರ ಕೊಡವಂಗ ಆಗೇತಿ...ಯಾನ ಮಟಕಾ



ನಂಬರ ಗಿಂಬರ ಕೇಳಾಕದಿಯಾನ ಮತ್ತ? ಫೈಲೀನ ನೀನು ನಿತ್ಯ ಇಚಲಕರಂಜಿಗಿ ಹೋಗೋ ಮನುಷ್ಯಾ...!'' ಎಂದು ಚುರುಕ್ಕನ ತಳಕ್ಕ ಹತ್ತುಹಾಂಗ ಅಂದ.

''ಹಂಗೇನಿಲ್ಲಪ್ಪ ಶಿವಣ್ಣ...'' ಅಂತಂದು ದೇವರಿಗಿ ಮತ್ತ ಕೈ ಮುಗಿ ಮುಗಿದು ಕೇಳಹತ್ತಿದ. ಆದರ ಹೂವೇನು ಉದರಲಿಲ್ಲ.

ಇರಪಣ್ಣ ಬೇಸರದಿಂದ - ''ಸಾಹೇಬರು... ಟೂರ ಮ್ಯಾಲೆ ಹೋದಂಗ ಕಾಣ್ತದ ಅದಕ್ಕ ಮಾತಾಡವಲ್ಲರು....'' ಅಂತ ತನಗs ತಾನ ಒಂದು ಸಬೂಬು ಹೇಳಿಕೊಳ್ಳತ ಸಮಾಧಾನ ಹೇಳಿಕೊಂಡವರ ಹಾಂಗ ತನ್ನ ಟೈಮು ಮುಗಿದಿದ್ದರಿಂದ ಪೈಜಾಮನ್ನ ಜಾಡಿಸುತ್ತ ಎದ್ದ. ಹಿಂದೆ ಹೋಗಿ ಸರದಿಗೆ ಕೂತ.

ಕೌಲು ಆಗದಿದ್ದರ ದೇವರು ಭಕ್ತರ ಮನಿಗಳಿಗಿ ಹೋಗ್ಯಾನ ಅನ್ನೋ ನಂಬಿಕೆಯಿಂದ 'ಸಾಹೇಬರ ಟೂರ ಮ್ಯಾಲೆ ಹೋದಂಗ ಕಾಣ್ತದ...' ಎಂಬ ಮಾತುಗಳು ಇರಪಣ್ಣನಂಥ ಭಕ್ತರ ಬಾಯಿಂದ ಉದುರುತ್ತಿದ್ದವು.

ಭೀಮಪ್ಪನ ಪಾಳಿ ಬಂತು. ಭಕ್ತಿ ಪೂರ್ವಕ ವಂದಿಸಿ-'ಸಾಮಯಿಕ ಬಾವ್ಯಾಗ ನೀರ ಬೀಳ್ತಾವು, ತೋಡಂದರ ಬಲ ಕೊಡು, ಇಲ್ಲಂದರ ಎಡ ...' ಮನದೊಳಗ ಪ್ರಾರ್ಥಿಸಿ ಕೇಳಿದೊಡನೆ ಆತನಿಗೆ ತಟ್ಟನ ಒಳ್ಳೇ ಹೂವೇ ಕೌಲಾಯಿತು. ಹಿರಿ ಹಿರಿ ಹಿಗ್ಗಿನಿಂದ ಎದ್ದು ತೀರ್ಥ ತಗೊಂಡು ಬರಬರನೆ ಮುಂದಿನ ಕೆಲಸಕ್ಕ ಹೋದ.

''ಭೀಮಪ್ಪಣ್ಣ ಯಾನ ಚಾನ್ಸ ಹೊಡಿದೆಲ್ಲ ... ಇರಪಣ್ಣಂಗ ಕೌಲು ಆಗದಿದ್ದರs ನಿನಗ ಛಲೋ ಹೂವs ಬಿತ್ತಲ್ಲ....'' ಎಂಬ ಪೂಜಾರಿ ಶಿವಣ್ಣನ ನುಡಿಗಳು ಭೀಮಪ್ಪನ ಬೆನ್ನಿಲೆ ಹಿಂದಿಂದ ತೇಲಿಹೋದವು.

* * *

ತಿಂಗಳೊಪ್ಪತ್ತಿನಲ್ಲಿ ಬ್ಯಾಂಕಿನ ಸಾಲ ಸಿಕ್ಕಿತು. ಆಳುಗಳು ಸಲಿಕೆ, ಗುದ್ದಲಿಗಳು, ಹಾರೆ ಕಾಡತೂಸುಗಳೊಂದಿಗೆ ಬಾವಿ ತೋಡಲು ಸಜ್ಜಾದರು. ಸಾಲವನ್ನ ತಂತಮ್ಮ ಉತಾರಾಗಳ ಮೇಲೆ ಏರಿಸಿಕೊಂಡಿದ್ದರು. ಭೀಮಪ್ಪ ಮಾತ್ರ ತನ್ನದೊಂದು ಹೊಲದ ಉತಾರಾದ ಮ್ಯಾಲ ದುಂಡಯ್ಯನ ಪಾಲಿನ ಸಾಲವನ್ನೂ ವಿಶ್ವಾಸದಿಂದ ಸೇರಿಸ್ಕೊಂಡಿದ್ದ. ಇಬ್ಬರದು ನೆರಿ ಹೊರಿ ಹೊಲಗಳು. ದುಂಡಯ್ಯ ಬ್ಯಾರೆ ಗಳಗಳಿಸಿ ಕೇಳಿಕೊಂಡ-

''ಭೀಮಪ್ಪಣ್ಣ, ನಂದು ನಿಂದು ಯಾನರ ಬ್ಯಾರೇದನ, ಇಬ್ಬರು ಸಮ ಸಮ ಬೆಳಿ ಬಂದ ಮ್ಯಾಲೆ ತುಂಬತ ಹೋಗೂಣು. ಅದಕ್ಕ ನಿಂದೊಂದs ಉತಾರ ಇರಲೇಳ...'' ಈ ನುಡಿಗಿ ಭೀಮಪ್ಪ ''ಆಯಿತೇಳ ದುಂಡಯ್ಯ ... ನೀಯೆಲ್ಲಿ ಹೋಗಾವಿದ್ದಿ...'' ತಲೆ ಯಾಡಿಸಿದ ಭೀಮಪ್ಪ . ಭಾಳ ಭೋಳೆಯಾದ ಭೀಮಪ್ಪ ಪ್ರೀತಿ-ವಿಶ್ವಾಸಕ್ಕ ಅಡ್ಡ ಬೀಳೋ ವ್ಯಕ್ತಿ, ಬೇಕಂದರ ಧೋತರಾನು ಕಳದ ಕೊಡುವಂಥವ. ಅವನನ್ನ ಯಾರು ಬೇಕಾದರು ನಂಬಿಕೆಯಿಂದ ಗೆದಿಬಹುದು.

ಸುಡು ಸುಡು ಬಿಸಿಲು ಭರ್ತಿ ಮಳಗಾಲದ ದಿನಗಳಲ್ಲಿ ತನ್ನ ಪ್ರತಾಪವನ್ನ ತೋರಿಸುತ್ತಿತ್ತು. ಸುಡೋ ನೆತ್ತಿಯ ಪರಿವಿಲ್ಲದನ ಸಾಮಯಿಕ ಬಾವಿ ತೋಡೋದು ಬಿರುಸಿನಿಂದ ಸಾಗಿತು. ಹಾರೆಗಳ ಖಣ ಖಣ ಸದ್ದು... ಕಾಡುತೂಸುಗಳು ಧುಡುಂಮ್ಮನೆ ಸ್ಫೋಟಗೊಂಡು ಕಲ್ಲುಗಳನ್ನು ಎಬ್ಬಿಸಹತ್ತಿದವು. ಆಳುಗಳ ಸಂಗಡ ರಾಮಪ್ಪ, ಭೀಮಪ್ಪ, ತಾತೋಬಾ ಅವರುಗಳು ಕೂಡಿಕೊಂಡರು. ತಮ್ಮ ರಟ್ಟೆ ಬಲವನ್ನು ಹುರಿಗೊಳಿಸಿದರು. ರಕ್ತವನ್ನ ಬೆವರು ನೀರಾಗಿ ಹಣಿಸಿದರು. ನೀರಿನ ಸೆಲಿ ಶೋಧ ಹೀಂಗ ನಿರಂತರ ಸಾಗಿತು. ಹೇಳಿ ಕೇಳಿ ನಾಟಕ, ಆಟ ಅಂತ ಬಾಳೇ ಕಳೆದ ದುಂಡಯ್ಯ ಮೆತ್ತನ್ನ ಮನುಷ್ಯ. ಬಾವಿ ಬಾಜು ಇರೋ ಗಿಡದ ಕೆಳಗ ಬಿಳಿ ಧೋತರ, ಅಂಗಿ ತೊಟ್ಟು ಕಾಲಮ್ಯಾಲೆ ಕಾಲ ಹಾಕಿ ನಾಟಕದ ಗೀತೆಗಳನ್ನ ಹಾಡುತ್ತ ಹೋಗಿ ಬರುವ ರೈತ, ಕೂಲಿಗಳ ಜತೆ ಹರಟುತ್ತ ಕೂತಿರತಿದ್ದ.

ಹಲವಾರು ಅಡಿ ಬಾವಿ ತೋಡಿದರೂ ಗಂಗಾಮಾತೆ ದರುಶನ ಕರುಣಿಸಲಿಲ್ಲ. ಬ್ಯಾಂಕಿನಿಂದ ಸಾಲರೂಪದಲ್ಲಿ ತಂದದ್ದೂ ಹಾರೆ, ಕಾಡತೂಸುಗಳಲ್ಲಿ ಅದರ ದನಿಯಲ್ಲಿ ಕರಗಿತು. ಇಡೀ ವರ್ಷವೆಲ್ಲ ಕೆಟ್ಟ ಕೆರ ಹಿಡಿದ ಬರದ ವರ್ಷವಾಯಿತು. ಹಾಗೆ ನೀರಿಗೂ ಬರ!

ಬರಗಾಲದ ಪ್ರದೇಶವೆಂದು ಸರಕಾರ ಘೋಷಣೆ ಮಾಡಿದ ಮ್ಯಾಲ ಕಾಮಗಾರಿಗಳು ಶುರುವಾದವು. ಜ್ವಾಳ, ಭತ್ತಗಳು ತೊನೀಲೆಯಿಲ್ಲ. ಜ್ವಾಳ ಕಣಿಕಿ ಮೇವಾಗಿ ಹೋದರ ಭತ್ತ ಹೊಲದಲ್ಲೆ ಒಣಗಿ ಮುರಟಿಹೋಯಿತು. ದನಗಳನ್ನ ಸಾಕೋದು ದುಸ್ತರಾತು. ಕಸಾಯಿ ಖಾನೆ ಗಳಿಗೋ? ಹುಲ್ಲು ಮೇವಿದ್ದವರಿಗಿ ಸಾಕುವುದಕ್ಕೋ? ನಿಪ್ಪಾಣಿ, ಇಚಲಕರಂಜಿ ಸಂತಿಗಳಿಗಿ ದನಗಳನ್ನು ಮಾರಲು ತಂಡ ತಂಡಾಗಿ ಜನ ಹೋದರು. ಹೊಟ್ಟಿಗಿ ಅನೂಲಿ ಯಾದವರು ಶಾರ ಊರುಗಳಿಗೆ ಕೆಲಸ ಹುಡುಕುತ್ತ ಸಾಗಿದರು. ಅಲ್ಲಲ್ಲಿ ನೀರಿದ್ದ ಧನಿಗಳು ಊರಿಗಿ ಒಂದೀಟು ಉಪಕಾರ ಮಾಡಹತ್ತಿದರು. ತಂಬಾಕಿಲ್ಲದ ವಖಾರಿಗಳು ಭಣಗುಟ್ಟದವು. ಕಬ್ಬು ನುರಿಸುವ ಕಾರಖಾನೆಗಳು ಲಗೂನ ಬಾಗಿಲು ಮುಚ್ಚಿದವು. ಈ ಪರಿಯಲ್ಲಿ ಬಡರೈತರ ಬದುಕಿನ ದಿಕ್ಕೇ ಬದಲಾತು. ರೈತರು ಒಮ್ಮೆ ಲುಕ್ಸಾನು ಕಂಡರ ಅದರಿಂದ ಮ್ಯಾಲಿ ಬರಾಕ ವರ್ಷಗಳೇ ಕಳೀಬೇಕಾಗತದ. ಅಂಥ ಲುಕ್ಸಾನಿನ ದೊಡ್ಡ ಕಂದಕದೊಳಗ ಅವರೀಗ ಬಿದ್ದಾರ.

ಗಂಡ ಹೆಂಡತಿ ಮತ್ತ ಇಬ್ಬರು ಮಕ್ಕಳ ಕುಟುಂಬದ ಭೀಮಪ್ಪಂದು ಹುಂಬ ಧೈರ್ಯಾನೆ ಅಂತ ಹೇಳಬೇಕು. ಅವನ ಹೆಂಡತಿ ನಿಂಗವ್ವ ವಿವೇಕದ ಮಾತನ್ನ ಹೇಳಿದ್ದಳು.

''ಬ್ಯಾಡರಿ... ಮಳಿಯಿಲ್ಲ ಮಾರಿಲ್ಲ... ಯಾಕ ಸಾಲದಾಗ ಮುಳುಗತೀರಿ. ಹ್ಯಾಂಗಾದ್ರು ದುಡಿದು ತಿನ್ನೋಣ ... ಸಿದ್ದರಾಯನಿಗ್ಯಾನ ಕಣ್ಣಿಲ್ಲ''..... ದೇವರ ಮ್ಯಾಲೆ ಭಾರ ಹಾಕಿ ತನಗ ತಿಳಿದಿದ್ದನ್ನ ಹೇಳಿದ್ದಳು-

''ಅಲ್ಲ ನಿಂಗಿ ನನಗ ಇರೋರು ನೀವ ಮೂವರು. ಅಲ್ಲ, ಮಗ ಶಿವರುದ್ರ ಸಾಲಿಗಿ ಹೊಂಟಾನ.... ಪೋರಿ ಇನ್ನೂ ಸಣ್ಣದsದ. ಈಗ ತ್ರಾಸಾದರು ನಾಕ ಚೂರ ಕಾಸು ಮಾಡ್ಕೋಡ ಬ್ಯಾಡ..... ನೀನ್ಯಾಕ ಕಾಳಜಿ ಮಾಡಬ್ಯಾಡ.... ದೇವರದಾನ.....'' ಅಂತ ನಿಂಗವ್ವನ ಮಾತಿಗಿ ಧೈರ್ಯ ತುಂಬಿದ್ದ.

ಹಸಿರು ತರಕಾರಿ, ಕಾಳು ಕಡಿ ಕನಸಿನ ಮಾತಾದವು. ಹೈಬ್ರೀಡ್ ಜ್ವಾಳ, ಅದರ ಜುಣಕದ ರಾಡಿಂದ ಹೊಟ್ಟ ಕಳ್ಳ ತುಂಬೋದು ನಡೀತು. ಹೊಲಾನ ಕರಕಲಾದ ಮ್ಯಾಲ ಭೀಮಪ್ಪ, ನಿಂಗವ್ವ ದುಡ್ಯಾಕ ಹೋಗಾಕ ಹತ್ತಿದರು. ಅಕ್ಕಿ ಮಾರಿ ನೋಡಿ ತಿಂಗಳುಗಳೋ ಉರುರಿದ್ದವು. ಮನಿ ಭತ್ತದ ಘಮಘಮಿಸೋ ಅನ್ನವುಂಡ ದಿನಗಳು ಕೇವಲ ನೆನಪಾಗ ಹತ್ತಿದವು. ಶಿವರುದ್ರ, ತಾರಿ ಆಗಾಗ ಅವ್ವಗ-''ಅವ್ವಾ ಹಿಡಿ ಅನ್ನ ಬೇಕಾಗೇದ .... ಮಾಡಿ ಹಾಕಲ್ಲ....'' ಅಂತ ಹಪಾಹಪಿಸಿದವು. ಇಂದ ನಾಳಿ ಅನ್ನತ ಅವುಗಳ ಆಸೆಯನ್ನ ಆಸೆಯಾಗಿಯೇ ಇರಿಸಿದಳು ನಿಂಗವ್ವ.

ಬರಗಾಲದ ಹೊಡೆತಕ್ಕ ತಡಿಲಾರದ ದುಂಡಯ್ಯ ಮತ್ತ ಊರು ಬಿಟ್ಟು ಹೋಗಿದ್ದ. ಗುಳೇದಗುಡ್ಡದಲ್ಲಿ ಯಾವುದೋ ನಾಟಕ ಕಂಪನಿಯೊಂದರಲ್ಲಿದ್ದಾನ ಅಂತ ಹಾರಿಕೆ ಮಾತುಗಳು ಊರೊಳಗ ಅವರಿವರಿಂದ ಕೇಳಿ ಬರತ್ತಿದ್ದವು. ದುಂಡಯ್ಯಗಿರೋ ಒಬ್ಬನs ಹಿರಿಮಗ ಅವ್ವ ಗೋದಾಬಾಯಿನ ಕರಕೊಂಡು ತೆಳನಾಡಿನ ಬೀಗರ ಮನೆ ಸೇರಿಕೊಂಡ ಬಿಟ್ಟಿದ್ದ. ಗೋದಾಬಾಯಿ ತವರೂರು ತೆಳನಾಡಿನಲ್ಲಿತ್ತು.

* * *

ವರುಷಗಳು ಕಳೆದವು. ದಿನಗಳು ಹ್ಯಾಂಗ ಕಳಿತಾವೋ ಗೊತ್ತಾಗೋದಿಲ್ಲ. ಪರಪಂಚದ ವ್ಯಾಮೋಹದೊಳಗ ಎಲ್ಲನೂ ಕರಗಿ ನೀರಾಗಿ ಹೋಗಿರತದ. ಹಾಂಗ ಕಾಲವೂ ಕೂಡ ! ಬರದ ಹೊಡೆತದಿಂದ ಪಾರಾಗೂದು ಬಡರೈತಗ ಕಷ್ಟದ ಮಾತs ಖರೆ. ಎಷ್ಟ ಬೆಳಿ ಬಂದರೇನು? ಹೋದರೇನು? ದುಂಡಯ್ಯ ತುಂಬದ ಸಾಲವು ಸೇರಿ ಭೀಮಪ್ಪನ ಬಾವಿ ತೋಡಿದ ಸಾಲ ಹನುಮನ ಬಾಲದಂಗ ಖಾತೆಯಲ್ಲಿ ಬೆಳೆದು ಭೂತಾಗಿತ್ತು. ಆಗಲೆ ನೋಟಿಸಿನ ಮ್ಯಾಲೆ ನೋಟಿಸು ಬಂದರೂನು ಭೀಮಪ್ಪ ದುಡಿದು ಉಂಡು, ಉಟ್ಟು ಸಾಲಕ್ಕ ಕಟ್ಟದ್ದು 'ಆನೆ ಕುಂಡಿಗಿ ಅಳ್ಳಿ ಬೋಳೆ' ಹಾಕಿದಂಗಾಗುತ್ತಿತ್ತು. ದುಂಡಯ್ಯಗ ಕಾಗದ ಬರೆದರೂ ಆ ಮಹಾರಾಯನಿಂದ ಸಾಲುತ್ತರವೂ ಕೂಡ ಇರಲಿಲ್ಲ.

ಒಂದು ಮಧ್ಯಾಹ್ನ ಬ್ಯಾಂಕ್ ಮ್ಯಾನೆಜರ್ ರಘುರಾಮ ದೇಶಪಾಂಡೆ ಒಬ್ಬ ಸಿಬ್ಬಂದಿಯೊಂದಿಗಿ ಬಂದರು. ಭೀಮಪ್ಪ ಮನೆಯೊಳಗಿರಲಿಲ್ಲ. ನಿಂಗವ್ವ ರೊಟ್ಟಿ ಬಡೀಲಿಕ್ಕ ಕೂತಿದ್ದಳು. ಹಿಟ್ಟಗೈಲೆ ಒಲಿಮುಂದಿದ್ದೆದ್ದು ಬಂದಳು. ಅಲ್ಲಿದ್ದ ಹೊರಿಸಲಿಗಿ ಕೈ ಮಾಡತ-

'' ಕುಂದರಿ ... ಸಾಹೇಬ್ರ ಅವರು ಮನೀಲಿಲ್ಲ....'' ಅಳುಕಿ ಅಂದಳು. ಅವಳ ದನಿಯೊಳಗ ಅವ್ಯಕ್ತ ಹೆದರಿಕೆ ಇಣುಕಿತ್ತು. ಎಂಥೆಂಥ ಕಷ್ಟಗಳು ಎದುರಾಗಲಿವೆಯೋ? ಎಂದು ಮನದಲ್ಲಿ ದೇವರನ್ನ ನೆನೆಯುತ್ತ ನಿಂತಳು. ಅವಳ ಮುಖದೊಳಗ ಚಿಂತಿ ಗೆರೆಗಳನ್ನ ಬೇಕಾದವರು ಗುರುತಿಸಬಹುದಿತ್ತು.

ದೇಶಪಾಂಡೆ ತಮ್ಮ ಕಾರ್ಯ ನೆನೆದು ಅಂದರು- ''ನೋಡವ್ವ ನಾವ್ ಕೂಡ್ರಾಕ ಬಂದವರಲ್ಲ... ನಿನ್ನ ಗಂಡನಿಗೆ ಹೇಳು ... ಸಾಲಾನ ನಾಲ್ಕ ದಿನದೊಳಗ ಏನಾರ ವ್ಯವಸ್ಥ ಮಾಡಿ ತೀರಿಸಲಿಲ್ಲಂದರ... ಕಾಯ್ದೆಸಿರ ಮನೆಯನ್ನ ಜಪ್ತಿ ಮಾಡಬೇಕಾಗತದ... ಅದೂ ಅಲ್ಲದ ಇನ್ನು ಮುಂದ ಎಂದೂ ನಿಮಗ ಸಾಲ ಸಿಗಬಾರದೂ ಅಂತ ಕೆಟ್ಟದಾಗಿ

ರಿಪೋರ್ಟ ಬರೀದಿಡಬೇಕಾಗತದ...ಏನಾರ ಮಾಡಲಿಕ್ಕೆ ಹೇಳು...''

ದೇಶಪಾಂಡೆ ನಿಂತಕೊಂಡ ಹೇಳುತ್ತಿದ್ದರು.

ನಿಂಗವ್ವನ ಕೈ ಕಾಲೊಳಗಿನ ಕಸುವ ಸೋರಿ ಹೋದಂಗಾತು. ಗಂಟಲುಬ್ಬಿ ಬಂದರೂನು ತಡಕೊಂಡು ಬಿನ್ನವಿಸಿದಳು-

''ಸಾಹೇಬರ .. ನೀವ ಹೀಂಗಂದರ ಹ್ಯಾಂಗ? ನೀವ ನೋಡಾಕ ಹತ್ತೀರಲ್ಲ... ನಮ್ಮ ಹಿರ್‍ಯಾ ಬಂದಂಥ ಬೆಳಿನೆಲ್ಲ ಮಾರಿ ರೊಕ್ಕ ತುಂಬಕೋತ ಬಂದಾನ .... ಬರ ಬ್ಯಾರೆ ಬಿದ್ದು ಮನಿ ಪರಿಸ್ಥಿತಿ ಸುಧಾರಿಸಲಾಕ ವರ್ಷಗಳ ಬೇಕಾದ್ವು...!''

''ನೋಡವ್ವ .. ಭೀಮಪ್ಪಂದು ಒಂದS ಅಲ್ಲ ದುಂಡಯ್ಯಂದೂ ಅವನದS ಉತಾರಾದ ಮ್ಯಾಲದ .... ದುಂಡಯ್ಯ ತುಂಬೇ ಇಲ್ಲ. ಎರಡೂ ಸೇರಿ ಅಸಲು ಬಡ್ಡಿ ಬೆಳೆದ ನಿಂತದ.... ನನಗೇನೂ ಮಾಡಾಕ ಆಗಾಂಗಿಲ್ಲ....''

ದೇಶಪಾಂಡೆ ಮುಂದ ಬರಬಹುದಾದ ದುರಂತದ ಬಗ್ಗೆ ಎಚ್ಚರದ ಮಾತುಗಳನ್ನ ಹೇಳಿ ಹೋದರು. ನಿಂಗವ್ವ ಕುಸಿದು ಕೂತಳು. ತಡೆ ಹಿಡಿದ ದುಃಖ ಉಮ್ಮಳಿಸಿ ಕಟ್ಟೆ ಒಡದಂಗ ಹರಕೊಂಡು ಹೋಯಿತು. ಆಡಲು ಹೋದ ಮಕ್ಕಳು ಬಂದವು. ಅವು ಯಾಕ ಅವ್ವ ಕಣ್ಣೀರ ಹಾಕಲಾಕ ಹತ್ಯಾಳಂಬೋದು ತಿಳೀದನ ಮಕಮಕ ನೋಡಹತ್ತಿದವು. ಎದುರಿದ್ದ ಮಕ್ಕಳ ಭವಿಷ್ಯ ಕೆಲಕ್ಷಣ ದೆವ್ವಿನಂಗ ಕಾಡಾಕ ಹತ್ತಿತು.

ಭೀಮಪ್ಪ ರಾತ್ರಿ ತಡಮಾಡಿ ಬಂದ. ಅಂವಗ ಊಟಕ್ಕ ಬಡಿಸಿದಳು. ಉಣ್ಣು ತನಕ ಇಬ್ಬರ ನಡುವ ಮಾತಿಲ್ಲ ಕತೆಯಿಲ್ಲ. ನೀರವ ಮೌನ ! ಆ ಮೌನ ಚಿಮಣಿ ದೀಪದ ಬೆಳಕನ್ನು ನುಂಗುವ ಹವಣಿಕೆಯಲ್ಲಿತ್ತು. ಉಂಡು ಕೈ ತೊಳೆದ ಮ್ಯಾಲ ನಿಂಗವ್ವ ಮ್ಯಾನೇಜರ್ ದೇಶಪಾಂಡೆ ಬಂದು ಹ್ವಾದ ಇಚಾರನ್ನ ಹೇಳಿದಳು.

''ಬಾವಿ ತೋಡಿಸೋದು ಬ್ಯಾಡಂತ ಹೇಳಿದ್ನಿ... ನೀವ ಕೇಳಲಿಲ್ಲ. ಅಲ್ಲದS ಅಣ್ಣ ತಮ್ಮಂದಿರದು ಬ್ಯಾರೆ ಕಾಯ್ದೆ ಪ್ರಕಾರ ನಿಮ್ಮ ಮ್ಯಾಲದ.... ಎಲ್ಲಾನು ಗಂಟಲಕ್ಕ ಬಂದು ಕೂತದ...'' ಅಂದಳು. ಅವಳ ಕಣ್ಣಂಚಿನ ನೀರು ಇನ್ನೂ ಆರಿರಲಿಲ್ಲ. ಚಿಮಣಿ ದೀಪನ್ಯಾಗ ಅದು ಫಳಫಳಿಸುತ್ತಿತ್ತು.

ಅವಳ ದುಃಖ ದುಮ್ಮಾನ ನೋಡಲಿಕ್ಕಾಗದ ಭೀಮಪ್ಪ ಮಾರಿನ ಬ್ಯಾರೆ ಕಡಿಗಿ ಮಾಡಿ ತನ್ನ ಪ್ರಯತ್ನಗಳನ್ನು ಅರುಹಿದ-

''ನಿಂಗಿ ...ಇಂಥ ಕಷ್ಟದಾಗ ಯಾರೂ ರೊಕ್ಕ ಕೊಡವಲ್ಲರು... ಮಂದೀ ಕಡಿನೂ ದುಡ್ಡಿಲ್ಲ.... ಅವರಾದರು ಹೆಂಗಾದ್ರು ಕೊಡತಾರು. ಬರದ ಝಳ ಎಲ್ಲರಿಗೂ ತಟ್ಟಿ ಭಾಳ ದಿನಗಳೇನು ಆಗಿಲ್ಲ .... ಕೇಳಿದವರು ಏನಾದರ ಕಾರಣ ಹೇಳ್ತಿದ್ದಾರ .... ರಾತ್ರಿ ಆತು ಮಲಗೇಳು.... ದೇವರ ಯಾನ ಬುದ್ಧಿ ಕೊಡತಾನು ನೋಡೂಣು....'' ಭೀಮಪ್ಪನ ಸಾಂತ್ವನ ನುಡಿಗಳು ತನ್ನ ಕಾಲವನ್ನು ಮಿತಿಯನ್ನು ಮೀರಿದ್ದವು.

ಇಬ್ಬರು ಮಲಗಿದರೂ ನಿದ್ದಿಲ್ಲ. ಮಗ್ಗುಲ ಬದಲಿಸಿದರು. ಒಳಕುದಿತಗಳಿಂದ ಕಣ್ಣರೆಪ್ಪೆಗಳು [illegible] ಸುಡುತ್ತಲಿತ್ತು ದಣಿದ ಮೈಗೆ ಯಾವಾಗ ನಿದ್ದಿ ಆವರಿಸಿತೋ ಗೊತ್ತಾಗಲಿಲ್ಲ.

ಭೀಮಪ್ಪನ ಹೋರಾಟಗಳೆಲ್ಲ ಹುಸಿ ಹ್ವಾದವು. ನಾಟಕ ಕಂಪನಿಗಳು ಇರುವಲ್ಲಿಗಿ ಹೋಗಿ ದುಂಡಯ್ಯನನ್ನ ಹುಡುಕಾಡಿದ. ಗೋದಾಬಾಯಿ ಕಡಿಗಿ ಹೋದರ ನೆರಪಿಗಿ ಆಕೆನೂ ಬರಲಿಲ್ಲ. ಅವಳ ಮಗ ಮುಂಬೈಗಿ ಹೋಗ್ಯಾನಂತ ಹೇಳಿದಳು. ಬರಿಗೈಲಿ ಇದ್ದ ಕಾಸನ್ನೂ ಖರ್ಚು ಮಾಡಿ ಬಂದ. ಯಾವ ಅಣ್ಣತಮ್ಮಂದಿರು, ಬಂಧುಗಳು, ಪಾವಣೇರು ಕಷ್ಟಕ್ಕ ಬರಲಿಲ್ಲ. ಅವನಿಗಿ ಉಳಿದದ್ದೊಂದೇ ಹಾದಿ- ''ಕರಿಮಾರಿ ಸಿದ್ರಾಯ ಹೂ ಕೊಟ್ಟಾನ, ಏನ ಮಾಡ್ತಾನ ಮಾಡಲಿ'' ಅಂಬೋದು.

ಅಂದು ಬ್ಯಾಂಕಿನ ರಿಕವರಿ ತಂಡ ಭೀಮಪ್ಪನ ಮನಿಗಿ ದಾಳಿ ಹಾಕಿತು. ಒಳ ಹ್ವಾದವರು ಒಂದೊಂದ ಸಾಮಾನುಗಳನ್ನ ಹೊರ ತಂದಿಡಲು ತೊಡಗಿದರು. ತಾಮ್ರ, ಹಿತ್ತಾಳಿಯ ಹಿರೇರ ಕಾಲದ ದೊಡ್ಡ ಹಂಡೆ, ಕೊಡ, ಪಾತೇಲಿಯಂತಹ ಭಾಂಡಿಗಳನ್ನ ಹೊರಗ ಒಂದು ಕಡಿಗಿ ಕೂಡು ಹಾಕಹತ್ತಿದರು. ಅವರ ಬಳಿಯೇನು ಬೆಳ್ಳಿ, ಬಂಗಾರವಿರಲಿಲ್ಲ. ಕೃಷಿಗೆ ಬೇಕಾದ ನೇಗಿಲು, ಕೂರಿಗಿಗಳಿದ್ದವು. ಭೀಮಪ್ಪನು ಬಾವಿ ತೋಡಲು ಬಳಸಿದ ಪ್ರೀತಿಯ ಹಾರೆ, ಸಲಿಕೆ, ಗುದ್ದಲಿಗಳೂ ಇದ್ದು. ಒಬ್ಬ ಪಟ್ಟಿ ತಯಾರು ಮಾಡುತ್ತಲಿದ್ದ.

ಅಸಹಾಯಕರಾಗಿ ಭೀಮಪ್ಪ, ನಿಂಗವ್ವ ಅಂಗಳದ ಮೂಲಿಯ ತುದಿಯಲ್ಲಿ ನಿಂತಿದ್ದರು. ನಿಂಗವ್ವಳ ಕಣ್ಣೀರು ಒಣಗಿದ ನೆಲದ ಧೂಳಲ್ಲಿ ಕರಗುತ್ತಿತ್ತು. ಭೀಮಪ್ಪ ಅವಮಾನಿತರಂತೆ ಮುಖ ಮಾಡಿದ್ದ. ಬಾಜುವಿನಲ್ಲಿ ಏನೂ ಅರಿಯದ ಮಕ್ಕಳು ಜಪ್ತಿಯೆಂಬ ನಾಟಕದ ಅಂತ್ಯವನ್ನು ವೀಕ್ಷಿಸುತ್ತಿದ್ದವು. ಅಕ್ಕ ಪಕ್ಕದವರು ಹಾದೀಲಿ ಹಾದು ಹೋಗೋರು ನೋಡತ ತಮ್ಮ ಬುದ್ಧಿ ಪಾತಳೀಯಲ್ಲಿ ತಿಳಿದಿದ್ದನ್ನ ಆಡಿಕೊಳ್ಳತ ಹೆಜ್ಜೆ ಬದಲಿಸುತ್ತಿದ್ದರು. ಆದರ ನಿಂಗವ್ವಗ ಇದು ತೀವ್ರ ಆಘಾತ ಕೊಟ್ಟ ಪ್ರಸಂಗವಾಗಿತ್ತು. ಓಣಿಯೊಳಗ ತಲೆಯೆತ್ತಿ ತಿರುಗಲಾರದಂಗಾತಲ್ಲ ಎಂಬ ನೋವು ಅವಳನ್ನು ಕೊರೆಯುತಲಿತ್ತು.

ಇನ್ನೇನು ಸಾಮಾನುಗಳ ಯಾದಿ ಸಿದ್ಧವಾಯಿತು. ಅವುಗಳನ್ನ ತಾವು ತಂದ ಗಾಡಿಯಲ್ಲಿ ಹಾಕುವಷ್ಟರಲ್ಲಿ ಹಿಂದಿನಿಂದ ದಡದಡನೆ ನಾಲ್ಕಾರು ಜನ ಧಡೂತಿ ಆಸಾಮಿಗಳು ಹಾಜರಾದರು. ಜನರಿಗೆಲ್ಲ ಇದೇನಿದು ನಡುವಿ ಅಂತ ಅಚ್ಚರಿ! ಬಿಳಿ ಬಟ್ಟೆ ತೊಟ್ಟ ಅವರ ಹೆಗಲುಗಳ ಮ್ಯಾಲಿ ಹಚ್ಚ ಹಸಿರು ಶಾಲು [illegible]. ಅವರಲ್ಲೊಬ್ಬ ಗಡ್ಡ ಬೆಳೆಸಿದ ವ್ಯಕ್ತಿ ಬಂದು ಭೀಮಪ್ಪನ ಹೆಗಲು ಅದುಮಿ ಕಣ್ಮುಚ್ಚಿ ಸನ್ನೆ ಮಾಡಿ ಚಿಂತೆ [illegible] ಎಂದನೇನೊ?

ಹೋದ ಜೀವ ಮರಳಿ ಬಂದ ಹಾಗೆ ಭೀಮಪ್ಪನ ಮೊಗವು ಜೀವಕಳೆ ದುಂಬಿ ಫಳಫಳನ ಹೊಳೀತು.

ಡಿ. ಎಸ್. ಚೌಗಲೆ
''ಗುರುರಾಜ ನಿವಾಸ'', ಸೆಕ್ಟರ್ ನಂ. ೮, ಪ್ಲಾಟ್ ನಂ. [illegible]
ಸತ್ಯಮಾರ್ಗ, ಆಂಜನೇಯನಗರ, ಬೆಳಗಾವಿ-[illegible]

## ಬಿಳಿಯ ಹೂ

ಸೋಸಿದಷ್ಟು, ಸೋಸಿದಷ್ಟೂ,
ಸೋಸಿಗೆ ಸಿಗದ ಹಾಡುಗಳು....
ತಲೆಯಿಲ್ಲ, ಬಾಲವಿಲ್ಲ
ಕಾಡುವಂತ ಎಳೆಗಳು.

ಗುಡಿಯಲೊಮ್ಮೆ ಗುಡಿಸಲಲ್ಲಿ,
ರಂಧ್ರದಲ್ಲಿ, ದಾರದಲ್ಲಿ,
ಮಾಂಸದಲ್ಲಿ, ಮುದ್ದೆಯಲ್ಲಿ,
ಕಾಮದಲ್ಲಿ, ನೇಮದಲ್ಲಿ,
ಹಿಂದೆ ಮುಂದೆ ಎಲ್ಲ
ಒಂದೆ ಎಂಬ ಭ್ರಮೆಯಲ್ಲಿ.

ಇರುವ ನಾಳೆ,
ಇರದ ನೆನ್ನೆ,
ಮಧ್ಯೆ ಮಂಜ ಬಿಂದು,
ಕಾಣಸಿಗದು ಪೂರ್ಣಬಿಂಬ
ಎಲ್ಲ ಬರಿಯ ನೀಲನಕ್ಷೆ.

ಕಣ್ಣು ಮುಚ್ಚಿ ಕೂತ ವೇಳೆ
ಬಣ್ಣ ಬಣ್ಣ ನೆನಪು.
ಹಸಿರು ಎಲೆ, ಕೆಂಪು ಮಣ್ಣು
ನಡುವೆ ಬಿಳಿಯ ಹೂವು.

ದಿನೇಶ ಎ. ಎಸ್.
ಮಹಿಳಾ ಅಧ್ಯಯನ ವಿಭಾಗ, ತ್ರಿಪದಿ ಕನ್ನಡ ವಿಶ್ವವಿದ್ಯಾಲಯ
ಹಂಪಿ, ವಿದ್ಯಾರಣ್ಯ ಪೋಸ್ಟ್, ಹೊಸಪೇಟೆ, ಬಳ್ಳಾರಿ ಜಿಲ್ಲೆ.

# ಆಚಾರ್ಯ ಧರ್ಮಾನಂದ ಕೋಸಂಬಿ (೧೮೭೬-೧೯೪೭)

ಡಾ॥ ಜ್ಯೋತ್ಸ್ನಾ ಕಾಮತ್

ಬಡೋದೆಯಲ್ಲಿ ಸಾಮ್ರಾಟ್ ಅಶೋಕನ ಬಗ್ಗೆ ಬೌದ್ಧ ಧರ್ಮದ ವಿದ್ವಾಂಸರೊಬ್ಬರ ಭಾಷಣ ಏರ್ಪಟ್ಟಿತ್ತು. ಸಭೆಗೆ ಅಧ್ಯಕ್ಷರಾಗಿ ಬಡೋದಾ ಸಂಸ್ಥಾನದ ಮಹಾರಾಜರಾಗಿದ್ದ ಸಯಾಜಿರಾವ್ ಗಾಯಕವಾಡರು ಆಗಮಿಸಿದ್ದರು. ಆ ಸಂಸ್ಥಾನದ ಒಂದು ಪ್ರದೇಶದ ಜನ ತಮ್ಮಲ್ಲಿಯ ಮದ್ಯದಂಗಡಿಗಳನ್ನು ಮುಚ್ಚಿಸಬೇಕು ಎಂದು ಮಹಾರಾಜರ ಸರಕಾರಕ್ಕೆ ವಿನಂತಿಸಿಕೊಂಡಿದ್ದರು. ಆದರೆ ಆ ಅಂಗಡಿಗಳಿಂದ ಸರಕಾರಕ್ಕೆ ದೊರೆಯುತ್ತಿದ್ದ ಹಣವನ್ನು ಅಲ್ಲಿಯವರು ಬೇರೆ ಬಗೆಯಲ್ಲಿ ಭರ್ತಿ ಮಾಡಿದಲ್ಲಿ ಮಾತ್ರ ಅವನ್ನು ಮುಚ್ಚಲಾಗುವದೆಂದು ಮಹಾರಾಜರು ಉತ್ತರಿಸಿದ್ದರು. ಈ ವಿಚಾರ ಆ ವಿದ್ವಾಂಸರಿಗೆ ತಿಳಿದು, ತಮ್ಮ ಭಾಷಣದಲ್ಲಿ ''ಅಶೋಕನು ತನ್ನ ರಾಜ್ಯದಲ್ಲಿ ಮದ್ಯದ ಅಂಗಡಿಗಳನ್ನು ಮುಚ್ಚಿಸಿದ್ದನು. ಮದ್ಯ ನಿಷೇಧದಿಂದ ಸರಕಾರಕ್ಕೆ ತಪ್ಪಿದ ಹಣವನ್ನು ಪ್ರಜೆಗಳು ತುಂಬಿಕೊಟ್ಟರೆ ಮಾತ್ರ ನಾನು ಮದ್ಯ ನಿಷೇಧವನ್ನು ಜಾರಿಯಲ್ಲಿ ತರುವೆ, ಎಂದು ಅವನು ಹೇಳಲಿಲ್ಲ'', ಎಂದು ಹೇಳಿದರು. ಅಧ್ಯಕ್ಷರಾಗಿದ್ದ ಮಹಾರಾಜರು ಒಂದೇ ವಾಕ್ಯ ನುಡಿದರು : ''ಧರ್ಮಾನಂದರೇ, ಇಂದು ತಾವು ನಮಗೆ ಚೆನ್ನಾಗಿ ಪಾಠ ಕಲಿಸಿದಿರಿ !''

ಕೇಳಿದ ಜನ ದಂಗಾದರು. ವಿದ್ಯಾಪ್ರೇಮಿಯಾಗಿದ್ದ ಮಹಾರಾಜರೇ ಆ ವಿದ್ವಾಂಸರನ್ನು ಕಲಕತ್ತೆಯಿಂದ ಬಡೋದೆಗೆ ಬರುವಂತೆ ಮಾಡಿ ಬೋಧನೆ, ಸಂಶೋಧನೆಗಳಿಗೆ ಸೌಕರ್ಯಗಳನ್ನು ಕಲ್ಪಿಸಿಕೊಟ್ಟಿದ್ದರು. ಇನ್ನೇನು, ಅಪರೂಪದ ರಾಜಾಶ್ರಯ ಆ ವಿದ್ವಾಂಸರಿಗೆ ತಪ್ಪಿ ಹೋದಂತೆಯೇ, ಎಂದು ಜನ ಭಾವಿಸಿದರು. ಆದದ್ದು ಬೇರೆಯೇ ! ಜನರು ಬಿನ್ನವಿಸಿಕೊಂಡ ಪ್ರದೇಶದ ಎಲ್ಲ ಮದ್ಯದಂಗಡಿಗಳನ್ನು ಮುಚ್ಚಲಾಗುವುದೆಂದು ಮರುದಿನ ಫರ್ಮಾನು ಹೊರಟಿತು.

ನೇರ ನಡೆ-ನುಡಿಯ, ನಿರ್ಭಯ ಸ್ವಭಾವದ ಆ ವಿದ್ವಾಂಸರೇ ಖ್ಯಾತಿವೆತ್ತ ಆಚಾರ್ಯ ಧರ್ಮಾನಂದ ಕೋಸಂಬಿ ಅವರು. ಪಾಲಿ ಭಾಷೆಯ ಪಂಡಿತರೆಂದು, ಬೌದ್ಧ ಧರ್ಮದ ಶ್ರೇಷ್ಠ ವಿದ್ವಾಂಸರೆಂದು, ಅಂತರರಾಷ್ಟ್ರೀಯ ಮನ್ನಣೆ ಪಡೆದ ಅವರ ಜೀವನ ಒಂದು ಸಾಹಸಗಾಥೆ. ಯಾವ ಒತ್ತಡ-ಬಂಧನಗಳೂ ಇಲ್ಲದೆಯೇ ಬೌದ್ಧ ಧರ್ಮವನ್ನು ಅಭ್ಯಸಿಸುವ ನಿರ್ಧಾರದಿಂದ ಮನೆಬಿಟ್ಟವರು ಕಷ್ಟಪಟ್ಟರು. ಪ್ರವಾಸವು ದುರ್ಗಮವಾಗಿದ್ದ ದಿನಗಳಲ್ಲಿ ದೇಶಾಂತರಗಳಲ್ಲಿ ಸಂಚಾರಮಾಡಿದರು. ಆ ತನಕ ಕೇವಲ ಪಾಶ್ಚಾತ್ಯ ವಿದ್ವಾಂಸರ ಮೂಲಕವಷ್ಟೆ ವಿಶ್ವಕ್ಕೆ ಪರಿಚಯವಿದ್ದ ಬೌದ್ಧ ಧರ್ಮ - ಸಾಹಿತ್ಯಗಳಿಗೆ ಭಾರತೀಯ ದೃಷ್ಟಿಕೋನದಿಂದ ಹೊಸ ಆಯಾಮಗಳನ್ನು ನೀಡಿದರು. ಆ ಮತಗ್ರಂಥಗಳಲ್ಲಿ ಬೇರೂರಿದ್ದ ಕೆಲವು ವಿಚಾರಗಳು ಚಾರಿತ್ರಿಕವಲ್ಲವೆಂದು ತೋರಿಸಿಕೊಟ್ಟರು. ಕೇವಲ ಹೆಸರಿಗಾಗಿ ಉಳಿದಿದ್ದ ಪ್ರಾಚೀನ ಗಣರಾಜ್ಯಗಳ ಆಡಳಿತ ಪದ್ಧತಿಯ ಮೇಲೆ ಹೊಸ ಬೆಳಕು ಚೆಲ್ಲಿದರು. ಪ್ರಾಚೀನ ಬೌದ್ಧ ಸಂಘಗಳ ಸಮಾಜವಾದಿ ಸ್ವರೂಪವನ್ನು ಎತ್ತಿ ತೋರಿಸಿದ್ದೇ ಅಲ್ಲದೇ ಅವುಗಳ ಸಾಮಯಿಕ ಅಂಶವನ್ನು ಬಿಂಬಿಸಿದರು. ಜೈನ - ಬೌದ್ಧ ಧರ್ಮಗಳಲ್ಲಿಯ ಆಹಾರಾದಿ ವಿಚಾರ ಕುರಿತಾದ ಅವರ ನಿಸ್ಸಂಕೋಚ ವಿಚಾರಗಳು ಬಿರುಗಾಳಿಯನ್ನೇ ಎಬ್ಬಿಸಿದವಾದರೂ ಅವರ ಸಂಶೋಧನೆಯ ಪ್ರಾಮಾಣಿಕತೆಯ ಬಗ್ಗೆ ಯಾರೂ ಸೊಲ್ಲೆತ್ತಲಿಲ್ಲ! ಅವರೊಬ್ಬ ಅಪರೂಪದ ಮೇಧಾವಿ, ಬಹುಮುಖ ಪ್ರತಿಭೆಯ ವಿದ್ವಾಂಸ.

## ಜೀವನ, ಅಧ್ಯಯನ

ಧರ್ಮ ದಾಮೋದರ ಶೆಣ್ವೆ (ಗ್ರಾಮ: ಕೋಸಂಬಿ) ಮೂಲ ಹೆಸರಿನ ಧರ್ಮಾನಂದರು ಗೋವಾ ಪ್ರಾಂತದ ಸಾಂಖವಾಳ ಗ್ರಾಮದಲ್ಲಿ ೧೮೭೬ರಲ್ಲಿ ಬಡ ಸಾರಸ್ವತ ಕುಟುಂಬವೊಂದರಲ್ಲಿ ಜನ್ಮವೆತ್ತಿದರು. ಆಗ ಪೋರ್ಚುಗೀಸ್ ಆಧಿಪತ್ಯಕ್ಕೆ ಒಳಪಟ್ಟ ಗೋವಾ ಶಿಕ್ಷಣದ ವಿಚಾರದಲ್ಲಿ ತೀರ ಹಿಂದುಳಿದಿತ್ತು. ಇದ್ದ ಕೊಂಚ ಜಮೀನಿನ ಉಸ್ತುವಾರಿ ಹಾಗೂ ತೆಂಗಿನ ತೋಟಕ್ಕೆ ನೀರೆರೆಯುವದರಲ್ಲೇ ಧರ್ಮನ ಬಾಲ್ಯ, ಕಿಶೋರಾವಸ್ಥೆಗಳು ಕಳೆದವು. ಮೂರು ಶಾಲೆಗಳಲ್ಲಿ ಕೆಲ ತಿಂಗಳ ಪ್ರಾಥಮಿಕ ವಿದ್ಯಾಭ್ಯಾಸವಷ್ಟೆ ಅವರಿಗೆ ಲಭಿಸಿತು. ಕೈಗೆ ಸಿಕ್ಕ ಮರಾಠಿ ಪತ್ರಿಕೆ-ಪುಸ್ತಕಗಳನ್ನು ಓದುತ್ತ, ಅರಿಯುವ ಹಂಬಲವನ್ನು ಮುಂದರಿಸಿಕೊಂಡು ಶಾಲಾ-ಕಾಲೇಜು ಮುಖ ಕಾಣಲಾಗದೇ ಹೊರಟವನಿಗೆ ಗೌತಮ ಬುದ್ಧನ ಜೀವನ-ಸಾಧನೆಗಳ ಕುರಿತ ಲೇಖನವೊಂದು ವಿಶೇಷ ಆಕರ್ಷಣೆಯಾಗಿ ಕಂಡಿತು. ಬೌದ್ಧ ಧರ್ಮದ ವ್ಯಾಸಂಗ ಕೈಕೊಳ್ಳುವುದೆಂದು ನಿರ್ಧರಿಸಿದ. ೧೮೯೯ರಲ್ಲಿ ಪುಣೆಗೆ ಹೋಗಿ ಶ್ರೇಷ್ಠ ಬೋಧಕ, ಸಂಶೋಧಕರಾಗಿದ್ದ, ಆರ್. ಜಿ. ಭಂಡಾರಕರರನ್ನು ಧರ್ಮನು ಭೆಟ್ಟಿಯಾದ. ಅವರ ಸೂಚನೆಯಂತೆ ಇಂದೋರ ಗ್ವಾಲೇರಗಳಿಗೆ ಹೋಗಿ ಕೊಂಚ ಧನಸಹಾಯ ಪಡೆದು, ಉಜ್ಜಯನಿ, ವಾರಣಾಸಿಗಳಲ್ಲಿ ಸಂಸ್ಕೃತವನ್ನು ಅಭ್ಯಸಿಸಿದ. ಬಳಿಕ ಬುದ್ಧಗಯಾ, ನೇಪಾಳಗಳಿಗೂ ಹೋದ. ಆದರೆ ಬೌದ್ಧ ಧರ್ಮದ ವ್ಯಾಸಂಗ ಮಾಡಬೇಕೆಂದಾತನಿಗೆ ನಿರಾಸೆಯೇ ಎಲ್ಲೆಲ್ಲೂ ಕಾದಿತ್ತು.

ಮೂಲ ಬೌದ್ಧ ಧರ್ಮದ ಗ್ರಂಥಗಳೆಲ್ಲ ಪಾಲಿ ಭಾಷೆಯಲ್ಲಿ ಇದ್ದವು. ಆದರೆ ಆ ಧರ್ಮದೊಂದಿಗೇ ಪಾಲಿ ಭಾಷೆಯು ಭಾರತದಿಂದ ಪಲಾಯನ ಮಾಡಿ ಶತಮಾನಗಳೇ ಕಳೆದಿದ್ದವು. ೧೯ನೇ ಶತಮಾನದ ಕೊನೆಯಲ್ಲಿ ಸಿಂಹಳ (ಈಗಿನ ಶ್ರೀಲಂಕಾ) ದ್ವೀಪದಲ್ಲಿ ಮಾತ್ರ ಪಾಲಿ ಭಾಷೆ ಹಾಗೂ ವಾಙ್ಮಯಗಳ ಅಧ್ಯಯನದ ಅವಕಾಶವಿತ್ತು. ಬೌದ್ಧ ಧರ್ಮಾನುಯಾಯಿಗಳಿದ್ದ ನೇಪಾಳ, ಟಿಬೇಟ, ಬ್ರಹ್ಮದೇಶ (ಮ್ಯಾನ್ಮಾರ್), ಸಯಾಮ್ (ಥಾಯಲಾಂಡ್), ಮತ್ತು ಚೀನ-ಜಪಾನಗಳಿಂದ ಆಸಕ್ತರು ಸಿಂಹಳಕ್ಕೇ ಬರುವುದು ವಾಡಿಕೆಯಾಗಿತ್ತು. ಪಾಲಿ ಭಾಷೆಯನ್ನು ಆಮೂಲಾಗ್ರವಾಗಿ ಅಭ್ಯಸಿಸದೆ ಬೌದ್ಧ ಧರ್ಮದ ತಿರುಳನ್ನು ಅರಿಯಲು ಸಾಧ್ಯವಿಲ್ಲವೆಂದು ಮನಗಂಡ ಧರ್ಮರು ಸಿಂಹಳಕ್ಕೆ ಹೋದರು. ಸುಮಂಗಲಾಚಾರ್ಯರೆಂಬ ಘನವಿದ್ವಾಂಸರ ಮೇಲ್ವಿಚಾರಣೆಯಿದ್ದ ವಿದ್ಯೋದಯ ವಿದ್ಯಾಲಯದಲ್ಲಿ ಪ್ರಯಾಸದಿಂದಲೇ ಪ್ರವೇಶ ದೊರಕಿಸಿದರು. ಸಿಂಹಳೀ ಲಿಪಿಯಲ್ಲೆ ಪಾಲಿ ಭಾಷೆಯನ್ನು ಅಭ್ಯಸಿಸಿದರು. ತ್ರಿಪಿಟಕಗಳ ಆಳವಾದ ಅಧ್ಯಯನ ಕೈಗೊಂಡರು.

ಪಾಲಿ ಭಾಷೆಯಲ್ಲಿರುವ ಬೌದ್ಧ ವಾಙ್ಮಯದ ಗ್ರಂಥ ಸಮುದಾಯಕ್ಕೆ ತ್ರಿಪಿಟಕಗಳೆನ್ನುತ್ತಾರೆ. ವಿನಯ ಪಿಟಕ, ಸುತ್ತ ಪಿಟಕ ಮತ್ತು ಅಭಿಧಮ್ಮ ಪಿಟಕ ಎಂಬವು ಮೂರು ವರ್ಗದವು. 'ಪಿಟಕ' ಎಂದರೆ ಸಂಗ್ರಹ, ಬುಟ್ಟಿ. 'ಸುತ್ತ ಪಿಟಕ'ದಲ್ಲಿ ಬುದ್ಧನ ಉಪದೇಶ, 'ವಿನಯ ಪಿಟಕ'ದಲ್ಲಿ ಧರ್ಮಪಾಲನೆಯ ನಿಯಮಗಳು, ಹಾಗೂ 'ಅಭಿಧಮ್ಮ ಪಿಟಕ'ದಲ್ಲಿ ಬೌದ್ಧ ಮತ ಪ್ರತಿಪಾದನೆಯ ವಿಚಾರಗಳಿವೆ. ಸುತ್ತ ಪಿಟಕದಲ್ಲಿಯೇ ಐದು ದೊಡ್ಡ ಭಾಗಗಳಿವೆ. ಸುತ್ತ ಎಂಬುದು 'ಸೂತ್ರ'ದ ಪಾಲಿ ರೂಪ. ಬುದ್ಧನ ಬೋಧನೆಯನ್ನು ಸುತ್ತ ರೂಪದಲ್ಲಿ ಕಾಯ್ದಿರಿಸುವ ಪರಂಪರೆ ಬುದ್ಧನ ಪರಿನಿರ್ವಾಣದ ಮೊದಲ ವರ್ಷಗಳಲ್ಲೇ ಪ್ರಾರಂಭವಾಯಿತು. ಇವುಗಳ ಜೊತೆಗೆ ಬುದ್ಧನ ಬೋಧನೆ, ಸಂಭಾಷಣೆಗಳು, ಜನ್ಮಾಂತರದ ಕತೆಗಳು, ಪವಾಡಗಳೆಲ್ಲ ಶತಮಾನಗಳಲ್ಲಿ ಸೇರಿಕೊಳ್ಳುತ್ತ ಹೋದವು. ಕ್ರಿ. ಶ. ಐದನೆಯ ಶತಮಾನದಲ್ಲಿ ಆಗಿಹೋದ ಬುದ್ಧಘೋಷನೆಂಬ ಪಂಡಿತ ಅವನ್ನೆಲ್ಲ ವರ್ಗೀಕರಿಸಿದ. ವ್ಯಾಖ್ಯಾನ ರೂಪದಲ್ಲಿ ಸಾಮಾನ್ಯ ಜನರಿಗೆ ಅರ್ಥವಾಗುವಂತೆ ಬೌದ್ಧ ದರ್ಶನದ ಸಾರವನ್ನು ಪ್ರಚುರಗೊಳಿಸಿದ. ಆತನ 'ವಿಸುದ್ಧಿ ಮಗ್ಗ' ಪಾಲಿ ಸಾಹಿತ್ಯದ ಶ್ರೇಷ್ಠ ಗ್ರಂಥ. ಸಿಂಹಳದಲ್ಲಿ ಲಭ್ಯವಿದ್ದ ಸೂತ್ರಗಳು, ಗೇಯ (ಸ್ತೋತ್ರಗಳು), ಗಾಥಾಗಳು, ವ್ಯಾಖ್ಯಾನಗಳು, ಉದಾನ (ಬುದ್ಧನ ಉದ್ಗಾರಗಳು), ಇತಿವೃತ್ತಗಳು, ಜಾತಕ ಕತೆಗಳನ್ನೆಲ್ಲ ಆಮೂಲಾಗ್ರವಾಗಿ ಧರ್ಮರು ಅಭ್ಯಸಿಸಿದರು.

## ಬೌದ್ಧ ಧರ್ಮ ಸ್ವೀಕಾರ

ಬೌದ್ಧ ಧರ್ಮದ ವಿಶೇಷ ಪ್ರಭಾವಕ್ಕೆ ಒಳಗಾಗಿ ಆ ಧರ್ಮವನ್ನು ಸ್ವೀಕರಿಸಿ 'ಧರ್ಮಾನಂದ ಕೋಸಂಬಿ' ಎನಿಸಿಕೊಂಡರು. ಹೆಚ್ಚಿನ ಅಧ್ಯಯನಕ್ಕೆ ಬ್ರಹ್ಮದೇಶಕ್ಕೆ ಹೋಗಿ ಅಲ್ಲಿಯ ವಿಹಾರಗಳಲ್ಲಿಯೂ ಲಭ್ಯವಿದ್ದ ಗ್ರಂಥಗಳನ್ನು ತಿರುವಿಹಾಕಿದರು. ೧೯೦೬ರಲ್ಲಿ ಭಾರತಕ್ಕೆ ಮರಳಿದರು. ಬ್ರಹ್ಮದೇಶದ ವಾಸ್ತವ್ಯದಲ್ಲಿ ಜರ್ಮನ್

ಬೌದ್ಧ ಭಿಕ್ಷುವಿನ ಒಡನಾಟದಲ್ಲಿ ಸಂಭಾಷಿಸಿಯೇ ಇಂಗ್ಲಿಷ್ ಭಾಷೆ ಕಲಿತರು. ಸಂಸ್ಕೃತ ಭಾಷೆಯ ಅಧ್ಯಯನಕ್ಕೆ ಏಳು ವರ್ಷಗಳ ಕನಿಷ್ಠ ಮಿತಿ ತಗಲಬಹುದೆಂದು ಡಾ|| ಭಂಡಾರಕರರು ನುಡಿದಿದ್ದರು. ಆದರೆ ಅಷ್ಟೇ ಅವಧಿಯಲ್ಲಿ ಸಂಸ್ಕೃತವಲ್ಲದೆ ಇಂಗ್ಲಿಷ್, ಸಿಂಹಳೀ ಭಾಷೆಗಳನ್ನು ಸಹ ರೂಢಿಸಿಕೊಂಡರು. ಪಾಲಿಯಲ್ಲಿ ಅದ್ವಿತೀಯ ಪಾಂಡಿತ್ಯ ಗಳಿಸಿದರು. ಅಚ್ಚರಿಗೊಂಡ ಡಾ|| ಭಂಡಾರಕರರು ಅವರ ಗೌರವಾರ್ಥ ಸ್ನೇಹಕೂಟ ವೊಂದನ್ನು ಏರ್ಪಡಿಸಿ ಪುಣೆಯಲ್ಲಿ ಸನ್ಮಾನಿಸಿದರಂತೆ! ಅದು ಗುಣಗ್ರಾಹಕತೆಯ ಒಂದು ನಿದರ್ಶನ.

ಕಲಕತ್ತೆಯ ನ್ಯಾಷನಲ್ ಕಾಲೇಜಿನಲ್ಲಿ ಪಾಲಿಯ ಉಪನ್ಯಾಸಕರಾಗಿ, ಬಳಿಕ ವಿಶ್ವವಿದ್ಯಾಲಯದಲ್ಲಿ ರೀಡರ್ ಆಗಿದ್ದಾಗ ಅರವಿಂದ ಘೋಷರ ನಿಕಟ ಸ್ನೇಹ ಅವರಿಗೆ ಲಭಿಸಿತು. ಹಲವಾರು ಪ್ರಾಚ್ಯ ಹಾಗೂ ಸಂಶೋಧನೆಯ ನಿಯತಕಾಲಿಕಗಳಲ್ಲಿ ಅವರ ಲೇಖನಗಳು ಪ್ರಕಟ ವಾಗುತ್ತಿದ್ದು, ಅವು ಅನೇಕ ವಿದೇಶಿ ವಿದ್ವಾಂಸರ ಗಮನ ಸೆಳೆದವು. ಅವರ ಪ್ರಸಿದ್ಧ ಗ್ರಂಥಗಳಾದ 'ಬೌದ್ಧ ಧರ್ಮ ಹಾಗೂ ಸಂಘ' 'ವಿಶುದ್ಧ ಮಾರ್ಗ' (ವಿಸುದ್ಧಿ ಮಗ್ಗ) ಹಾಗೂ 'ಬೋಧಿ ಚರ್ಯಾ'ಗಳು ಇದೇ ಅವಧಿಯಲ್ಲಿ (೧೯೦೭-೧೯೧೦) ಬೆಳಕು ಕಂಡವು. ಸಯಾಜಿರಾವ್ ಮಹಾರಾಜರ ಆಹ್ವಾನಕ್ಕೆ ಮಣಿದು ಬಡೋದೆಗೆ ಬಂದ ಧರ್ಮಾನಂದರು ಗೌರವ ವೇತನ ಪಡೆದು ಪುಣೆ - ಮುಂಬೈಗಳಲ್ಲಿ ವ್ಯಾಸಂಗ ಕೈಕೊಂಡರು. ಹಾರ್ವರ್ಡ್ ವಿಶ್ವವಿದ್ಯಾಲಯದಲ್ಲಿ ಸಂಸ್ಕೃತ ಪ್ರಾಧ್ಯಾಪಕರಾಗಿದ್ದ ಜೇಮ್ಸ್ ವುಡ್ ಅವರು 'ವಿಸುದ್ಧಿ ಮಗ್ಗ'ದ ಪರಿಷ್ಕರಣ ಕಾರ್ಯದಲ್ಲಿ ತೊಡಗಿದ್ದುದರಿಂದ ಧರ್ಮಾನಂದರ ಸಹಾಯ ಯಾಚಿಸಿ ಅಮೆರಿಕೆಗೆ ಆಮಂತ್ರಿಸಿದರು. ಅಮೆರಿಕೆಗೆ ನಾಲ್ಕುಬಾರಿ ಹೋಗಿಬಂದು ಧರ್ಮಾನಂದರು ಆ ಕೆಲಸ ಪೂರ್ತಿಗೊಳಿಸಿದರು. ಮೊದಲ ಯಾತ್ರೆಯಲ್ಲಿ ಸ್ವಯಂಸ್ಫೂರ್ತಿಯಿಂದ ರಷಿಯನ್ ಭಾಷೆಯನ್ನು ಕರಗತ ಮಾಡಿಕೊಂಡರು.

ಪಾಲಿ ಭಾಷೆಯ ಮಹತ್ವ ಮನಗಂಡ ಮುಂಬೈ ವಿಶ್ವವಿದ್ಯಾಲಯ ಅದರ ಅಧ್ಯಯನಕ್ಕೆ ಅವಕಾಶ ಕಲ್ಪಿಸಿತು. ಧರ್ಮಾನಂದರು ಆ ಭಾಷಾವಿಭಾಗದ ಮುಖ್ಯಸ್ಥರಾಗಿ ಹಲವಾರು ತರುಣ ಸಂಶೋಧಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶನವಿತ್ತರು. ಕಲಕತ್ತೆ, ಬಡೋದಾ, ಅಹ್ಮದಾಬಾದ, ಪುಣೆ, ವಾರಣಾಸಿ, ಮುಂತಾದೆಡೆಗಳಿಗೆ ಹೋಗಿಬಂದು ಪಾಲಿ ವಾಙ್ಮಯ ಪ್ರಚಾರಮಾಡಿದರು. ೧೯೨೯ರಲ್ಲಿ ಸೋವಿಯತ್ ರಷ್ಯಾದ ಪಾಲಿ ವಿದ್ವಾಂಸ ಪ್ರೊ. ಶೆರ್‌ಬೆಟ್‌ಸ್ಕಿ ಅವರ ಆಮಂತ್ರಣದ ಮೇರೆಗೆ ಸಂದರ್ಶಕ ಪ್ರಾಧ್ಯಾಪಕರಾಗಿ ಆ ದೇಶಕ್ಕೂ ಹೋಗಿ ಬಂದರು. ಅಲ್ಲಿ ಸಾಮ್ಯವಾದ ಯಶಸ್ವಿಯಾಗಿ ಬೇರೂರು ತ್ತಿದ್ದುದನ್ನು ಪ್ರತ್ಯಕ್ಷ ಕಂಡುಬಂದರು. ಲೆನಿನ್‌ಗ್ರಾಡ್ ವಿಶ್ವವಿದ್ಯಾಲಯದಲ್ಲಿ ಪ್ರಾಚೀನ ಭಾರತ ಚರಿತ್ರೆಯ ಬೋಧನೆ ಅವರ ವಿಷಯವಾಗಿತ್ತು. ಅಮೆರಿಕೆಯಲ್ಲಿ ಹಿಂದೆ ಕಲಿತ ರಷ್ಯನ್ ಭಾಷೆಯು ಪೂರ್ಣ ಉಪಯೋಗಕ್ಕೆ ಬಿತ್ತು.

ಅಮೆರಿಕೆಯ ಮೊದಲ ಯಾತ್ರೆಯಲ್ಲೇ ಪಂಜಾಬದ



*ಧರ್ಮಾನಂದ ಕೋಸಂಬಿ*

ಕ್ರಾಂತಿಕಾರಿ ಮುಖಂಡ ಲಾಲಾ ಹರದಯಾಲರ ಆತ್ಮೀಯ ಪರಿಚಯ, ಸ್ನೇಹಗಳು ಲಭಿಸಿದ್ದವು. ಸಮಾಜವಾದದೆಡೆ ಒಲಿದಿದ್ದರು. ೧೯೩೦ರಲ್ಲಿ ಭಾರತಕ್ಕೆ ರಷ್ಯದಿಂದ ಮರಳಿದಾಗ ಸ್ವಾತಂತ್ರ್ಯ ಚಳುವಳಿಯ ಗಾಳಿ ಜೋರಾಗಿ ಬೀಸಿತ್ತು. ಧರ್ಮಾನಂದರು ಮಹಾತ್ಮಾ ಗಾಂಧಿ ಸ್ಥಾಪಿಸಿದ ಗುಜರಾಥ ವಿಶ್ವವಿದ್ಯಾಲಯದಲ್ಲಿ ಕೆಲಸಕ್ಕೆ ಒಪ್ಪಿ ಕೊಂಡವರು. ಚಳುವಳಿಯಲ್ಲಿ ಧುಮುಕಿದರು. ಉಪ್ಪಿನ ಸತ್ಯಾಗ್ರಹಕ್ಕೆ ಸ್ವಯಂಸೇವಕರನ್ನು ತರಬೇತುಗೊಳಿಸಿದರು. ಕಾರಾಗೃಹವಾಸವನ್ನು ಅನುಭವಿಸಿದರು.

ಬಿಡುಗಡೆಯ ಬಳಿಕ 'ಹಿಂದೀ ಸಂಸ್ಕೃತಿ ಮತ್ತು ಅಹಿಂಸೆ' ಗ್ರಂಥದಲ್ಲಿ ತಮ್ಮ ಸಂಸ್ಕೃತ ಹಾಗೂ ಪಾಲಿ ಅಧ್ಯಯನದ ಸಾರವನ್ನು, ಭರತಖಂಡದ ಪ್ರಾಚೀನ ಚರಿತ್ರೆಯನ್ನು, ತೆರೆದಿಡುವಲ್ಲಿ ಬಳಸಿದರು. ಅದಾಗಲೇ ಸಂಸಾರದಿಂದ ವಿಮುಕ್ತರಾಗಿದ್ದ ಅವರು ಮುಂಬೈ ಕೂಲಿಕಾರರ ವಸತಿಗಳ ಮಧ್ಯದಲ್ಲಿ ಒಂದು ಆಶ್ರಮ ಕಟ್ಟಿದರು. 'ಬಹುಜನ ವಿಹಾರ'ವೆಂಬ ಈ ಆಶ್ರಮ ವಿದೇಶಗಳಿಂದ ಭಾರತಕ್ಕೆ ಬರುತ್ತಿದ್ದ ಬೌದ್ಧ ಸಾಧುಗಳಿಗೆ ತಂಗುದಾಣವಾಯಿತು.

ಗೋವೆಯಲ್ಲಿ ಜನ್ಮವೆತ್ತಿದ ಅವರಿಗೆ ತಾಯ್ನೆಲದ ಪಾರತಂತ್ರ್ಯ ಪೀಡಿಸುತ್ತಿತ್ತು. 'ನನ್ನ ದೇಹದಾರ್ಢ್ಯ ಚೆನ್ನಾಗಿದ್ದರೆ, ಗೋವೆಯ ವಿಮೋಚನಾ ಚಳುವಳಿಯಲ್ಲಿ ನಾನೂ ಭಾಗವಹಿಸುತ್ತಿದ್ದೆ', ಎಂದು ಗಾಂಧೀಜಿ ನೌಖಾಲಿಯಲ್ಲಿ ಮಾಡುತ್ತಿದ್ದ ಕೆಲಸವನ್ನು ನೋಡಿ ಉದ್ಗರಿಸಿದ ವಿಚಾರವನ್ನು ಅವರ ಸ್ನೇಹಿತ ಕಾಕಾ ಕಾಲೇಲಕರರು ನೆನಪಿಸಿಕೊಂಡಿದ್ದಾರೆ. ಜೈನಧರ್ಮವನ್ನೂ ಆಳವಾಗಿ ಅಭ್ಯಸಿಸಿದ್ದ ಧರ್ಮಾನಂದರು. ೨೩ನೇ ತೀರ್ಥಂಕರ, ಪಾರ್ಶ್ವನಾಥನ 'ಚಾತುರ್ಯಾಮ'ದಲ್ಲಿ

[illegible] ಪುಸ್ತಕವನ್ನೂ ಬರೆದರು. ಜೈನ [illegible] ಪ್ರಭಾವದಿಂದಲೋ ಏನೋ, (ಸಲ್ಲೇಖನದಂತೆ) ಶರೀರ ತ್ಯಾಗದ ವ್ರತವನ್ನು ಕೈಕೊಳ್ಳಲು ನಿರ್ಧರಿಸಿದರು. ಈ ಹಂತದಲ್ಲಿ ಗಾಂಧೀಜಿ ಅವರನ್ನು ತಡೆದರು. ಬೌದ್ಧ ಕೃತಿಗಳ ಅನುವಾದದ ಕೆಲಸವನ್ನು ಮುಂದುವರಿಸಿಕೊಂಡು ಹೋದರೂ, ವಿರಕ್ತಿಯೂ ಹೆಚ್ಚುತ್ತ ಹೋಯಿತು. ಮತ್ತೆ ಪ್ರಾಯೋಪವೇಶವನ್ನು ಕೈಕೊಂಡು ೧೯೪೭ರ ಜೂನ್ ೫ರಂದು ಸೇವಾಗ್ರಾಮದಲ್ಲಿ ದೇಹವನ್ನು ತ್ಯಜಿಸಿದರು. ದಿಲ್ಲಿಯಲ್ಲಿದ್ದ ಗಾಂಧೀಜಿಗೆ ಈ ಸಮಾಚಾರ ತಲುಪಿತು. ಅಂದಿನ ಸಾಯಂಕಾಲದ ಪ್ರಾರ್ಥನಾ ಸಭೆಯಲ್ಲಿ ಅವರು ಧರ್ಮಾನಂದ ಕೋಸಂಬಿ ಅವರಿಗೆ ಶ್ರದ್ಧಾಂಜಲಿ ಸಲ್ಲಿಸಿದರು. ''ರಾಜಕಾರಣದಲ್ಲಿ ಮೆರೆಯುತ್ತ ತಮ್ಮ ಕೆಲಸದ ಕುರಿತು ಪ್ರಚಾರ ಮಾಡುವವರನ್ನು ನಾವು ವಿಶೇಷವಾಗಿ ಆದರಿಸುತ್ತೇವೆ. ಸದ್ದಿಲ್ಲದೆ ದುಡಿಯು ವವರನ್ನು ಗುರುತಿಸುವುದಿಲ್ಲ. ಧರ್ಮಾನಂದರು ಸದ್ದಿಲ್ಲದೆ ದುಡಿಯುವ ಅಪರೂಪದ ವ್ಯಕ್ತಿಯಾಗಿದ್ದರು'' ಎಂದು ಬಾಪೂಜಿ ಉದ್ಗರಿಸಿದ್ದರು.

ಧರ್ಮಾನಂದ ಸ್ಮಾರಕವೊಂದನ್ನು ಯೋಜಿಸಲು ಗಾಂಧೀಜಿ ಸಲಹೆ ಇತ್ತಿದ್ದರು. ಬೌದ್ಧ ಧರ್ಮ ಹಾಗೂ ಸಾಹಿತ್ಯದ ವಿಶೇಷ ಅಧ್ಯಯನ ಹಾಗೂ ಧರ್ಮಾನಂದರ ಎಲ್ಲ ಅಪ್ರಕಟಿತ ಗ್ರಂಥಗಳ ಪ್ರಕಾಶನ ಹಾಗೂ ಸುಲಭ ಬೆಲೆಯಲ್ಲಿ ಲಭ್ಯತೆ ಸಾಧಿಸಬೇಕೆಂದು ಗಾಂಧೀಜಿಯವರ ಮನೀಷೆಯಾಗಿತ್ತು. ನಂತರದ ಸ್ವಾತಂತ್ರ್ಯ ಪ್ರಾಪ್ತಿಯ ದಿನಗಳು, ಹಾಗೂ ದೇಶ ಎದುರಿಸಬೇಕಾಗಿ ಬಂದ ಹಿಂಸಾಚಾರ - ರಕ್ತಪಾತಗಳ ಘೋರ ಪರಿಣಾಮಗಳನ್ನು ಕಾಣುವಂತಾಗಿದ್ದರೆ, ಬುದ್ಧನ ತತ್ವಗಳಿಗೆ ಜೀವನವನ್ನು ಮೀಸಲಿಟ್ಟ ಆಚಾರ್ಯ ಕೋಸಂಬಿ ಹೇಗೆ ಪ್ರತಿಕ್ರಿಯಿಸುತ್ತಿದ್ದರೋ ! ಅವರಷ್ಟೇ ಪ್ರಬುದ್ಧ ಪಾಂಡಿತ್ಯಕ್ಕೆ ಹೆಸರಾದ ಡಿ. ಡಿ. ಕೋಸಂಬಿ ಎಂಬ ಗಣಿತಶಾಸ್ತ್ರಜ್ಞ, ಇತಿಹಾಸಕಾರ, ಸಂಸ್ಕೃತ-ಪಾಲಿ ವಿದ್ವಾಂಸರು ಧರ್ಮಾನಂದರ ಮಗ.

*ಕೊಂಕಣಿ, ಮರಾಠಿ, ಗುಜರಾತಿ, ಸಿಂಹಳೀ, ಹಿಂದಿ, ಪಾಲಿ, ಸಂಸ್ಕೃತ, ರಷ್ಯನ್, ಇಂಗ್ಲಿಷ್ ಭಾಷೆಗಳಲ್ಲಿ ಪ್ರಭುತ್ವವಿದ್ದ ಕೋಸಂಬಿಯವರ ಹೆಚ್ಚಿನ ಗ್ರಂಥಗಳು ಮರಾಠಿ ಭಾಷೆಯಲ್ಲಿವೆ. ಕೆಲವು ಹಿಂದಿ ಹಾಗೂ ಗುಜರಾತಿಯಲ್ಲಿವೆ. ಇತರ ಭಾರತೀಯ ಭಾಷೆಗಳಲ್ಲಿ ಕೆಲವು ಅನುವಾದಿಸಲ್ಪಟ್ಟಿವೆ.*

***ಮುಖ್ಯ ಕೃತಿಗಳು:***

*ಭಗವಾನ್ ಬುದ್ಧ (ಕೇಂದ್ರ ಸಾಹಿತ್ಯ ಅಕಾಡೆಮಿಯಿಂದ ಎಲ್ಲ ಭಾರತೀಯ ಭಾಷೆಗಳಲ್ಲಿ ಅನುವಾದಿತ).*

*ಬುದ್ಧ ಲೀಲಾ ಸಾರಸಂಗ್ರಹ. ಬೌದ್ಧ ಸಂಘಾದ ಪರಿಚಯ. ಬೋಧಿ ಸತ್ವ (ನಾಟಕ) ನಿವೇದನ (ಆತ್ಮ ಚರಿತ್ರೆ). ಹಿಂದೀ ಸಂಸ್ಕೃತಿ ಮತ್ತು ಅಹಿಂಸೆ. ಪಾರ್ಶ್ವನಾಥರ ಚಾತುರ್ಯಾಮ ಧರ್ಮ [illegible]*

([illegible])

# ಭಾರತದ ಸ್ವಾವಲಂಬನೆಗೆ ವಿಜ್ಞಾನ ಮತ್ತು ತಂತ್ರಜ್ಞಾನದ ಮಾರ್ಗಗಳು

ಡಾ॥ ಎಚ್. ಎಸ್. ನಿರಂಜನಾರಾಧ್ಯ

ವಿಜ್ಞಾನ ಮತ್ತು ತಂತ್ರಜ್ಞಾನಗಳು ಕೇವಲ ಜ್ಞಾನ ಸಂಪಾದನೆಗಾಗಿ ಇರುವ ವಿಷಯಗಳಲ್ಲ. ಇವು ಸಮಾಜದ ಪ್ರಗತಿ ಸಾಧಿಸುವ ಹಾಗೂ ಮಾನವನ ಕಲ್ಯಾಣ ಸಾಧಿಸುವ ಪ್ರಬಲ ಅಸ್ತ್ರಗಳು. ಯಾವ ರಾಷ್ಟ್ರಗಳು ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ದೇಶದ ಪ್ರಗತಿಗೆ ಸಮರ್ಪಕವಾಗಿ ಅಳವಡಿಸಿದ್ದಾವೋ, ಅವು ಪ್ರಗತಿ ಸಾಧಿಸಿವೆ, ಸಮೃದ್ಧಿ ಹಾಗೂ ಸ್ವಾವಲಂಬನೆ ಹೊಂದಿವೆ. ವಿಜ್ಞಾನದ ಜ್ಞಾನ ಸಂಪತ್ತು, ವೈಜ್ಞಾನಿಕ ವಿಧಾನಗಳು ಹಾಗೂ ತಂತ್ರಜ್ಞಾನದ ಅಳವಡಿಕೆಯಿಂದ ಪ್ರತಿಯೊಬ್ಬ ನಾಗರಿಕನಿಗೂ ಅಗತ್ಯವಾದ ವಸ್ತು ಹಾಗೂ ಸೇವೆಗಳನ್ನು ದೊರಕಿಸಲು ಸಾಧ್ಯವಿದೆ. ಮಾನವ ಸಂಪನ್ಮೂಲವನ್ನು ದೇಶದ ಆಸ್ತಿಯನ್ನಾಗಿ ಪರಿವರ್ತಿಸಲು, ಜನರಿಗೆ ವಿಜ್ಞಾನ ಮತ್ತು ತಂತ್ರಜ್ಞಾನದ ಕೌಶಲಗಳನ್ನು ಕಲಿಸಬೇಕು. ಹಾಗೂ ಪ್ರಾಕೃತಿಕ ಸಂಪನ್ಮೂಲಗಳನ್ನು ಮನುಷ್ಯನ ಅಗತ್ಯವಾದ ವಸ್ತು ಹಾಗೂ ಸೇವೆಗಳನ್ನಾಗಿ ಪರಿವರ್ತಿಸಲು ತಾಂತ್ರಿಕ ಜ್ಞಾನ ನೀಡಬೇಕು. ಭಾರತದಲ್ಲಿ ಈ ಪ್ರಯತ್ನ ಹೇಗೆ ಸಾಗಿದೆ? ಅದರ ಸಾಫಲ್ಯ ವೈಫಲ್ಯಗಳೇನು ? ವಾಸ್ತವವಾಗಿ ನಮ್ಮ ಮಾರ್ಗ ಸಮರ್ಪಕವೇ ?

## ಸ್ವಾತಂತ್ರ್ಯ ಪೂರ್ವದಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನ

ಆಧುನಿಕ ವಿಜ್ಞಾನವು ಸುಮಾರು ೫೦೦ ವರ್ಷಗಳ ಹಿಂದೆ ಯುರೋಪಿನ ಪುನರುತ್ಥಾನದ ಸಂದರ್ಭದಲ್ಲಿ ಉಗಮವಾಯಿತು. ಆ ವೇಳೆಗೆ ಭಾರತದಲ್ಲಿ ವಿಜ್ಞಾನವು ಯುರೋಪ್ ದೇಶಗಳನ್ನು ಮೀರಿಸುವಷ್ಟೇ ಪ್ರಗತಿ ಸಾಧಿಸಿತ್ತು. ಆರೋಗ್ಯ ಔಷಧ ಶಾಸ್ತ್ರ, ಲೋಹಶಾಸ್ತ್ರ, ಗಣಿತ ಮುಂತಾದ ವಿಜ್ಞಾನ ಶಾಖೆಗಳಲ್ಲಿ ಭಾರತದ ಸಾಧನೆ ಅದ್ವಿತೀಯವಾಗಿತ್ತು. ದುರದೃಷ್ಟದ ಸಂಗತಿ ಎಂದರೆ ಭಾರತವು ಅನಂತರದ ಮೂರು ಶತಮಾನಗಳ ಕಾಲ ಗಣಿತ ಹಾಗೂ ಮೂಲ ವಿಜ್ಞಾನಗಳಲ್ಲಿ ಸಾಧಿಸಿದ್ದ ಪ್ರಗತಿಯನ್ನು ಸಮಾಜದ ಪ್ರಗತಿಗೆ ಬಳಸಿಕೊಳ್ಳಲಿಲ್ಲ. ಹಾಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನದಲ್ಲಿ ಭಾರತ ಹಿಂದೆ ಬಿತ್ತು. ಯುರೋಪು ದಾಪುಗಾಲಿನಲ್ಲಿ ಮುಂದುವರೆಯಿತು. ೧೯ನೆಯ ಶತಮಾನದ ಆರಂಭದ ಹೊತ್ತಿಗೆ ಯುರೋಪಿನಲ್ಲಿ ಕೈಗಾರಿಕಾ ಕ್ರಾಂತಿ ಉಚ್ಛ್ರಾಯ ಸ್ಥಿತಿ ತಲುಪಿತು. ಭಾರತ, ಏಷ್ಯಾ ಹಾಗೂ ಆಫ್ರಿಕಾದ ಹಲವು ದೇಶಗಳು ಯುರೋಪಿನ ವಸಾಹತುಶಾಹಿಗಳ ದಮನಕ್ಕೆ ಒಳಗಾದವು. ಬ್ರಿಟಿಷರ ಆಡಳಿತಕ್ಕೆ ಒಳಪಟ್ಟ ಭಾರತ ಹೆಚ್ಚಿನ ಪ್ರಗತಿ ಸಾಧಿಸಲಾಗಲಿಲ್ಲ. ಬ್ರಿಟಿಷರು ತಮ್ಮ ಆಳ್ವಿಕೆ ಮುಂದುವರೆಯುವುದಕ್ಕೆ ಅನುಕೂಲಕರವಾದ ಹಾಗೂ ಇಲ್ಲಿಂದ ಸಂಪನ್ಮೂಲಗಳನ್ನು ಲೂಟಿ ಮಾಡಲು ಅಗತ್ಯವಾದ ವಿಜ್ಞಾನ, ತಂತ್ರಜ್ಞಾನ ಮತ್ತು ಶಿಕ್ಷಣವನ್ನು ಜಾರಿಗೊಳಿಸಿದರು. ಅವುಗಳಲ್ಲಿ ಸಾರಿಗೆ ವ್ಯವಸ್ಥೆ, ಸಂಪರ್ಕ, ಸರ್ವೇ ಕಾರ್ಯಕ್ರಮ, ಗಣಿ ಉದ್ಯಮ, ಹವಾಮಾನದ ಅಧ್ಯಯನ ಪ್ರಮುಖವಾದವು. ಯುರೋಪಿನಲ್ಲಿ ಉತ್ಪಾದನೆಯಾದ ವಸ್ತುಗಳಿಗೆ ಭಾರತ ಒಂದು ಮಾರುಕಟ್ಟೆಯಾಯಿತು. ಇದರಿಂದ ಬ್ರಿಟಿಷರು ಮತ್ತಷ್ಟು ಶ್ರೀಮಂತರಾಗಲು ಸಾಧ್ಯವಾಯಿತು.

ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಭಾರತೀಯರ ಪಾರಂಪರಿಕ ಜ್ಞಾನ ಹಾಗೂ ಸಂಪ್ರದಾಯಗಳನ್ನು ಕಡೆಗಣಿಸಲಾಗಿದೆ. ಬ್ರಿಟಿಷರು ಭಾರತೀಯರ ಎಲ್ಲ ರೀತಿಯ ಸೃಜನಶೀಲ ಚಟುವಟಿಕೆಗಳಿಗೆ ತಣ್ಣೀರು ಎರಚಿದರು. ಇಲ್ಲಿಂದ ಸಸ್ಯ, ಪ್ರಾಣಿ, ಖನಿಜ ಸಂಪನ್ಮೂಲಗಳನ್ನು ಯಾವುದೇ ಸಮತೋಲನವನ್ನು ಪರಿಗಣಿಸದೆ ಲೂಟಿ ಮಾಡಲಾಯಿತು. ಅವರ ಕಾರ್ಯಗಳಿಗೆ ಅಗತ್ಯವಾದ ಇಂಗ್ಲಿಷ್ ಶಿಕ್ಷಣ ಹಾಗೂ ವಿಜ್ಞಾನದ ಜ್ಞಾನವನ್ನು ಕೆಲವು ಭಾರತೀಯರಿಗೆ ನೀಡಿದರು. ಜ್ಞಾನ-ವಿಜ್ಞಾನದ ಮಹತ್ವ ಅರಿತ ಶಿಕ್ಷಿತ ಭಾರತೀಯರು ಇಲ್ಲಿ ವಿಜ್ಞಾನವನ್ನು ಬೆಳೆಸಲು ಪ್ರಯತ್ನಿಸಿದ್ದು ಪ್ರಶಂಸನೀಯ. ಕಲ್ಕತ್ತದಲ್ಲಿ ವಿಜ್ಞಾನದ ಬೆಳವಣಿಗೆಗಾಗಿ ಒಂದು ಸಂಘ ನಿರ್ಮಾಣವಾಯಿತು. ಬೆಂಗಳೂರಿನಲ್ಲಿ ಭಾರತೀಯ ವಿಜ್ಞಾನ ಅಕಾಡೆಮಿ, ಟಾಟಾ ವಿಜ್ಞಾನ ಮಂದಿರ, ವಾರಣಾಸಿಯಲ್ಲಿ ಬನಾರಸ್ ಹಿಂದೂ ವಿಶ್ವವಿದ್ಯಾಲಯ ಹಾಗೂ ಕಲ್ಕತ್ತದಲ್ಲಿ ಭಾರತೀಯ ಅಂಕಿ ಅಂಶಗಳ ಸಂಶೋಧನಾಲಯ ಮುಂತಾದವು ಸ್ಥಾಪನೆಯಾದವು. ಇವೆಲ್ಲವೂ ವಿಜ್ಞಾನ ಶಿಕ್ಷಣಕ್ಕೆ ಹಾಗೂ ಸಂಶೋಧನೆಗೆ ಪ್ರೋತ್ಸಾಹ ನೀಡಲಾರಂಭಿಸಿದವು. ಹಾಗಾಗಿ ಸ್ವಾತಂತ್ರ್ಯ ಪೂರ್ವದಲ್ಲಿಯೇ ಪ್ರತಿಭಾವಂತ ವಿಜ್ಞಾನಿಗಳಾದ ರಾಮಾನುಜನ್, ಪಿ.ಸಿ.ರೇ, ಜೆ.ಸಿ. ಬೋಸ್, ಎಮ್. ಎನ್. ಸಹಾ, ಸತ್ಯೇಂದ್ರನಾಥ ಬೋಸ್ ಮತ್ತು ಸಿ.ವಿ. ರಾಮನ್‌ರವರು ವಿಜ್ಞಾನಕ್ಕೆ ಪ್ರಮುಖ ಕೊಡುಗೆ ನೀಡಿದರು. ಆದರೆ ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಮಾನವರ ಕಲ್ಯಾಣಕ್ಕೆ ಹಾಗೂ ಆರ್ಥಿಕ ಪ್ರಗತಿಗೆ ವಿಜ್ಞಾನ ಮತ್ತು ತಂತ್ರಜ್ಞಾನ ಅಳವಡಿಕೆಯಲ್ಲಿ ಭಾರತೀಯರು ಭಾಗಿಯಾಗುವುದಕ್ಕೆ ಮತ್ತು ಅದರ ಪ್ರಯೋಜನ ಪಡೆಯುವುದಕ್ಕೆ ಸಾಧ್ಯವಾಗಲಿಲ್ಲ.

## ಕಳೆದ ೫೦ ವರ್ಷಗಳಲ್ಲಿ

ಸ್ವಾತಂತ್ರ್ಯ ಪಡೆದ ನಂತರ ನೆಹರೂರವರ ನೇತೃತ್ವದಲ್ಲಿ ರಾಷ್ಟ್ರದ ಪ್ರಗತಿಗಾಗಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಬಳಸುವ ಪ್ರಯತ್ನ ಮಾಡಲಾಯಿತು. ಸೋವಿಯತ್ ಒಕ್ಕೂಟದ ಪ್ರಗತಿಯಿಂದ ಪ್ರಭಾವಿತರಾಗಿದ್ದ ನೆಹರೂರವರು ವಿಜ್ಞಾನದ ಪಕ್ಷಪಾತಿ ಹಾಗೂ ವೈಜ್ಞಾನಿಕ ಮನೋಭಾವದ ಪ್ರಚಾರಕರಾಗಿದ್ದರು. ಭಾರತದ ಸಮಗ್ರ ಅಭಿವೃದ್ಧಿಗೆ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಪ್ರಬಲ ಅಸ್ತ್ರವನ್ನಾಗಿ ಬಳಸಲು ೧೯೫೮ರಲ್ಲಿ ಸರ್ಕಾರವು ವಿಜ್ಞಾನ ನೀತಿ ಸಂಹಿತೆಯನ್ನು ರೂಪಿಸಿತು. ಭಾರತವು ಸುಖೀ ರಾಜ್ಯವಾಗಲು ವಿಜ್ಞಾನದ ಎಲ್ಲ ಸಂಪನ್ಮೂಲಗಳನ್ನು ಗರಿಷ್ಠ ಪ್ರಮಾಣದಲ್ಲಿ ಬಳಸುವ ಅಗತ್ಯವನ್ನು ನೀತಿ ಸಂಹಿತೆ ಒತ್ತಿ ಹೇಳಿದೆ. ಅದರ ಧ್ಯೇಯೋದ್ದೇಶಗಳು ಹೀಗಿವೆ:

೧. ಶುದ್ಧ ಅನ್ವಯಿಕ ಹಾಗೂ ಶೈಕ್ಷಣಿಕ ವಿಜ್ಞಾನಗಳ ಎಲ್ಲ ಶಾಖೆಗಳನ್ನು ಮತ್ತು ಅವುಗಳಲ್ಲಿನ ಸಂಶೋಧನೆಯನ್ನು ನಿರಂತರವಾಗಿ ಬೆಳೆಸಬೇಕು ಮತ್ತು ಪ್ರೋತ್ಸಾಹಿಸಬೇಕು.
೨. ಅತ್ಯುತ್ತಮವಾದ ಸಂಶೋಧನೆಗಳನ್ನು ಕೈಗೊಳ್ಳಲು ಹಾಗೂ ಪ್ರತಿಭಾವಂತ ವಿಜ್ಞಾನಿಗಳ ಕಾರ್ಯಗಳನ್ನು ಸೂಕ್ತವಾಗಿ ಪ್ರೋತ್ಸಾಹಿಸುವ ಹಾಗೂ ಗೌರವಿಸುವ ಕೆಲಸಗಳಾಗಬೇಕು. ಏಕೆಂದರೆ ಈ ವಿಜ್ಞಾನಿಗಳು ಮತ್ತು ಇವರ ಸಂಶೋಧನೆ ನಮ್ಮ ದೇಶದ ಅಮೂಲ್ಯ ಆಸ್ತಿ.
೩. ವಿಜ್ಞಾನ, ಶಿಕ್ಷಣ, ಕೃಷಿ, ಕೈಗಾರಿಕೆ ಮತ್ತು ರಕ್ಷಣಾ ಕ್ಷೇತ್ರಗಳಲ್ಲಿ ನಮ್ಮ ದೇಶಕ್ಕೆ ಅಗತ್ಯವಿರುವಷ್ಟು ವಿಜ್ಞಾನಿ ಹಾಗೂ ತಂತ್ರಜ್ಞಾನಿಗಳನ್ನು ಸಿದ್ಧ ಮಾಡಲು ಸೂಕ್ತ ಯೋಜನೆಯನ್ನು ಆದಷ್ಟು ಶೀಘ್ರವಾಗಿ ಕೈಗೊಳ್ಳಬೇಕು.
೪. ಪ್ರತಿಭಾವಂತರಿಗೆ ವಿಜ್ಞಾನ ಕ್ಷೇತ್ರದಲ್ಲಿ ಸೇವೆ ಮಾಡಲು ಯುಕ್ತ ಅವಕಾಶ ನೀಡಿ ಪ್ರೋತ್ಸಾಹಿಸಬೇಕು.
೫. ಶೈಕ್ಷಣಿಕ ಸ್ವಾತಂತ್ರ್ಯ ನೀಡಿ ವ್ಯಕ್ತಿಗಳು ವಿಜ್ಞಾನ- ತಂತ್ರಜ್ಞಾನದ ಪಾಂಡಿತ್ಯ ಪಡೆಯುವ ಹಾಗೂ ಇತರರಿಗೆ ಜ್ಞಾನ ನೀಡುವ ಚಟುವಟಿಕೆಗಳಿಗೆ ಬೆಂಬಲ ನೀಡಬೇಕು.
೬. ಒಟ್ಟಿನಲ್ಲಿ ವೈಜ್ಞಾನಿಕ ಮಾಹಿತಿಯ ಸಂಗ್ರಹ ಮತ್ತು ಅನ್ವಯಿಕೆಯಿಂದ ಉಂಟಾಗುವ ಎಲ್ಲ ಪ್ರಯೋಜನಗಳು ಈ ದೇಶದ ಪ್ರಜೆಗಳಿಗೆ ದೊರಕುವಂತಾಗಬೇಕು.

ವಿಜ್ಞಾನ ಮತ್ತು ತಂತ್ರಜ್ಞಾನಗಳ ಬೆಳವಣಿಗೆಗೆ ಪ್ರೋತ್ಸಾಹ ನೀಡುತ್ತ, ಭಾರತ ಸ್ವಾವಲಂಬನೆ ಸಾಧಿಸುವ ಕನಸು ಹೊತ್ತಿತ್ತು. ಆದ್ದರಿಂದ ಭಾರತದ ಪ್ರಗತಿಯ ಎಲ್ಲ ಹಂತಗಳಲ್ಲಿ ವಿಜ್ಞಾನ ಮತ್ತು ತಂತ್ರಜ್ಞಾನವನ್ನು ಅಳವಡಿಸಿಕೊಳ್ಳುವ ಪ್ರಯತ್ನ ಮಾಡಲಾಯಿತು. ಪ್ರಖ್ಯಾತ ವಿಜ್ಞಾನಿಗಳಾದ ಎಸ್.ಎಸ್.ಬಟ್ನಾಗರ್, ಕೆ. ಎಸ್. ಕೃಷ್ಣನ್, ಎಚ್. ಜೆ. ಭಾಭಾ ಮತ್ತು ವಿಕ್ರಂ ಸಾರಾಭಾಯಿರವರಿಗೆ ಎಲ್ಲ ರೀತಿಯ [illegible] ವಿಜ್ಞಾನ ವೃಕ್ಷದ ವಿವಿಧ ಕವಲುಗಳು ಬೆಳೆಯಲು ಅವಕಾಶ ನೀಡಲಾಯಿತು. [illegible] ಮತ್ತು ಪರಮಾಣು ಶಕ್ತಿ ಆಯೋಗಗಳನ್ನು ರಚಿಸಲಾಯಿತು. ಸುಮಾರು [illegible] ರಾಷ್ಟ್ರೀಯ ಪ್ರಯೋಗಾಲಯಗಳನ್ನು ಆರಂಭಿಸಲು ವೈಜ್ಞಾನಿಕ ಮತ್ತು ಕೈಗಾರಿಕಾ ಸಂಶೋಧನಾ ಸಮಿತಿ (CSIR)ಯನ್ನು ಸ್ಥಾಪಿಸಲಾಯಿತು. ಅಲ್ಲದೆ ಕೃಷಿ, ವೈದ್ಯಕೀಯ ಸಂಶೋಧನೆಗಳಿಗಾಗಿ ಪ್ರತ್ಯೇಕ ಮಂಡಲಿಗಳು ರಚನೆಯಾದವು (ICAR, ICMR,). ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಬೆಂಬಲದಿಂದ ಹಲವಾರು ಉನ್ನತ ವಿಶ್ವವಿದ್ಯಾಲಯಗಳನ್ನು ತೆರೆಯಲಾಯಿತು. ಉನ್ನತ ಅಧ್ಯಯನ ಹಾಗೂ ಸಂಶೋಧನೆಗಾಗಿ [illegible] (ಭಾರತೀಯ [illegible] ಸಂಸ್ಥೆಗಳು)ಗಳನ್ನು, ಟಾಟಾ ಮೂಲಭೂತ ಸಂಶೋಧನಾ ಸಂಸ್ಥೆ (TIFR), [illegible] ಸಂಶೋಧನಾ ಪ್ರಯೋಗಾಲಯ (PRL), ಸಹಾ ಸಂಸ್ಥೆ, [illegible] ಸಂಸ್ಥೆ, [illegible] ಸಂಸ್ಥೆ, [illegible] ವಿಜ್ಞಾನ ಸಂಸ್ಥೆ, [illegible] ಭಾರತೀಯ [illegible]

ಬಂದವು. ರಾಷ್ಟ್ರದ ಬಹುತೇಕ ಸೇವಾ ವಿಭಾಗಗಳನ್ನು, ಪ್ರಮುಖವಾಗಿ ಸಾರಿಗೆ, ಸಂಪರ್ಕ, ಶಕ್ತಿ, ತೈಲ ಮತ್ತು ಬ್ಯಾಂಕಿಂಗ್ ಕ್ಷೇತ್ರಗಳನ್ನು ರಾಷ್ಟ್ರೀಕರಿಸಲಾಯಿತು. ಬಾಹ್ಯಾಕಾಶ ಸಂಸ್ಥೆಯ ಸಂಶೋಧನಾ ಯಶಸ್ಸು, ಉಪಗ್ರಹಗಳ ಯಶಸ್ಸು, ಪರಮಾಣು ಶಕ್ತಿ ಸ್ಥಾವರಗಳ ದಕ್ಷಕಾರ್ಯ ಮತ್ತು ಕೃಷಿಯಲ್ಲಿ ಹಸಿರು ಕ್ರಾಂತಿಯ ಯಶಸ್ಸು ಭಾರತೀಯರಿಗೆ ಆತ್ಮವಿಶ್ವಾಸ ಹಾಗೂ ಗೌರವಾದರಗಳನ್ನು ತಂದುಕೊಟ್ಟಿದೆ.

ಸರ್ಕಾರದ ವಿವಿಧ ಇಲಾಖೆಗಳಾದ ವಿಜ್ಞಾನ ಮತ್ತು ತಂತ್ರಜ್ಞಾನ, ಪರಮಾಣು ಶಕ್ತಿ, ಬಾಹ್ಯಾಕಾಶ, ಎಲೆಕ್ಟ್ರಾನಿಕ್ಸ್, ಸಾಗರ ಅಭಿವೃದ್ಧಿ ಹಾಗೂ ಜೀವ ತಂತ್ರಜ್ಞಾನ ವಿಭಾಗಗಳು ತಮ್ಮ ಕ್ಷೇತ್ರದ ಸಂಶೋಧನೆಗೆ ವಿಶ್ವವಿದ್ಯಾಲಯಗಳಿಗೆ ಮತ್ತು ಸಂಶೋಧನಾ ಸಂಸ್ಥೆಗಳಿಗೆ ಅನುದಾನ, ಪ್ರೋತ್ಸಾಹ ನೀಡುತ್ತವೆ. ವಿಜ್ಞಾನಕ್ಕೆ ಮೀಸಲಾದ ಮೂರು ಅಕಾಡೆಮಿಗಳಿವೆ. ಅಲ್ಲದೆ ರಾಷ್ಟ್ರೀಯ ವಿಜ್ಞಾನ ಕಾಂಗ್ರೆಸ್‌ಗೆ ಹಾಗೂ ವಿಜ್ಞಾನ-ತಂತ್ರಜ್ಞಾನದ ವಿವಿಧ ತಾಂತ್ರಿಕ ಸಮಿತಿಗಳಿಗೆ ಸರ್ಕಾರವು ಪ್ರತ್ಯಕ್ಷ ಹಾಗೂ ಪರೋಕ್ಷ ಬೆಂಬಲಗಳನ್ನು ನೀಡುತ್ತಿದೆ. ರಾಷ್ಟ್ರದ ಪ್ರಗತಿಗಾಗಿ ಪಂಚವಾರ್ಷಿಕ ಯೋಜನೆಗಳನ್ನು ಜಾರಿಗೊಳಿಸಲಾಗುತ್ತಿದೆ. ಬಡತನ ನಿವಾರಣೆ, ಸಾರ್ವತ್ರಿಕ ಶಿಕ್ಷಣ, ಪ್ರಾಥಮಿಕ ಆರೋಗ್ಯ ಹಾಗೂ ಗ್ರಾಮೀಣ ಅಭಿವೃದ್ಧಿಗೆ ಈ ಯೋಜನೆ ಹಮ್ಮಿಕೊಳ್ಳಲಾಗುತ್ತಿದೆ. ವಿಜ್ಞಾನ-ತಂತ್ರಜ್ಞಾನ ಕ್ಷೇತ್ರದಲ್ಲಿ ಉನ್ನತಿ ಹಾಗೂ ಉತ್ಕೃಷ್ಟ ಸಾಧನೆಯನ್ನು ಹೊಂದಲು ಸರ್ಕಾರವು ಮೇಲ್ನೂಚಿಸಿದ ಎಲ್ಲ ಪ್ರಯತ್ನಗಳನ್ನೂ ಮಾಡುತ್ತಿದೆ. ಆದರೆ ಸ್ವಾತಂತ್ರ್ಯ ಬಂದು ಐದು ದಶಕಗಳಾಗಿವೆ. ಈ ಮಧ್ಯೆ ನಾವು ಸಾಧಿಸಿದ್ದೇನು? ಪಡೆದ ಯಶಸ್ಸು ಎಷ್ಟು?

## ಭಾರತದ ಇಂದಿನ ಸ್ಥಿತಿ

ಕಳೆದ ೫೦ ವರ್ಷಗಳಲ್ಲಿ ನಮ್ಮ ಜನಸಂಖ್ಯೆ ಸುಮಾರು ೩೦ ಕೋಟಿಯಿಂದ ೧೦೦ ಕೋಟಿಯಾಗಿದೆ. ಅತ್ಯಂತ ಹೆಚ್ಚಿನ ಜನದಟ್ಟಣೆಯಿರುವ ದೇಶಗಳಲ್ಲಿ ಭಾರತವೂ ಒಂದಾಗಿದೆ. ನಮ್ಮಲ್ಲಿನ ಅರ್ಧದಷ್ಟು ಜನ ಹಾಗೂ ಸ್ತ್ರೀಯರಲ್ಲಿ ಸುಮಾರು ೬೦ರಷ್ಟು ಜನ ಇನ್ನೂ ಅನಕ್ಷರಸ್ಥರಾಗಿದ್ದಾರೆ. ಭಾರತದ ಸುಮಾರು ೧/೩ ಭಾಗದ ಜನರು ಬಡತನದ ರೇಖೆಗಿಂತ ಕೆಳಗೆ ವಾಸಿಸುತ್ತಿದ್ದಾರೆ. ರಾಷ್ಟ್ರದ ಆದಾಯಕ್ಕೆ ಪ್ರಮುಖ ಕೊಡುಗೆ ನೀಡುತ್ತಿರುವ ರೈತರು ಇನ್ನೂ ಕಡುಬಡವರಾಗಿ ಜೀವಿಸುತ್ತಿದ್ದಾರೆ. ಭಾರತೀಯನ ಜೀವಿತಾವಧಿಯೇನೋ ಹೆಚ್ಚಿದೆ. ಆದರೆ ಗರ್ಭಿಣಿ ಸ್ತ್ರೀಯರ ಸಾವಿನ ಪ್ರಮಾಣ ಆತಂಕ ಉಂಟುಮಾಡುವಷ್ಟು ಹೆಚ್ಚಿದೆ. ಕುಡಿಯಲು ಯೋಗ್ಯವಾದ ನೀರನ್ನು ಎಲ್ಲರಿಗೂ ಒದಗಿಸುವುದು ಇನ್ನೂ ಕನಸಿನ ಮಾತಾಗಿದೆ. ಅನಾರೋಗ್ಯಕರ ವಾತಾವರಣ ಹಾಗೂ ಅಪೌಷ್ಟಿಕತೆಯಿಂದ ನಮ್ಮ ದೇಶದ ಯುವಕರ ಪ್ರತಿಭೆ ವಿಕಾಸವಾಗಲು ಪ್ರಮುಖ ಅಡ್ಡಿಯಾಗಿದೆ. ಆರ್ಥಿಕ ಪ್ರಗತಿ ಸಾಕಷ್ಟು ಆಗಿದೆ. ಆದರೆ ವಿಜ್ಞಾನ-ತಂತ್ರಜ್ಞಾನದ ಫಲಗಳು ಕೇವಲ ೧೦ರಷ್ಟು ಜನರಿಗೆ ದೊರಕಿ, ಅವರು ನ್ಯಾಯವಾಗಿಯೋ, ಅನ್ಯಾಯದ ಮಾರ್ಗದಲ್ಲಿಯೋ ಹೆಚ್ಚು ಶ್ರೀಮಂತರಾಗಿದ್ದಾರೆ. ಬಡವ ಬಲ್ಲಿದರ ನಡುವಿನ ಕಂದರ ಅತಿ ಹೆಚ್ಚಾಗಿದೆ. ೧೯೯೯ರಲ್ಲಿ ನಡೆಸಲಾದ ಮಾನವ ಅಭಿವೃದ್ಧಿ ಶ್ರೇಣಿಯಲ್ಲಿ ೧೭೪ ರಾಷ್ಟ್ರಗಳ ಪೈಕಿ ಭಾರತವು ೧೩೨ನೇ ಸ್ಥಾನವನ್ನು ಪಡೆದಿದೆ. ಸರಾಸರಿ ವಾರ್ಷಿಕ ತಲಾ ಆದಾಯವು ಅಮೆರಿಕದ ಡಾಲರ್ ಮೌಲ್ಯದಲ್ಲಿ ಹೇಳುವುದಾದರೆ ೩೭೦ ಡಾಲರ್‌ಗಳು. ಆದರೆ ನಮ್ಮ ನೆರೆಯ ದೇಶವಾದ ಚೀನಾದ ವಾರ್ಷಿಕ ತಲಾ ಆದಾಯ ೭೫೦ ಡಾಲರುಗಳು. ಕೈಗಾರಿಕಾ ರಾಷ್ಟ್ರಗಳಲ್ಲಿ ತಲಾ ಆದಾಯ ೨೫೦೦೦ ಡಾಲರುಗಳಿಗಿಂತ ಹೆಚ್ಚು. ನಮ್ಮ ದೇಶದ ರಫ್ತಿನ ಪ್ರಮಾಣ ಕಡಿಮೆ. ಹಾಗಾದಲ್ಲಿ ನಾವು ವಿಜ್ಞಾನ-ತಂತ್ರಜ್ಞಾನಗಳನ್ನು ಬಳಸುವಲ್ಲಿ ಎಲ್ಲಿ ಸೋತೆವು?

## ಹೊಸ ಸವಾಲುಗಳು

ಭಾರತವನ್ನು ಈಗ ಕಾಡುತ್ತಿರುವ ಸಮಸ್ಯೆಗಳ ಜೊತೆಗೆ ೨೧ನೇ ಶತಮಾನದಲ್ಲಿ ಮತ್ತಷ್ಟು ಹೊಸ ಸಮಸ್ಯೆಗಳು, ಸವಾಲುಗಳು ಎದುರಾಗಲಿವೆ. ಅರಣ್ಯನಾಶ, ಮಣ್ಣಿನ ಸವಕಳಿ, ವಾಯು ಮಾಲಿನ್ಯ, ಭೂ ಹಾಗೂ ಜಲಸಂಪನ್ಮೂಲಗಳ ಮಾಲಿನ್ಯ, ಕೃಷಿಗೆ ದೊರಕುವ ಭೂಮಿ ಹಾಗೂ ನೀರಿನ ಕೊರತೆ ಮುಂತಾದವು ಬರುವ ದಿನಗಳಲ್ಲಿ ತೀವ್ರ ಸ್ವರೂಪದ ಸಮಸ್ಯೆಗಳಾಗಲಿವೆ. ಸಾರಿಗೆ ವಾಹನಗಳಿಂದ, ಶಕ್ತಿ ಉತ್ಪಾದನೆ ಹಾಗೂ ಕೈಗಾರಿಕೆಗಳಿಂದ ಉಂಟಾಗುತ್ತಿರುವ ಮಾಲಿನ್ಯದ ಪ್ರಮಾಣ ಮತ್ತಷ್ಟು ಹೆಚ್ಚಲಿದೆ. ಜನಸಂಖ್ಯಾ ಸ್ಫೋಟದಿಂದ ಆಹಾರ ಉತ್ಪಾದನೆ ಬರುವ ೩೦ ವರ್ಷಗಳಲ್ಲಿ ದ್ವಿಗುಣಗೊಳ್ಳಬೇಕಾಗಿದೆ. ಅಲ್ಲದೆ ಭೂಮಿಯನ್ನು ಕಾಡಲಿರುವ ಜಾಗತಿಕ ಉಷ್ಣತೆ, ಹವಾಮಾನದಲ್ಲಿನ ಏರುಪೇರು, ಸಮುದ್ರ ಮಟ್ಟ ಏರುವುದರ ಬಗ್ಗೆ ಹಾಗೂ ಎದುರಾಗುವ ದುಷ್ಪರಿಣಾಮಗಳ ಬಗ್ಗೆ ವಿಜ್ಞಾನಿಗಳು ಎಚ್ಚರಿಸುತ್ತಿದ್ದಾರೆ. ಈ ಸಮಸ್ಯೆ ಸವಾಲುಗಳಿಗೆ ಭಾರತದ ಉತ್ತರವೇನು? ಸಿದ್ಧತೆಗಳು ಯಾವುವು? ಮುನ್ನೆಚ್ಚರಿಕೆಯ ಕ್ರಮಗಳೇನು?

## ಜಾಗತೀಕರಣದ ಪರಿಣಾಮ

ಅಂತರರಾಷ್ಟ್ರೀಯ ಶ್ರೀಮಂತ ರಾಷ್ಟ್ರಗಳು ಬಡರಾಷ್ಟ್ರಗಳ ಮೇಲೆ ಹೇರುತ್ತಿರುವ ಒತ್ತಡಗಳಲ್ಲಿ ವಸ್ತು ಹಾಗೂ ಸೇವೆಗಳ ಜಾಗತೀಕರಣ ಹಾಗೂ ವಿಶ್ವ ವ್ಯಾಪಾರ ಸಂಸ್ಥೆಯ (WTO) ಕಾನೂನುಗಳಿಗೆ ಒಳಪಡುವುದು ಪ್ರಮುಖ ಅಂಶಗಳಾಗಿವೆ. WTOನ ಕಾನೂನುಗಳು ಶ್ರೀಮಂತ ರಾಷ್ಟ್ರಗಳಿಂದ ರಚನೆಯಾಗಿರುವುದರಿಂದ ಅವು ಶ್ರೀಮಂತ ರಾಷ್ಟ್ರಗಳ ಪಕ್ಷಪಾತಿಯಾಗಿವೆ. ನವೀನ ಹಾಗೂ ಉನ್ನತ ತಂತ್ರಜ್ಞಾನಗಳಾದ ಮಾಹಿತಿ ತಂತ್ರಜ್ಞಾನ ಮತ್ತು ಜೀವ ತಂತ್ರಜ್ಞಾನದ ಕ್ಷೇತ್ರಗಳು ಬರುವ ದಿನಗಳಲ್ಲಿ ಭಾರತಕ್ಕೆ ಹೊಸ ಸವಾಲು ಹಾಗೂ ಅವಕಾಶಗಳನ್ನು ಸೃಷ್ಟಿಸಲಿವೆ. ಅಲ್ಲದೆ ಕೈಗಾರಿಕಾ ರಾಷ್ಟ್ರಗಳಿಂದ ಬೌದ್ಧಿಕ ಹಕ್ಕು ಹಾಗೂ ಸ್ವಾಮ್ಯ ಹಕ್ಕುಗಳ ಒತ್ತಡವೂ ನಿರ್ಮಾಣವಾಗುತ್ತಿದೆ. ಶ್ರೀಮಂತ ರಾಷ್ಟ್ರಗಳ ಹಿಡಿತದಲ್ಲಿರುವ ವಿಶ್ವ ಬ್ಯಾಂಕ್ ಹಾಗೂ ಅಂತರರಾಷ್ಟ್ರೀಯ ವಿತ್ತ ಆಯೋಗಗಳು ಬಡರಾಷ್ಟ್ರಗಳ ಮೇಲೆ ನಾನಾರೀತಿಯ ಒತ್ತಡಗಳನ್ನು ಸುಲಭವಾಗಿ ನಿರ್ಮಿಸಬಲ್ಲವು. ಇವೆಲ್ಲವುಗಳ ಪ್ರಭಾವದಿಂದ ಪಾರಾಗುವುದು ಕಷ್ಟದ ವಿಷಯ.

## ಮರೆತುಹೋದ ಯುಕ್ತ ತಂತ್ರಜ್ಞಾನ

ಹಳ್ಳಿಗಳ ದೇಶ ಭಾರತವೆಂಬುದು ತಿಳಿದಿದ್ದರೂ ಹಳ್ಳಿಗರ ಅಗತ್ಯವನ್ನು ಪೂರೈಸುವ ಯುಕ್ತ ತಂತ್ರಜ್ಞಾನದ ಅಭಿವೃದ್ಧಿಗೆ ಕಳೆದ ೫೦ ವರ್ಷಗಳಿಂದಲೂ ಗಮನ ನೀಡಿಲ್ಲ. ಗ್ರಾಮೀಣ ಜನರ ಶಿಕ್ಷಣ, ನೈರ್ಮಲ್ಯ, ವಸತಿ, ಉದ್ಯೋಗ ಹಾಗೂ ಲಿಂಗ ಸಮಾನತೆಯ ವಿಚಾರಗಳಿಗೆ ಸೂಕ್ತ ಗಮನವನ್ನು ನೀಡಲಾಗಿಲ್ಲ. ಕೇಂದ್ರ ಹಾಗೂ ರಾಜ್ಯ ಸರ್ಕಾರದ ಬಹುತೇಕ ಯೋಜನೆಗಳು ಗ್ರಾಮೀಣ ಜನರನ್ನು ತಲಪುವಲ್ಲಿ ಸೋತಿವೆ. ಇಂದು ಬಹುತೇಕ ರೈತರಿಗೆ ಮಣ್ಣು ಮತ್ತು ನೀರಿನ ನಡುವೆ ಇರುವ ಅಂತರ ಪ್ರಕ್ರಿಯೆಗಳ ಬಗ್ಗೆ ವೈಜ್ಞಾನಿಕ ಮಾಹಿತಿ ತಿಳಿದಿಲ್ಲ. ಕೃಷಿ ಪದ್ಧತಿಗಳು ಇನ್ನೂ ಪುರಾತನ ರೀತಿಯವುಗಳಾಗಿವೆ. ಆದರೆ ರಸಗೊಬ್ಬರ ಹಾಗೂ ಕೀಟನಾಶಕಗಳನ್ನು ಯಥೇಚ್ಛವಾಗಿ ಬಳಸುತ್ತಿದ್ದಾರೆ. ಸರ್ಕಾರದ ವಿವಿಧ ಯೋಜನೆಗಳ ಫಲ, ಸಹಾಯಧನ ಮುಂತಾದ ಅನುಕೂಲಗಳನ್ನು ಕೇವಲ ಶೇ.೧೦ರಷ್ಟು ಜನ ಪಡೆಯುತ್ತಿದ್ದು ಅವರು ಶರವೇಗದಲ್ಲಿ ಶ್ರೀಮಂತರಾಗುತ್ತಿದ್ದಾರೆ. ಹಾಗಾಗಿ ಬಡವ ಬಲ್ಲಿದರ ನಡುವಿನ ಕಂದರ ಹೆಚ್ಚುತ್ತಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ಇಂದಿನ ಬಹು ಸಂಖ್ಯಾತ ಬಡವರಿಗೆ ಏನು ಅನುಕೂಲ ನೀಡಿದೆ? ಇಂದು ಜನಸಾಮಾನ್ಯರಿಗೆ ಸೃಜನಾತ್ಮಕವಾದ, ಸುಧಾರಿತ ಹಾಗೂ ಯುಕ್ತವಾದ ತಂತ್ರಜ್ಞಾನದ ಅಗತ್ಯವಿದೆ. ಇವುಗಳನ್ನು ಆವಿಷ್ಕರಿಸಲು ನಮ್ಮ ವಿಜ್ಞಾನಿಗಳು, ಇಂಜನಿಯರುಗಳು ಮುಂದಾಗಬೇಕು. ಸ್ಥಳೀಯ ಅಗತ್ಯಕ್ಕೆ ಅನುಗುಣವಾದ ಉಪಕರಣಗಳನ್ನು

"ಶ್ರೀಮತಿ"

*ಹುಟ್ಟಿದ ಮನೆಗು*
*ಮೆಟ್ಟಿದ ಮನೆಗು*
*ಹೆಸರು ತರುವ*
*ಹುಚ್ಚಿನಲಿ*
*ತನ್ನ ತನವನ್ನೇ*
*ಕೊಂದುಕೊಂಡಳು*
*ಮತಿಯನ್ನೇ*
*ಕಳೆದುಕೊಂಡಳು*
*ಈ ಶ್ರೀಮತಿ!!*

ಕೊಪ್ಪರಂ ಅನ್ನಪೂರ್ಣ
ನಂ.೩೮, ೫ನೇ ಟೆಂಪಲ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು- ೫೬೦ ೦೦೩

ಸಿದ್ಧಪಡಿಸಬೇಕು. ಭೂ ಹಾಗೂ ಜಲ ಸಂರಕ್ಷಣಾ ವಿಧಾನಗಳನ್ನು ಅಭಿವೃದ್ಧಿಪಡಿಸಬೇಕು. ಹಳ್ಳಿಗಳಲ್ಲಿ ಆಹಾರ ಸಂಸ್ಕರಣೆಯ ಪುಟ್ಟ ಉದ್ಯಮಗಳು ಹಾಗೂ ಆಹಾರ ಪದಾರ್ಥಗಳ ಮೌಲ್ಯ ಹೆಚ್ಚಿಸುವ ವಿಧಾನಗಳು ಬೆಳೆದು ಬರುವಂತಾಗಬೇಕು. ಯೋಗ್ಯವಾದ ಕುಡಿಯುವ ನೀರನ್ನು ಪಡೆಯುವ ವಿಧಾನ, ಕಾಯಿಲೆಗಳನ್ನು ನಿವಾರಿಸುವ ನೈರ್ಮಲ್ಯ ವಿಧಾನಗಳು ಹಾಗೂ ಮಹಿಳೆಯರು ನಡೆಸಬಹುದಾದ ಗುಡಿ ಕೈಗಾರಿಕೆಗಳು ಬರುವಂತಾಗಬೇಕು. ಇಂತಹ ಪ್ರಯತ್ನಗಳು ಯಶಸ್ವಿಯಾಗಬೇಕಾದರೆ ವಿಜ್ಞಾನಿಗಳ ಹಾಗೂ ಇಂಜನಿಯರ್‌ಗಳ ವ್ಯವಸ್ಥಿತ ಹಾಗೂ ಸಂಘಟಿತ ಪ್ರಯತ್ನಗಳಾಗಬೇಕು.

**ನವನವೀನ ವಿಜ್ಞಾನಗಳು ಮತ್ತು ಉನ್ನತ ತಂತ್ರಜ್ಞಾನಗಳು**

ಇಂದು ವಿಜ್ಞಾನ ಕ್ಷೇತ್ರದಲ್ಲಿ ಹೊಸ ಹೊಸ ಶಾಖೆಗಳು ಉದ್ಭವವಾಗುತ್ತಿವೆ. ಹಾಗೆಯೇ ತಂತ್ರಜ್ಞಾನದಲ್ಲಿ ಪ್ರತಿದಿನ ಉನ್ನತ ಆವಿಷ್ಕಾರಗಳು, ಉನ್ನತ ತಂತ್ರಜ್ಞಾನಗಳು ಬೆಳೆಯುತ್ತಿವೆ. ಇಂದಿನ ಯುಗದಲ್ಲಿ ಯಾವುದೇ ದೇಶವು ತನ್ನ ರಾಷ್ಟ್ರದ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಬೇಕಾದರೆ ವಿಜ್ಞಾನದ ಜ್ಞಾನ ಸಂಪತ್ತನ್ನು ರಾಷ್ಟ್ರೀಯ ಆಸ್ತಿಯನ್ನಾಗಿ ಪರಿವರ್ತಿಸಬೇಕು. ಜೊತೆಗೆ ಅಂತರರಾಷ್ಟ್ರೀಯ ಮಟ್ಟದಲ್ಲಿ ವಸ್ತು ಹಾಗೂ ಸೇವೆಗಳ ಗುಣಮಟ್ಟವನ್ನು ಕಾಯ್ದುಕೊಳ್ಳುವುದರಲ್ಲಿ ಮುಂದಿರಬೇಕು. ಇಂದು ಎಲೆಕ್ಟ್ರಾನಿಕ್ಸ್ ಕಂಪ್ಯೂಟರ್ ಮತ್ತು ಜಾಗತಿಕ ಸಂಪರ್ಕವಿಧಾನಗಳಲ್ಲಿ ಆಗಿರುವ ಆವಿಷ್ಕಾರಗಳು ಮತ್ತು ಬದಲಾವಣೆಗಳು ಮಾಹಿತಿ ತಂತ್ರಜ್ಞಾನ (Information Technology)ವನ್ನು ಅದ್ವಿತೀಯ ವಿಜ್ಞಾನವನ್ನಾಗಿಸಿದೆ. ಕೈಗಾರಿಕಾ ರಾಷ್ಟ್ರಗಳು ಮಾಹಿತಿ ತಂತ್ರಜ್ಞಾನದ ಪ್ರಯೋಜನಗಳನ್ನು ಗರಿಷ್ಠ ಪ್ರಮಾಣದಲ್ಲಿ ಬಳಸಲು ಹತ್ತು ಹಲವು ಯೋಜನೆಗಳನ್ನು ಕೈಗೊಳ್ಳುತ್ತಿವೆ. ಅದೇ ರೀತಿ ಜೀವ ತಂತ್ರಜ್ಞಾನದ ಕ್ಷೇತ್ರದಲ್ಲಿಯೂ ಒಂದು ಕ್ರಾಂತಿಯೇ ಉಂಟಾಗುತ್ತಿದೆ. ಇದರಿಂದ ಸಸ್ಯ, ಪ್ರಾಣಿ ಪರಿಸರ ಹಾಗೂ ವೈದ್ಯ ವಿಜ್ಞಾನಗಳಲ್ಲಿ ಅಪಾರ ಬದಲಾವಣೆಗಳು, ಸಂಶೋಧನೆಗಳು, ಆವಿಷ್ಕಾರಗಳು ಉಂಟಾಗಲಿವೆ. ಅಲ್ಲದೆ ಬಾಹ್ಯಾಕಾಶ, ವಸ್ತು ವಿಜ್ಞಾನ, ಪರಮಾಣು ವಿಜ್ಞಾನ ಹಾಗೂ ಅಸಂಪ್ರದಾಯಕ ಶಕ್ತಿ ಮೂಲಗಳಲ್ಲಿ ನವನವೀನ ವಿಭಾಗಗಳು ಉದಯವಾಗುತ್ತಿವೆ. ಬರುವ ೫೦ ವರ್ಷಗಳಲ್ಲಿ ಪ್ರಪಂಚದ ಜನರ ಜೀವನ ವಿಧಾನವೇ ಬದಲಾಗಲಿದೆ. ಈ ಬದಲಾವಣೆಗೆ ನಾವು ಎಷ್ಟು ತಯಾರಿ ನಡೆಸಿದ್ದೇವೆ ಎಂಬುದು ಪ್ರಮುಖ ಪ್ರಶ್ನೆ.

**ಭಾರತದ ಮಾರ್ಗ ಯಾವುದು ?**

ನಾವು ಸಹ ಶ್ರೀಮಂತ ರಾಷ್ಟ್ರಗಳಂತೆ ತೆರೆದ ಮಾರುಕಟ್ಟೆ, ತೀವ್ರ ಸ್ಪರ್ಧೆಯಿರುವ ಶ್ರೇಣೀಕೃತ ಸಮಾಜದ ವಿಕಾಸಕ್ಕೆ ವಿಜ್ಞಾನ-ತಂತ್ರಜ್ಞಾನಗಳನ್ನು ಬಳಸಬೇಕೆ? ಅಥವಾ ಯೋಜನಾಬದ್ಧವಾದ, ಸಹಕಾರ ನೀತಿಯ ಆಧಾರದ ಮೇಲೆ ಸಕಲ ಜನರ ಸರ್ವತೋಮುಖ ಅಭಿವೃದ್ಧಿಗೆ ಪೂರಕವಾಗುವಂತೆ ವಿಜ್ಞಾನ - ತಂತ್ರಜ್ಞಾನಗಳನ್ನು ಬಳಸಬೇಕೋ? ಎಂಬುದೇ ಇಂದಿನ ದ್ವಂದ್ವದ ವಿಷಯ. ಇದಕ್ಕಿಂತ ಮುಖ್ಯವಾದುದು ನಾವು ವಸ್ತು ಮತ್ತು ಸೇವೆಗಳನ್ನು ಎಷ್ಟುಕಾಲ ನಿರಂತರವಾಗಿ ಹೆಚ್ಚಿಸಬಹುದು. ಪ್ರಕೃತಿಯ ಸಂಪನ್ಮೂಲಗಳನ್ನು ನಿರಂತರವಾಗಿ ಬಳಸುತ್ತಾ, ಬದಲಿಸುತ್ತಾ ಸಾಗಿದರೆ, ಅಂತಿಮವಾಗಿ ಸಂಪನ್ಮೂಲಗಳ ಕೊರತೆಯಿಂದ ಮಾನವ ಪ್ರಭೇದವೇ ನಾಶವಾಗುವುದರಲ್ಲಿ ಸಂದೇಹವಿಲ್ಲ. ಯಾವುದೇ ಪ್ರಗತಿಗೆ ಮಿತಿಯೊಂದಿದೆ. ಆ ಮಿತಿಯನ್ನು ದಾಟಿದಾಗ ಪರಿಸರದ ಪ್ರತಿರೋಧ ಹೆಚ್ಚುತ್ತಾ ಹೋಗುತ್ತದೆ. ಮೂಲಭೂತ ಸಂಪನ್ಮೂಲಗಳೇ ಕಣ್ಮರೆಯಾಗುತ್ತವೆ. ಆದ್ದರಿಂದ ಕುರುಡು ಸ್ಪರ್ಧೆಯಲ್ಲಿ ಭಾಗವಹಿಸುವ ಬದಲು ನಾವು ಪ್ರಕೃತಿಯೊಡನೆ ಕೂಡಿ ಬಾಳುವ, ಸಮನ್ವಯದ ಬದುಕು ಸಾಗಿಸುವ ಹಾಗೂ ಸಮಾಜದ ಪ್ರಗತಿಯಲ್ಲಿ ಸ್ವಾವಲಂಬನೆ ಸಾಧಿಸುವ ಮಾರ್ಗಗಳನ್ನು ಅರಸಬೇಕಿದೆ.

★ ಮಿಲಿಟರಿ ತಂತ್ರಜ್ಞಾನ, ಬಾಂಬುಗಳ ತಂತ್ರಜ್ಞಾನದ ಬದಲು ಸೌರಶಕ್ತಿಯನ್ನು ಸಮರ್ಪಕವಾಗಿ ಹಾಗೂ ದಕ್ಷವಾಗಿ ಬಳಸುವ ತಂತ್ರಜ್ಞಾನವನ್ನು ಅಭಿವೃದ್ಧಿ ಪಡಿಸಬೇಕಿದೆ.

★ ಉನ್ನತ ವೈದ್ಯಕೀಯ ಚಿಕಿತ್ಸೆಗಿಂತ ಹೆಚ್ಚಾಗಿ ಗ್ರಾಮೀಣ ಹಾಗೂ ಕೊಳಚೆ ನಿವಾಸಿಗಳನ್ನು ಕಾಡುತ್ತಿರುವ ಸಾಂಕ್ರಾಮಿಕ ರೋಗಗಳನ್ನು ನಿವಾರಿಸುವ ಸರಳ ವೈದ್ಯಕೀಯ ಜ್ಞಾನವನ್ನು ಎಲ್ಲರೂ ಪರಿಪಾಲಿಸುವಂತೆ ಮಾಡಬೇಕಿದೆ.

★ 'ಹಸಿರು ಮನೆ' ಪರಿಣಾಮ ಹಾಗೂ ಜಾಗತಿಕ ಉಷ್ಣತೆಗೆ ಕಾರಣವಾಗುವ ಅನಿಲಗಳನ್ನು ವಾಯುಮಂಡಲಕ್ಕೆ ಬಿಡುಗಡೆ ಮಾಡುವುದನ್ನು ನಿವಾರಿಸಬೇಕಿದೆ. ಅದೇ ರೀತಿ ಓಜೋನ್ ಅನಿಲದ ಕವಚವನ್ನು ಹಾಳುಮಾಡುವ ಅನಿಲಗಳ, ವಸ್ತುಗಳ ಬಿಡುಗಡೆಗೆ ಪೂರ್ಣವಿರಾಮ ಹೇಳಬೇಕಿದೆ.

★ ಪಂಚಾಯಿತಿ ಅಥವಾ ತಾಲ್ಲೂಕು ಮಟ್ಟದ ಪ್ರದೇಶಗಳು ಹೆಚ್ಚು ಸ್ವಾವಲಂಬಿತವಾಗುವಂತೆ ಮಾಡುವ ಯುಕ್ತ ತಂತ್ರಜ್ಞಾನ, ಯೋಜನೆ ಹಾಗೂ ಕೃಷಿವಿಜ್ಞಾನದ ಅಗತ್ಯವಿದೆ. ಇದರಿಂದ ವಸ್ತುಗಳ ಸಾಗಣೆಯ ವೆಚ್ಚ, ಮಾಲಿನ್ಯ ತಡೆಗಟ್ಟಿದಂತಾಗುತ್ತದೆ.

ಯುಕ್ತ (ಸೂಕ್ತ) ತಂತ್ರಜ್ಞಾನದ ಲಕ್ಷಣಗಳೆಂದರೆ, ಅದು ಪರಿಸರಕ್ಕೆ ಹೊಂದುವಂತಿದ್ದು ನಿರಂತರವಾಗಿರಬೇಕು. ಅಲ್ಪ ಬಂಡವಾಳದಿಂದ ಅಧಿಕ ಜನರಿಗೆ ಉದ್ಯೋಗ ಒದಗಿಸಬೇಕು ಹಾಗೂ ಅಲ್ಪಶಕ್ತಿಯಿಂದ ಕೈಗಾರಿಕೆಗಳನ್ನು ನಡೆಸುವ ತಂತ್ರಜ್ಞಾನವಾಗಿರಬೇಕು.

★ ಬಳಸಿದ ವಸ್ತುಗಳ ಪುನರ್ ಬಳಕೆ ಹಾಗೂ ಪುನರುತ್ಪಾದನೆಯಾಗುವಂತೆ ವಿಜ್ಞಾನ ಮತ್ತು ತಂತ್ರಜ್ಞಾನಗಳನ್ನು ಅಭಿವೃದ್ಧಿಪಡಿಸಬೇಕು. ಮಾನವ ಬಳಸುವ ಎಲ್ಲ ವಸ್ತುಗಳು ಪುನರುತ್ಪಾದನೆಯಾಗುವಂತಾದರೆ ಕೈಗಾರಿಕಾ ಮಾಲಿನ್ಯ ಕಸದ ಮಾಲಿನ್ಯಗಳನ್ನು ನಿವಾರಿಸಿದಂತಾಗುವುದು.

★ ಜೀವಿತಾವಧಿ ಹೆಚ್ಚಾಗಲು ಅಗತ್ಯವಾದ ಪ್ರಾಥಮಿಕ ಆರೋಗ್ಯಸೇವೆ ಪರಿಣಾಮಕಾರಿಯಾಗಿ/ಸುಲಭವಾಗಿ ದೊರೆಯುವಂತಾಗಬೇಕು.

★ ಭೂ ಹಾಗೂ ಜಲ ಸಂಪನ್ಮೂಲಗಳ ಸುಸ್ಥಿರ ಬಳಕೆ, ಸುಸ್ಥಿರ ಕೃಷಿ, ರೋಗಗಳಿಗೆ ಪ್ರತಿರೋಧವಿರುವ ತಳಿಗಳ ಅಭಿವೃದ್ಧಿ ಮಾಡುವಂತಹ ಕೃಷಿವಿಜ್ಞಾನ ಬೆಳೆದುಬರಬೇಕು. ಕೃಷಿಯ ವೈಜ್ಞಾನಿಕ ಮಾಹಿತಿ ಕೃಷಿಕರಿಗೆ ತಲುಪುವಂತಿರಬೇಕು.

ಇಂತಹ ಪ್ರಯತ್ನಗಳು ಯಶಸ್ವಿಯಾಗಬೇಕಾದಲ್ಲಿ ಮುಕ್ತ ಪ್ರಜಾಪ್ರಭುತ್ವ, ಪ್ರತಿ ವಿಷಯದಲ್ಲಿಯೂ ಪಾರದರ್ಶಕತೆಯನ್ನು ಉಳಿಸಿಕೊಳ್ಳುವ ಹಾಗೂ ಭಾರತದ ಸಮಗ್ರ ಅಭಿವೃದ್ಧಿಯನ್ನು ವಿದೇಶಗಳ ಅಭಿವೃದ್ಧಿಯ ಜೊತೆಗೆ ಹೋಲಿಸದೇ ತನ್ನದೇ ಆದ ಸ್ವಾವಲಂಬಿತ ವಿಶಿಷ್ಟ ಮಾರ್ಗವನ್ನು ಬದ್ಧತೆಯಿಂದ ಜಾರಿ ಮಾಡುವ ಸರ್ಕಾರವಿರಬೇಕೆಂಬುದು ನಿರ್ವಿವಾದ.

ಡಾ|| ಎಚ್. ಎಸ್. ನಿರಂಜನಾರಾಧ್ಯ
ನಂ. ೨೭, ನಾಲ್ಕನೇ ತಿರುವು, ನಗರಸಭೆ ಲೇಔಟ್, ಸಿದ್ಧಗಂಗಾ ಬಡಾವಣೆ, ತುಮಕೂರು - ೫೭೨ ೧೦೨.

(೨೭ನೇ ಪುಟದಿಂದ)

***ಪಾಲಿಯ ಅನುವಾದಗಳು:***

*ಧಮ್ಮ ಪದ, ಸುತ್ತ ನಿಪಾತ, ವಿಸುದ್ದಿ ಮಗ್ಗ, ಜಾತಕ ಕತೆಗಳು, ಶಾಂತಿದೇವಾಚಾರ್ಯರ ಬೋಧಿಚರ್ಯಾವತಾರ (ಹಿಂದಿ), ಅಭಿಧಮ್ಮ (ಮರಾಠಿ, ಹಿಂದಿ).*

**ಆಚಾರ್ಯರ ಕೆಲ ಗಮನಾರ್ಹ ಅಭಿಪ್ರಾಯಗಳು**

* ಭಿಕ್ಷುಣಿಯರ ಸಂಘವನ್ನು ಮೊದಲಿಗೆ ಕಟ್ಟಿದ ಶ್ರೇಯಸ್ಸು ಬುದ್ಧನದಲ್ಲ ! ಜೈನ, ವೈದಿಕ ಸಂಪ್ರದಾಯಗಳಲ್ಲಿ ಸನ್ಯಾಸಿನಿಯರ ಸಂಘಗಳು ಬುದ್ಧಪೂರ್ವ ಯುಗದಿಂದಲೇ ನಡೆದು ಬಂದಿದ್ದವು. ಅವರಲ್ಲಿ ಸಾಕಷ್ಟು ವಿದುಷಿಯರೂ ಇದ್ದರು. ಭಿಕ್ಷು-ಭಿಕ್ಷುಣಿಯರಲ್ಲಿ ಇದ್ದ ಅಸಮಾನತೆ, ಅಶೋಕನ ನಂತರದ ಬೆಳವಣಿಗೆಯಾಗಿದೆ.

* ಎಲ್ಲ ಧರ್ಮಗಳು ವ್ಯಕ್ತಿ ಮತ್ತೆಗೆ, ವ್ಯಕ್ತಿ ಸತ್ತೆಗೆ ಮಹತ್ವ ನೀಡಿದ್ದವು. ಬುದ್ಧನು ಸಂಘವನ್ನೇ ಸಕಲ ಕಾರ್ಯಗಳಿಗೆ ಹೊಣೆ ಎಂದ. ತನ್ನ ಉತ್ತರಾಧಿಕಾರಿಯನ್ನೂ ಹೆಸರಿಸಲಿಲ್ಲ.

* ಬುದ್ಧನ ತಂದೆ ಶುದ್ಧೋದನ, ಶಾಕ್ಯರ ರಾಜನಾಗಿರಲಿಲ್ಲ ! ಸ್ವಂತ ಸಾಗುವಳಿ ಕೈಕೊಂಡ ಜಮೀನುದಾರನಾಗಿದ್ದ. ತರುಣ ಸಿದ್ಧಾರ್ಥ ಗೌತಮನೂ ಕೃಷಿ ಕೈಗೊಂಡಿದ್ದ.

* ಭಿಕ್ಷೆಯಿಂದ ಜೀವಿಸುವ, ನೀಡಿದ್ದನ್ನು ಸೇವಿಸುವ, ಜೈನ-ಬೌದ್ಧ ಶ್ರಮಣರಿಗೆ ಮಾಂಸಾಹಾರ ತ್ಯಾಜ್ಯವಿರಲಿಲ್ಲ. ವೈದಿಕ ಬ್ರಾಹ್ಮಣರಲ್ಲಿ ಅಂತೂ ಕ್ರಿ. ಶ. [illegible] ಶತಕದವರೆಗೆ ಗೋಮಾಂಸ ಸೇವನೆ ರೂಢಿಯಲ್ಲಿತ್ತು.

ಡಾ|| ಜ್ಯೋತ್ಸ್ನಾ ಕಾಮತ್
೧೧೦. 'ಶಶಿಕಿರಣ ಅಪಾರ್ಟ್‌ಮೆಂಟ್ಸ್', ೧೮ನೇ ಕ್ರಾ.ಸ್ತ್ರ. ಮಲ್ಲೇಶ್ವರ, ಬೆಂ[illegible]

# ಯಾವ ಬದ್ಧತೆಯೂ ಇಲ್ಲದ ಬಜೆಟ್

**ಡಾ|| ಡಿ. ನರಸಿಂಹ ರೆಡ್ಡಿ**

ಕೇಂದ್ರ ಸರಕಾರದ ಬಜೆಟ್ ಪ್ರಕಟವಾಗುವ ಮುನ್ನ ಪ್ರತಿ ವರ್ಷವೂ ಜನರ ಮಧ್ಯೆ ಸಾಂಪ್ರದಾಯಿಕವಾಗಿ ಒಂದು ರೀತಿಯ ನಿರೀಕ್ಷಣೆ, ಕುತೂಹಲ ಹಾಗೂ ಕೌತುಕ ಇರುವುದು ಸಹಜವೇ. ಈ ವರ್ಷವೂ ಕೇಂದ್ರ ವಿತ್ತಮಂತ್ರಿಯವರು, ಈ ವರ್ಷದ ಬಜೆಟ್ 'ಕಠಿಣ'ವಾದ ಬಜೆಟ್ ಆಗಲಿರುವುದು, ಎಂದೆಲ್ಲಾ ಹೇಳಿಕೆಗಳ ಮೇಲೆ ಹೇಳಿಕೆ ನೀಡುತ್ತಾ ಅಂತಹ ಒಂದು ಕೌತುಕ ಉಂಟುಮಾಡಲು ಯತ್ನಿಸಿದರು. ಆದರೆ ಅಂತಹುದೇನೂ ಜರಗಲೇ ಇಲ್ಲ. ಈ ವರ್ಷದ ಬಜೆಟ್ ಕೇವಲ ಮಾಮೂಲೀ ಲೆಕ್ಕಾಚಾರದ ಪರಿಪಾಠವಾಗಿಯೇ ಉಳಿಯಿತು. ಆದರೆ 'ಎರಡನೇ ಪೀಳಿಗೆಯ ಸುಧಾರಣೆಗಳು' ಎಂಬಂಥ ಉತ್ಪ್ರೇಕ್ಷಿತ ಮಾತುಗಳಿಗೇನೂ ಕೊರತೆ ಇರಲಿಲ್ಲವೆನ್ನಿ. ನಿಜ, ಹೀಗೆ ಕೇಂದ್ರ ಸರಕಾರದ ಬಜೆಟ್ ಕೇವಲ ಲೆಕ್ಕ ಸಮಜಾಯಿಷಿಯ ಯತ್ನವಾಗುವಂತೆ ಅವನತಿಗೊಂಡಿರುವುದಕ್ಕೆ ಶ್ರೀ ಯಶವಂತ ಸಿನ್ಹಾರವರನ್ನಷ್ಟೇ ದೂಷಿಸಲಾಗದು. ಈ ಅಪಕೀರ್ತಿಗೆ ಅವರ ಹಿಂದಿನ ಶ್ರೀ ಮನಮೋಹನಸಿಂಗ್ (ನರಸಿಂಹರಾವ್ ಸರ್ಕಾರ) ಹಾಗೂ ಶ್ರೀ ಚಿದಂಬರಂರವರೂ ಸಹ ಭಾಜನರು. ಅವರೂ ತಾವೇ ಸೃಜಿಸಿದ 'ಆರ್ಥಿಕ ಸುಧಾರಣೆಗಳು' ಎಂಬಂಥ ನುಡಿ ವ್ಯಾಮೋಹಕ್ಕೆ ಬಲಿಯಾಗಿದ್ದರು. ಅವರು ಉಪಕ್ರಮಿಸಿದಂಥ ಈ ಸುಧಾರಣೆಗಳಲ್ಲಿ ರಾಜ್ಯದ ಪಾತ್ರವನ್ನು ಬದಲಾಯಿಸ ಲಾಯಿತು. 'ಸಂಕ್ಷೇಮಕಾರಿ' ಅಥವಾ 'ಅಭಿವೃದ್ಧಿಕಾರಿ' ಸ್ಥಿತಿಯಿಂದ ಅದನ್ನು 'ಸುಮುಖಕಾರಿ' ಸ್ಥಿತಿಗೆ ಇಳಿಸಲಾಯಿತು. ಈ 'ಸುಮುಖಕಾರಿ' ರಾಜ್ಯದ ಗುರಿ ಏನು? ಕ್ರಮ ಕ್ರಮೇಣ ತನ್ನ ಯೋಜನಾಬದ್ಧ ಆರ್ಥಿಕೋನ್ನತಿಯ ಪಾತ್ರವನ್ನು ಬಿಟ್ಟು ಕೊಡುವಂಥ ಪ್ರಗತಿ – ಅಥವಾ ವಿಗತಿ ಎಂದೇ ಅನ್ನಿ – ಸಾಧಿಸುವುದಾಗಿದ್ದಿತು. ಇದಕ್ಕನುಗುಣವಾಗಿ ಬಜೆಟ್ಟಿನಲ್ಲಿ ವೆಚ್ಚವನ್ನು ಎಂದಿನಂತೆ 'ಯೋಜನಾಬದ್ಧ' ಹಾಗೂ 'ಅಯೋಜಿತ' ಅಥವಾ 'ಅಭಿವೃದ್ಧಿಕಾರಿ' ಹಾಗೂ 'ಅಭಿವೃದ್ಧ್ಯೇತರ' ಎಂದು ವಿಭಾಗಿಸುವುದನ್ನು ಬಿಟ್ಟುಕೊಡಲಾಯಿತು. ಅಂತಹ ವಿಭಜನೆಯು ತನ್ನ ಉಪಯುಕ್ತತೆಯನ್ನು ಕಳೆದುಕೊಂಡಿದ್ದಿತು. ಉದಾಹರಣೆಗೆ, 'ಅಭಿವೃದ್ಧಿ' ವೆಚ್ಚ ೧೯೯೦-೯೧ರಲ್ಲಿ ಸುಮಾರು ಶೇ. ೬೦ರಷ್ಟಾಗಿದ್ದುದು ೧೯೯೯-೨೦೦೦ದಲ್ಲಿ ಕೇವಲ ಶೇ. ೧೬ಕ್ಕೆ ಇಳಿಯಿತು. ವಿದ್ಯುಚ್ಛಕ್ತಿ, ಸಾರಿಗೆ, ರೇವು, ರಸ್ತೆ, ವಾಯುಸಾರಿಗೆಯಂಥ ಪ್ರಧಾನ ವಿಕಾಸಶೀಲ ಕಾರ್ಯಕ್ಷೇತ್ರಗಳು ಹಾಗೂ ವಿದ್ಯಾಭ್ಯಾಸ, ಆರೋಗ್ಯ ಗಳಂಥ ಸಾಮಾಜಿಕ ಸೇವಾ ವಿಭಾಗಗಳು ಸಹ, ಮೊದಲು ರಾಜ್ಯ ವಿಭಾಗಕ್ಕೆ ಸೇರಿದ್ದರೆ, ಈಗ ಅವನ್ನು ಖಾಸಗಿ ವಲಯಕ್ಕೆ ತೆರೆದಿರಿಸಲಾಗಿದೆ. ಸಾರ್ವಜನಿಕ ವಿಭಾಗವನ್ನು ಗಣನೀಯ ಪ್ರಮಾಣದಲ್ಲಿ ಖಾಸಗೀಕರಿಸಲು ಯೋಜಿಸಲಾಗಿದೆ. ಹೀಗಾಗಿ ಬಜೆಟ್ಟುಗಳಲ್ಲಿ 'ವಿಕಾಸ' ವಿಭಾಗಕ್ಕೆ ಸೇರಿದ ವೆಚ್ಚಗಳು ನಿಧಾನವಾಗಿ ಕಣ್ಮರೆಯಾಗುತ್ತಿವೆ.

[illegible]

ವರ್ಷಗಳಿಂದೀಚೆಗೆ ಒಟ್ಟು ರಾಷ್ಟ್ರೀಯ ಉತ್ಪನ್ನದಲ್ಲಿ (ಜಿಡಿಪಿ) ಶೇ. ೬ಕ್ಕೂ ಹೆಚ್ಚು ಬದಲಾವಣೆಯ ದರವನ್ನು ನಿರೀಕ್ಷಿಸುವುದು ತೀರಾ ಸಾಮಾನ್ಯವಾಗಿಬಿಟ್ಟಿದೆ. ಹಾಗಾಗಿ ಜಿಡಿಪಿಯಲ್ಲಿ ಶೇ. ೭-೮ರಷ್ಟು ಉನ್ನತ ಬೆಳವಣಿಗೆ ಅಸಹಜವೇನಲ್ಲವೆಂದು ಪರಿಗಣಿಸಲಾಗುತ್ತಿದೆ. ಇಂತಹ ಹೆಚ್ಚಳ ನಿಜಕ್ಕೂ ಬೆಳವಣಿಗೆಗೆ ಸಹಕಾರಿಯಾಗುವುದೇ ಎಂದು ಕೇಳಬೇಕೆನಿಸುತ್ತದೆ. ಅದಕ್ಕೂ ಹೆಚ್ಚಾಗಿ ಇಂಥ ಹೆಚ್ಚಳವು ಜನರ ನಡುವಿನ ಆರ್ಥಿಕ ಅಸಮಾನತೆಯನ್ನು ಸ್ವಲ್ಪಮಟ್ಟಿಗಾದರೂ ಕಮ್ಮಿ ಮಾಡುವುದೇ, ಸಾಮಾಜಿಕ ನ್ಯಾಯವನ್ನು ಒದಗಿಸುವುದೇ ಎಂದು ಕೇಳುವುದು ಹೆಚ್ಚು ಮುಖ್ಯವಾಗಿದೆ.

ಇಂತಹ ಚಿಂತನೆಯ ಹಿನ್ನೆಲೆಯಲ್ಲಿ ಕೇಂದ್ರ ಸರಕಾರದ ೨೦೦೦-೦೧ನೇ ವರ್ಷದ ಬಜೆಟ್ಟನ್ನು ಪರಿಶೀಲಿಸೋಣ. ಇದಕ್ಕೆ ಹಿಂದಿನ ೧೯೯೯-೨೦೦೦ ವರ್ಷದಲ್ಲಿ ಆರ್ಥಿಕ ಪರಿಸ್ಥಿತಿ ಅದರ ಕಾರ್ಯಗತಿ ತುಂಬಾ ಶೋಚನೀಯವಾಗಿದ್ದಿತು. ಆ ನಿರಾಶೆಯ ಛಾಯೆಯೊಂದಿಗೆ ಹೊಸ ಬಜೆಟ್ ಪ್ರಾರಂಭವಾಗುತ್ತದೆ. ಹೋದ ವರ್ಷದ ಬಜೆಟ್‌ನಲ್ಲಿ ವೆಚ್ಚ ೨೦,೦೦೦ ಕೋಟಿ ರೂಪಾಯಿಗಳಿಗೂ ಮೀರಿದ್ದಿತು. ಇದು ಅದರ ಹಿಂದಿನ ಬಜೆಟ್ಟಿನಲ್ಲಿ ನಿಗದಿ ಮಾಡಲಾಗಿದ್ದುದಕ್ಕಿಂತ ಶೇ. ೭ರಷ್ಟು ಹೆಚ್ಚಾಗಿದ್ದಿತು. ಅದೇ ಹೊತ್ತಿನಲ್ಲಿ ಆದಾಯ ೬,೦೦೦ ಕೋಟಿ ರೂಪಾಯಿಗಳಷ್ಟು, ಅಥವಾ ನಿರೀಕ್ಷೆಗಿಂತ ಶೇ. ೪ರಷ್ಟು ಕಡಿಮೆ ಮಟ್ಟಕ್ಕೆ ಕುಸಿಯಿತು. ಇದರ ಫಲವೆಂದರೆ – ಹಣಕಾಸಿನ ಖೋತಾ ಜಿಡಿಪಿಯ ಶೇ. ೪ರಷ್ಟಾಗುವುದೆಂದು ನಿರೀಕ್ಷಿಸಲಾಗಿದ್ದು ಶೇ. ೫.೬ಕ್ಕೆ ಏರಿತು. ಬೇರೆ ಮಾತುಗಳಲ್ಲಿ ಹೇಳುವುದಾದರೆ, ವೆಚ್ಚ ಹೆಚ್ಚಾಗಿ ತೆರಿಗೆ ಸಂಗ್ರಹ ಕಡಿಮೆಯಾಗಿ, ಸರಕಾರ ೧೯೯೯-೨೦೦೦ದಲ್ಲಿ ೧.೦ ಲಕ್ಷ ಕೋಟಿ ರೂಪಾಯಿಗಳಷ್ಟು ಹೆಚ್ಚಿನ ಸಾಲ ಎತ್ತಬೇಕಾಯಿತು. ಈ ಆರ್ಥಿಕ ನಿರ್ವಹಣೆಯಲ್ಲಿನ ಅವ್ಯವಸ್ಥೆಯನ್ನು ಮುಚ್ಚಿಡಲೋಸುಗ ಕಾರ್ಗಿಲ್ ಯುದ್ಧ, ಒರಿಸ್ಸಾ ಮಹಾಚಂಡಮಾರುತ, ಮೊದಲಾದ ಕುಂಟು ನೆಪಗಳನ್ನು ಒಡ್ಡಲಾಯಿತು. ಹಾಗಾಗಿ ಹೊಸ 'ಸಹಸ್ರಮಾನದ ಬಜೆಟ್' ಎಂದು ಹೇಳಲಾಗುವಂಥ ಈ ವರ್ಷದ ಬಜೆಟ್ ತೀರ ಕುಂಟು ನಡೆಯಲ್ಲಿ ಪ್ರಾರಂಭಗೊಳ್ಳುತ್ತದೆ. ೨೦೦೦-೨೦೦೧ರಲ್ಲಿ ಹಣಕಾಸು ಖೋತಾವನ್ನು ಜಿಡಿಪಿಯ ಶೇ. ೫.೧ರಷ್ಟರಲ್ಲಿರುವಂತೆ ನೋಡಿಕೊಳ್ಳಲಾಗುವುದು ಎಂದು ನೀಡಿರುವ ಆಶ್ವಾಸನೆಯನ್ನು ನಂಬುವುದು ಕಷ್ಟ. ಅಷ್ಟೇ ಅಲ್ಲ, ಇದಕ್ಕೂ ಹೆಚ್ಚಿನ ಕಾಳಜಿಯ ಅಂಶವೆಂದರೆ ಬಜೆಟ್ಟಿನಲ್ಲಿ ಒಟ್ಟಿನ 'ಹಣಕಾಸು ಖೋತಾ'ದಲ್ಲಿ 'ಆದಾಯ ಖೋತಾ'ದ ಪಾಲೇ ಹೆಚ್ಚಾಗಿರುವುದು. ೧೯೯೯-೨೦೦೦ದಲ್ಲಿ ಈ ಆದಾಯ ಖೋತಾ ಶೇ. ೭೦ರ ಮಟ್ಟ ಮುಟ್ಟಿದ್ದಿತು. ಆದಾಯ ಖೋತಾ ಎಂದರೆ, ಸರಕಾರ ಅನುದಿನದ ವ್ಯವಹಾರಗಳನ್ನೂ ಸಾಲ ಎತ್ತಿಯೇ ನಡೆಸಬೇಕು ಎಂದರ್ಥ. ಇನ್ನು ಹೀಗೆ ಎತ್ತಿದ ಸಾಲದಲ್ಲಿ ವಿಕಾಸ ಯೋಜನೆಗಳಿಗಾಗಿ ಬಳಸಲು ಎಷ್ಟು ಹಣ ಉಳಿಯುವುದು ಸಾಧ್ಯ?

> *ಸ್ವದೇಶಿ ಮಂತ್ರವನ್ನು ಆಗಾಗ್ಗೆ ಊದುತ್ತಾ ವಿದೇಶಿ ಬಂಡವಾಳಕ್ಕೆ ಮುಕ್ತದ್ವಾರ ಕಲ್ಪಿಸಿರುವ 'ಶ್ರೇಯಸ್ಸು' ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ 'ರಾಷ್ಟ್ರಪ್ರೇಮಿ' ಬಿ. ಜೆ. ಪಿ. ಸರ್ಕಾರದ್ದು. ಹೊಸ ಶತಮಾನದಲ್ಲಿ ಮಾನವ ಜನಾಂಗ ದ್ವೇಷಿ ಕ್ಲಿಂಟನ್‌ಗೆ ಭವ್ಯ ಸ್ವಾಗತ ಕೋರಿದ ಕೇಂದ್ರ ಸರ್ಕಾರವು ದೇಶದ ಜನಕ್ಕೆ ಮುಳುವಾಗುವ ಆಯವ್ಯಯ ಪಟ್ಟಿಯನ್ನು ಬಳುವಳಿಯನ್ನಾಗಿ ನೀಡಿದೆ. ಈ ವರ್ಷದ ಬಜೆಟ್ಟನ್ನು 'ಹೊಸತು'ವಿಗಾಗಿಯೇ ವಿಶ್ಲೇಷಿಸಿ ಲೇಖನ ಬರೆದಿರುವ ಡಾ|| ಡಿ. ಎನ್. ರೆಡ್ಡಿ ಅವರು ಖ್ಯಾತ ಅರ್ಥಶಾಸ್ತ್ರಜ್ಞರು.*

ಈ ವರ್ಷದ ಬಜೆಟ್ಟನಲ್ಲಿ ಕಾಣಬರುವ ಮತ್ತೊಂದು ನೆಮ್ಮದಿ ಕೆಡಿಸುವ ಅಂಶವೆಂದರೆ – 'ರಕ್ಷಣೆ'ಗಾಗಿ ನಿಗದಿ ಮಾಡಿರುವ ಹಣದಲ್ಲಿ ಅಪಾರ ಹೆಚ್ಚಳ. ವಾಜಪೇಯಿ ಸರಕಾರ ಈಗ ಮೂರನೆಯ ಬಾರಿಗೆ ಹೀಗೆ ರಕ್ಷಣಾ ವೆಚ್ಚವನ್ನು ಏಕಪ್ರಕಾರವಾಗಿ ಹೆಚ್ಚಿಸುತ್ತಿರುವುದು. ೧೯೯೮- ೯೯ರಲ್ಲಿ ರಕ್ಷಣಾ ವೆಚ್ಚ ೩೯,೮೯೭ ಕೋಟಿ ರೂಪಾಯಿ ಅಥವಾ ಬಜೆಟ್ಟಿನ ಒಟ್ಟು ವೆಚ್ಚದ ಶೇ. ೧೪.೩ರಷ್ಟು ಆಗಿದ್ದುದು, ೨೦೦೦-೨೦೦೧ರ ಬಜೆಟ್ಟಿನಲ್ಲಿ ಅದು ೫೮,೫೮೭ ಕೋಟಿ ರೂಪಾಯಿಗಳಿಗೆ ಅಥವಾ ಒಟ್ಟು ವೆಚ್ಚದ ಶೇ. ೧೭.೩ಕ್ಕೆ ಏರಿದೆ. ಇದಲ್ಲದೆ ಗಡಿ ರಸ್ತೆಗಳ ನಿರ್ಮಾಣ, ಸಹಾಯಕ ಸೈನಿಕ ಬಲಗಳು, ಪರಮಾಣು ಶಕ್ತಿ ಇತ್ಯಾದಿ ದೇಶ ರಕ್ಷಣೆಗೆ ಸಂಬಂಧಿಸಿದ ಇತರ ಚಟುವಟಿಕೆಗಳಿಗಾಗಿಯೂ ಅಪಾರ ಹಣವನ್ನು ಗೊತ್ತುಪಡಿಸಲಾಗಿದೆ. (ಸಹಾಯಕ ಸೈನಿಕ ಬಲಗಳಿಗಾಗಿಯೇ ವೆಚ್ಚವನ್ನು ೭,೦೦೦ದಿಂದ ೮,೦೦೦ ಕೋಟಿ ರೂಪಾಯಿಗಳಿಗೆ ಏರಿಸಲಾಗಿದೆ). ಹೀಗೆ ರಕ್ಷಣೆಗೆ ಸಂಬಂಧಿಸಿದ ವೆಚ್ಚಗಳು, ಜೊತೆಗೆ ಹಳೆಯ ಸಾಲಗಳಿಗಾಗಿ ನೀಡಬೇಕಾಗಿರುವ ಬಡ್ಡಿ, ಇವೆಲ್ಲ ಸೇರಿ ಒಟ್ಟು ಸರಕಾರಿ ವೆಚ್ಚದಲ್ಲಿ ಶೇ.೬೦ರಷ್ಟನ್ನು ತಾವೇ ಕಬಳಿಸುತ್ತವೆ. ಅನುತ್ಪಾದಕ ವೆಚ್ಚಗಳಿಗಾಗಿ ಹೀಗೆ ಇಷ್ಟೊಂದು ಭಾರಿ ಹಣ ವ್ಯಯ ಮಾಡುತ್ತಿರುವಾಗ, ಬೆಳವಣಿಗೆಗೆ ಧನಾತ್ಮಕವಾಗಿ ನೆರವಾಗಲು ಬಜೆಟ್ಟಿನಲ್ಲಿ ಎಷ್ಟು ಹಣ ನಿರೀಕ್ಷಿಸಲು ಸಾಧ್ಯ? ೧೯೯೩-೯೪ರಲ್ಲಿ ಒಟ್ಟು ವೆಚ್ಚದಲ್ಲಿ ಶೇ. ೨೪ರಷ್ಟನ್ನು ಬಂಡವಾಳದ ಬೆಳವಣಿಗೆಗಾಗಿ ಖರ್ಚು ಮಾಡಿದ್ದಲ್ಲಿ ೨೦೦೦-೦೧ರ ಬಜೆಟ್ಟಿನಲ್ಲಿ ಈ ಪ್ರಮಾಣ ಶೇ. ೧೭ಕ್ಕೆ ಇಳಿದಿದೆ.

ನಿಜ. ಮಾಹಿತಿ ತಂತ್ರಜ್ಞಾನ ಹಾಗೂ ಔಷಧ ತಯಾರಿಕಾ ಕೈಗಾರಿಕೆಗಳಂಥ ಜ್ಞಾನಾಧಾರಿತ ವಿಭಾಗಗಳು ಭಾರಿ ಲಾಭ

ಗಳಿಸುತ್ತಿವೆ. ಮಾಹಿತಿ ತಂತ್ರಜ್ಞಾನ ಕೈಗಾರಿಕೆಗಳು ಗಳಿಸಿರುವ ಸಂಪತ್ತು ಎಲ್ಲ ನಿರೀಕ್ಷೆಗಳನ್ನೂ ಮೀರಿ ಹೋಗಿವೆ. ಅವುಗಳಲ್ಲಿ ಭಾರತ ಕಳೆದ ಕೆಲವು ಹತ್ತು ವರ್ಷಗಳಲ್ಲೇ ಜಗತ್ತಿನ ಅತ್ಯಂತ ಶ್ರೀಮಂತ ಕಂಪೆನಿಗಳ ಸಾಲು ಸೇರಿದೆ. ಆದರೆ ಆಶ್ಚರ್ಯಗೊಳಿಸುವ ವಿಷಯವೆಂದರೆ – ಖಾಸಗಿ ವಿಭಾಗದ ಈ ಕಂಪೆನಿಗಳು ತಮ್ಮ ಅಪಾರ ಸಂಪತ್ತಿನಲ್ಲಿ ಅತ್ಯಲ್ಪ ಭಾಗವನ್ನಾದರೂ ತೆರಿಗೆ ರೂಪದಲ್ಲಿ ದೇಶಕ್ಕೆ ನೀಡಲು ಹಿಂಜರಿಯುತ್ತಿರುವುದು. ರಫ್ತುಗಳಿಂದ ದೊರೆತ ಲಾಭಕ್ಕೆ ನೀಡಲಾಗಿದ್ದ ತೆರಿಗೆ ವಿನಾಯಿತಿಯನ್ನು ಕ್ರಮೇಣ ತೆಗೆದು ಹಾಕುವ ಉದ್ದೇಶದಿಂದ ಬಜೆಟ್‌ನಲ್ಲಿ ಡಿವಿಡೆಂಡ್ ತೆರಿಗೆಯನ್ನು ಶೇ. ೧೦ರಿಂದ ಶೇ.೨೦ಕ್ಕೆ ವಿರಿಸಲಾಗಿದೆ. ಹಾಗೆಯೇ ಬಂಡವಾಳ – ಗಳಿಕೆಗಳಿಗೆ ನೀಡಲಾಗಿದ್ದ ತೆರಿಗೆ ವಿನಾಯಿತಿಯನ್ನು ತೆಗೆದುಹಾಕುವುದನ್ನು ಮ್ಯೂಚುಯಲ್ ಫಂಡ್‌ಗಳಿಗೂ ಅನ್ವಯಿಸಲಾಗಿದೆ. ಕಳೆದ ಎರಡು ವರ್ಷಗಳಲ್ಲಿ ಮ್ಯೂಚುಯಲ್ ಫಂಡ್‌ಗಳಲ್ಲಿ ಅಪಾರ ಪ್ರಮಾಣದ ಬಂಡವಾಳ ತೊಡಗಿಸಿ ಭಾರಿ ಲಾಭ ಮಾಡಲಾಗುತ್ತಿದೆ. ಇವುಗಳು ಮಾಡುತ್ತಿರುವ ಭಾರಿ ಲಾಭ ಹಾಗೂ ಇವುಗಳಿಗೆ ನೀಡಲಾಗಿರುವ ತೆರಿಗೆ ವಿನಾಯಿತಿಗಳಿಗೆ ಹೋಲಿಸಿದಲ್ಲಿ, ಇವುಗಳಿಂದ ವಿತ್ತ ಮಂತ್ರಿಗಳು ಆದಾಯ ತೆರಿಗೆ ರೂಪದಲ್ಲಿ ಪಡೆಯಲು ಹವಣಿಸಿರುವ ಮೊತ್ತ ಅತ್ಯಲ್ಪವೆಂದೇ ಹೇಳಬೇಕು. ಈ ಅತ್ಯಲ್ಪ ಪ್ರಮಾಣದ ತೆರಿಗೆ ನೀಡಲೂ ಈ ಕಂಪೆನಿಗಳು ಋಣಾತ್ಮಕವಾಗಿ ಪ್ರತಿಕ್ರಿಯಿಸಿವೆ. 'ಉದಾರೀಕರಣ' ಎಂದರೆ ಖಾಸಗಿ ವಿಭಾಗದ ಮೇಲೆ ಹಾಕಲಾಗಿರುವ ಅಲ್ಪ ಪ್ರಮಾಣದ ತೆರಿಗೆ ಕಟ್ಟುಪಾಡುಗಳನ್ನೂ ತೊಡೆದು ಹಾಕುವುದು ಎಂದರ್ಥ ಎಂಬ ಮೋಸದ ಪ್ರಚಾರ ಬಂದಿದೆ. ಇದೇ ಖಾಸಗಿ ವಿಭಾಗದ ಋಣಾತ್ಮಕ ಪ್ರತಿಕ್ರಿಯೆಗೆ ಕಾರಣ. ಭಾರತದಲ್ಲಿ ನೇರ ತೆರಿಗೆಗಳಿಂದ ಬರುವ ಆದಾಯ ಜಗತ್ತಿನಲ್ಲೇ ಅತ್ಯಂತ ಅಲ್ಪ ಪ್ರಮಾಣದ್ದಾಗಿದೆ. ೨೦೦೦-೦೧ರ ಬಜೆಟ್ಟನಲ್ಲಿ ಈ ಪ್ರಮಾಣ ಒಟ್ಟು ಜಿಡಿಪಿಯ ಕೇವಲ ಶೇ. ೩.೩ರಷ್ಟಾಗಿದೆ. ನೇರ ತೆರಿಗೆಗಳನ್ನು ಹೆಚ್ಚಿಸಲು ಆಗದೆ ವಿತ್ತ ಮಂತ್ರಿಗಳು 'ಕೇಂದ್ರೀಯ ಮೌಲ್ಯ ವರ್ಧಿತ ತೆರಿಗೆ' (central value added tax - CENVAT)ಯ ಹೆಸರಿನಲ್ಲಿ ಅಬಕಾರಿ ಸುಂಕ (ಎಕ್ಸೈಸ್ ಡ್ಯೂಟಿ) ಹೆಚ್ಚಿಸಿದ್ದಾರೆ. ಆದರೆ ಇದು ಹಣದುಬ್ಬರ ಏರುವುದಕ್ಕೆ ಕಾರಣವಾಗಬಹುದು ಮತ್ತು ಬಡಜನರಿಗೆ ಪ್ರತಿಕೂಲವಾಗಿ ಪರಿಣಮಿಸಬಹುದು.

೧೯೯೯-೨೦೦೦ದಲ್ಲಿ ತೆರಿಗೆಗಳ ಮೂಲಕ ಪಡೆದ ಆದಾಯದಲ್ಲಿ ತೀವ್ರ ಇಳಿಮುಖವಾಗಿದ್ದಿತು. ಆಮದು-ರಫ್ತು ಸುಂಕ ವಸೂಲಿ ಕಳಪೆಯಾಗಿದ್ದುದು ಅದಕ್ಕೆ ಕಾರಣವಾಗಿದ್ದಿತು. ಆದರೂ ಈ ವರ್ಷ ಆಮದು-ರಫ್ತು ಸುಂಕ ದರವನ್ನು ಮತ್ತಷ್ಟು ಶೇ. ೪೦ರಿಂದ ಶೇ. ೩೫ಕ್ಕೆ ಇಳಿಸಲಾಗಿದೆ. ಇದಲ್ಲದೆ 'ಜಾಗತಿಕ ವ್ಯಾಪಾರ ಸಂಸ್ಥೆ'ಯೊಂದಿಗೆ ಮಾಡಿಕೊಂಡಿರುವ ಒಪ್ಪಂದದ ಪ್ರಕಾರ ೧೦೦೦ಕ್ಕೂ ಹೆಚ್ಚು ವಸ್ತುಗಳ ಮೇಲೆ ಆಮದು-ರಫ್ತು ನಿರ್ಬಂಧಗಳನ್ನು ತೆಗೆದುಹಾಕಿರುವುದರಿಂದಲೂ, ಆಮದು-ರಫ್ತು ಸುಂಕವನ್ನು ಕಡಿಮೆ ಮಾಡಿರುವುದರಿಂದಲೂ, ದೇಶದಲ್ಲಿ ನಾನಾ ರೀತಿಯ ಆಮದು ಗ್ರಾಹಕ ವಸ್ತುಗಳ ಮಹಾಪೂರ ಹರಿಯುವ ಸಂಭವವೇ ಹೆಚ್ಚಾಗಿದೆ. ದೇಶದಲ್ಲಿ ಅದರಲ್ಲೂ ಸಣ್ಣ ಪ್ರಮಾಣದ ಕೈಗಾರಿಕೆಯ ವಲಯದಲ್ಲಿ ಉದ್ಯೋಗ ಹಾಗೂ ಉತ್ಪಾದನಾ ಪರಿಸ್ಥಿತಿಯ ಮೇಲೆ ಇದರ ಪ್ರಭಾವ ತುಂಬ ಪ್ರತಿಕೂಲದ್ದಾಗುವುದಿದೆ.

ಎಲ್ಲ ರೀತಿಯ ಸಬ್ಸಿಡಿ (ಸಹಾಯಧನ)ಗಳನ್ನು ತೆಗೆದು ಹಾಕುವುದೂ 'ಉದಾರೀಕರಣ'ದ ಮತ್ತೊಂದು ಗುಣ. ವಿಶ್ವಬ್ಯಾಂಕು, ಅಂತರರಾಷ್ಟ್ರೀಯ ಹಣಕಾಸು ನಿಧಿ (ಐ.ಎಂ.ಎಫ್.)ಯೂ ಇದನ್ನೇ ಒತ್ತಿ ಹೇಳುತ್ತವೆ. ಸಬ್ಸಿಡಿಗಳನ್ನು ಕಡಿಮೆ ಮಾಡುವುದು ಇಲ್ಲವೇ ರದ್ದುಪಡಿಸುವುದು ಸುಧಾರಣೆಗಳ ನೈಜ ಲಕ್ಷಣ ಎಂದವು ವರ್ಣಿಸಿವೆ. ಅವು ಬಡಜನರಿಗೆ ನೆರವಾಗುವ ಆಹಾರ ಸಬ್ಸಿಡಿಗಳನ್ನೂ ವಿರೋಧಿಸುತ್ತವೆ. ಶ್ರೀಮಂತರಿಗೆ ನೆರವಾಗುವ ರಫ್ತು ಸಬ್ಸಿಡಿಗಳನ್ನೂ ವಿರೋಧಿಸುತ್ತವೆ. 'ಎರಡನೇ ಪೀಳಿಗೆ ಸುಧಾರಣೆಗಳು' ಎನ್ನುವ ಹೆಸರಿನಲ್ಲಿ ಬಜೆಟ್ ಆಹಾರ ಹಾಗೂ ಗೊಬ್ಬರಗಳಿಗೆ ನೀಡುತ್ತಿರುವ ಸಬ್ಸಿಡಿಗಳನ್ನು ಕಡಿಮೆ ಮಾಡಲು ಹೊರಟಿದೆ. ಆಹಾರ ಸಬ್ಸಿಡಿ ಕಡಿಮೆ ಮಾಡುವುದು ಸಾರ್ವಜನಿಕ ಆಹಾರ ವಿತರಣಾ ಪದ್ಧತಿಯ (ಪಿ.ಡಿ.ಎಸ್.) ಮೇಲೆ ವಿಶೇಷವಾಗಿ ಅದನ್ನೇ ಅವಲಂಬಿಸಿರುವ ಬಡಜನರ ಮೇಲೆ ದುಷ್ಪರಿಣಾಮ ಬೀರುತ್ತದೆ. ಗೊಬ್ಬರಗಳಿಗೆ ನೀಡಲಾಗುತ್ತಿರುವ ಸಬ್ಸಿಡಿಗಳನ್ನು ಕಡಿಮೆ ಮಾಡುವುದು ಸಣ್ಣ ಹಾಗೂ ಸೀಮಾ-ರೈತರ ಮೇಲೂ, ಆಹಾರ ಉತ್ಪಾದನೆಯ ಮೇಲೂ ದುಷ್ಪರಿಣಾಮ ಬೀರುತ್ತದೆ.

ಕೆಲವು ವರ್ಷಗಳ ಹಿಂದೆ ಸುಮಾರು ಶೇ. ೨೬ರ ಉನ್ನತಮಟ್ಟದಲ್ಲಿದ್ದ ರಾಷ್ಟ್ರೀಯ ಉಳಿತಾಯ ಪ್ರಮಾಣ ೧೯೯೯-೨೦೦೦ದಲ್ಲಿ ಶೇ. ೨೨ಕ್ಕೆ ಇಳಿದುದೂ ಕಾಳಜಿಯ ವಿಷಯವಾಗಿದೆ. ದೇಶದಲ್ಲಿ ಉಳಿತಾಯ ಪ್ರಮಾಣವನ್ನು ಹೆಚ್ಚಿಸುವುದಕ್ಕೆ ಪ್ರೋತ್ಸಾಹ ನೀಡುವ ಕ್ರಮಗಳನ್ನು ಕೈಗೊಳ್ಳುವ ಬದಲು, ಬಜೆಟ್ ಜಿಪಿಎಫ್ ಮೇಲಿನ ಬಡ್ಡಿ ದರವನ್ನು ಶೇ. ೧೧ರಷ್ಟು ಕಡಿಮೆ ಮಾಡಿ ಉಳಿತಾಯಗಾರರಿಗೆ ವಾಸ್ತವವಾಗಿ ಶಿಕ್ಷೆಯನ್ನೇ ನೀಡಿದೆ. ಜಿಪಿಎಫ್ ಒಂದು ಬಲವಂತದ ರೀತಿಯ ಉಳಿತಾಯ. ಅದು ೧.೦ ಲಕ್ಷದಿಂದ ೫.೦ ಲಕ್ಷ ರೂಪಾಯಿಗಳವರೆಗಿದೆ. ಬಡ್ಡಿ ದರವನ್ನು ಶೇ.೧೧ರಷ್ಟು ಕಡಿಮೆ ಮಾಡುವುದು ಉಳಿತಾಯಗಾರರ ಮೇಲೆ ೧ರಿಂದ ೫ ಸಾವಿರ ರೂಪಾಯಿಗಳಷ್ಟು ತೆರಿಗೆ ಹಾಕಿದಂತಾಗುತ್ತದೆ. ಉಳಿತಾಯಗಾರರಿಗೆ ಎಂಥ



ಇವರ ವಾಪ್ಸು ಸರಿಯಲ್ಲ. ನೋಡಿ, ಅವರ್ಕ್ಕೇ ನಮ್ಮ ''ಜನಪರ'' ಯೋಜನೆಗಳೆಲ್ಲಾ ಹುಚ್ ಆಗುತ್ತಿವೆ!

'ಪ್ರೋತ್ಸಾಹ' ಅಥವಾ ಶಿಕ್ಷೆ! ವಿದೇಶೀ ಬಂಡವಾಳದ ಹೊಳೆ ದೇಶದೊಳಕ್ಕೆ ಭಾರಿ ಪ್ರಮಾಣದಲ್ಲಿ ಹರಿದು ಬರುತ್ತದೆ ಎಂದು ನಿರೀಕ್ಷಿಸಲಾಗಿದೆ. ಅದನ್ನೇ ಅವಲಂಬಿಸಲಾಗಿದೆ. ಆದರೆ ಒಂದು ಅಂಶವನ್ನು ನೆನಪಿನಲ್ಲಿಡಬೇಕು. ಚೀನಾದಂಥ ದೇಶಗಳಲ್ಲೂ ವಿದೇಶೀ ನೇರ ಬಂಡವಾಳ ಹೂಡಿಕೆ ಹೆಚ್ಚಿನ ಪ್ರಮಾಣದಲ್ಲಾಗುತ್ತಿದೆ. [illegible] – [illegible]ರವಾಗಿದೆ. ನಮ್ಮ ದೇಶವನ್ನಾದರೋ [illegible] ಉಳಿತಾಯಕ್ಕೆ ಪ್ರೋತ್ಸಾಹ ನೀಡುವ ಕ್ರಮಗಳನ್ನು ಕೈಗೊಳ್ಳುವ ಬದಲು, ಉಳಿತಾಯವನ್ನು ನಿಗ್ರಹಿಸುವ ಕ್ರಮಗಳನ್ನು ಜಾರಿಗೆ ತರಲಾಗುತ್ತಿದೆ. [illegible] ವಿದೇಶೀ ಬಂಡವಾಳದ ಮೇಲೆ ಸಂಪೂರ್ಣ ಅವಲಂಬನೆಗೆ ದಾರಿ ಮಾಡಿಕೊಡುವ ವಿಧಾನಗಳಲ್ಲೊಂದಷ್ಟೆ.

''ಗ್ರಾಮಾಂತರ ಆರ್ಥಿಕತೆಯನ್ನು, ವಿಶೇಷವಾಗಿ ಕೃಷಿ ಮತ್ತು ತತ್ಸಂಬಂಧಿತ ಚಟುವಟಿಕೆಗಳನ್ನು, ವೃದ್ಧಿಗೊಳಿಸುವ ಅಭಿಪ್ರಾಯವನ್ನು ನಾವು ದೃಢಪಡಿಸಲಿದ್ದೇವೆ'' ಎಂಬ ವಾಗ್ದಾನದೊಂದಿಗೆ ವಿತ್ತಮಂತ್ರಿಗಳು ತಮ್ಮ ಭಾಷಣ ಆರಂಭಿಸಿದರು. ಆದರೆ ಅದೊಂದು ಬೂಟಾಟಿಕೆಯ ಮಾತಾಗಿದ್ದಿತು. ಕೃಷಿ ಬೆಳವಣಿಗೆಯ ಹಣದಲ್ಲಿ ಶೇ. [illegible]ರಷ್ಟು ಕಡಿತ, ಗ್ರಾಮಾಂತರ ವೃದ್ಧಿ ಹಣದಲ್ಲಿ ಶೇ.೧೧ರಷ್ಟು ಕಡಿತ. ಆಹಾರ ಸಬ್ಸಿಡಿಗಳಲ್ಲಿ ಮತ್ತಷ್ಟು ಕಡಿತಗಳನ್ನು ಬಜೆಟ್ ಸಲಹೆ ಮಾಡಿದೆ. ಈ ಅತಿಮುಖ್ಯ ಕ್ಷೇತ್ರಗಳಿಗೆ ಹೆಚ್ಚು ಹಣ [illegible] ಮಾಡುವ ಬದಲು, ಅವುಗಳಿಗೆ ಹೊಸ ಹೆಸರುಗಳನ್ನು ನೀಡಲಷ್ಟೇ ಯತ್ನಿಸಲಾಗಿದೆ. ಯೋಜನೆಗಳ ಪಟ್ಟಿಯನ್ನು ಉದ್ದ ಮಾಡಲಷ್ಟೇ ಯತ್ನಿಸಲಾಗಿದೆ.

ಕಳೆದ ಹತ್ತು ವರ್ಷಗಳಲ್ಲಿ ಭಾರತೀಯ ಆರ್ಥಿಕತೆಯಲ್ಲಿ ಜಿಡಿಪಿಯ 'ವೃದ್ಧಿ' ಸಾಕಷ್ಟು ಉನ್ನತ ಪ್ರಮಾಣದ್ದೇ ಆಗಿದೆ. ಶೇ. ೬ರಷ್ಟು ವಾರ್ಷಿಕ ಸರಾಸರಿ ದರದಲ್ಲಿ ವೃದ್ಧಿಯಾಗುತ್ತಿದೆ ಎಂಬುದು ಸುವಿದಿತ. ಆದರೆ ವಿಷಾದದ ಸಂಗತಿ ಎಂದರೆ ಈ 'ವೃದ್ಧಿ'ಯಾಗಿದ್ದರೂ ಬಡತನದಲ್ಲಿ ಇಳಿತವೇನೂ ಆಗಿಲ್ಲ. ಇದರಿಂದಾಗಿ ಅಸಮಾನತೆ ಹೆಚ್ಚಾಗಿದೆ. ಮನಮೋಹನಸಿಂಗ್‌ರವರೂ ಚಿದಂಬರಂರವರೂ ಉದಾರೀಕರಣದ ದಾರಿ ಹಿಡಿದು ನಡೆದಾಗ, ಅದರಿಂದ ಸಿರಿವಂತರ-ಬಡವರ ನಡುವಿನ ಅಂತರ ಹೆಚ್ಚಾಗುತ್ತದೆ ಮತ್ತು ಬಡವರು ಹೆಚ್ಚು ಕಷ್ಟಕ್ಕೊಳಗಾಗುತ್ತಾರೆ ಎಂಬುದು ಸ್ಪಷ್ಟವಾಗಿದ್ದಿತು. ಬಡವರ ಸಂಕಷ್ಟ ಪರಿಹಾರಕ್ಕಾಗಿ ಅವರು 'ಕೆಲಸಕ್ಕೆ-ಪ್ರತಿಯಾಗಿ-ಆಹಾರ' ಅಥವಾ 'ರೋಜ್ಗಾರ್ ಯೋಜನೆ', 'ಸಾರ್ವಜನಿಕ ವಿತರಣಾ ವ್ಯವಸ್ಥೆ' ಮುಂತಾದ ಕೆಲವು ಸಮಾಧಾನಕರ ಕ್ರಮಗಳನ್ನು ಕೈಗೊಂಡಿದ್ದರು. [illegible] ಬಜೆಟ್ ಈ ಕ್ರಮಗಳನ್ನೂ ತೊಡೆದುಹಾಕಿದೆ. ಶ್ರೀಮಂತರು ಜಾಗತಿಕ ಮಾರುಕಟ್ಟೆಯ ಆಹ್ಲಾದಕರ ವಾತಾವರಣದಲ್ಲಿ ಮೆರೆಯುತ್ತಿರಲಿ. ಬಡವರು ತಮ್ಮ ಯೋಗಕ್ಷೇಮವನ್ನು ತಾವೇ ನೋಡಿಕೊಳ್ಳಲಿ ಎಂಬುದೇ ಈ [illegible] ಧೋರಣೆಯಾಗಿರುವಂತಿದೆ. ಬಡವರು ಇದಕ್ಕೆ ಸಮ್ಮತಿಸುವರೆ ?

[illegible]
[illegible]

## ಖೋತೀ ವಿರುದ್ಧ್‌ಚಾ ಲಢಾ (ಮರಾಠಿ)

ಲೇ: ಚಂದ್ರಕಾಂತ ಅಧಿಕಾರಿ, ಪ್ರ: ಉಷಾ ಚಂದ್ರಕಾಂತ ಅಧಿಕಾರಿ, ಗೋರೆಗಾಂವ್, ರಾಯಗಢ ಜಿಲ್ಲೆ, ಮಹಾರಾಷ್ಟ್ರ

**ಜುಲೈ ೧೯೯೯, ಪುಟ ೮+೧೨೮; ಬೆಲೆ : ರೂ. ೧೦೦**




೧೯೩೭ರ ಸೆಪ್ಟೆಂಬರ್ ೧೭ರಂದು ಅಂದಿನ ಮುಂಬೈ ವಿಧಾನಸಭೆಯಲ್ಲಿ ಡಾ|| ಬಿ. ಆರ್. ಅಂಬೇಡ್ಕರ್ ಅವರು ಮಂಡಿಸಿದ ಒಂದು ಪ್ರಮುಖ ಮಸೂದೆಯ ಹೆಸರು ಖೋತೀ ಪದ್ಧತಿಯನ್ನು ತೆಗೆದುಹಾಕುವ ಮಸೂದೆ. ಅದನ್ನು ತೀವ್ರವಾಗಿ ವಿರೋಧಿಸಿದವರಲ್ಲಿ ಮೊರಾರ್ಜಿ ದೇಸಾಯಿ ಸಹ ಇದ್ದರು. ಬಾಳಾಸಾಹೇಬ ಖೇರರು ಅದನ್ನು ಅನಾಮತ್ತಾಗಿ ವಿರೋಧಿಸದಿದ್ದರೂ, ಅದರ ಪರವಾಗಿದ್ದು ಕಾರ್ಯಗತಗೊಳಿಸಿದ್ದು ಏನೂ ಇಲ್ಲ. ಅಸ್ಪೃಶ್ಯತೆಯ ವಿರುದ್ಧದ ಉಗ್ರ ಪ್ರತಿಭಟನೆಯನ್ನು ಅಂಬೇಡ್ಕರ್ ಆರಂಭಿಸಿದ್ದು ಮಹಾಡಿನ ಚೌದಾರ್ ತಳೆಯ ನೀರನ್ನು ಸಹಸ್ರ ಸಂಖ್ಯೆಯಲ್ಲಿ ಸೇರಿದ್ದ ಮಹಾರರು ಮುಟ್ಟುವ ಮುಖಾಂತರ. ಅವರ ಜನಾಂದೋಲನ ಕಾರ್ಯಕ್ರಮಗಳು ಕೇವಲ ಸಾಮಾಜಿಕ ಪಿಡುಗುಗಳ ವಿರುದ್ಧ ಮಾತ್ರವೇ ಆಗಿರದೆ ಅತ್ಯಂತ ಮೂಲಭೂತವಾದ ಆರ್ಥಿಕ ವ್ಯವಸ್ಥೆಯ ವಿರುದ್ಧವೂ ಆಗಿರುತ್ತಿದ್ದವು. ಸಾಮಾಜಿಕ ಸಂಬಂಧಗಳ ಬದಲಾವಣೆಗೆ ಆರ್ಥಿಕ ತಳಹದಿಯ ಬದಲಾವಣೆಯೂ ಅಗತ್ಯವೆಂದು ಅರ್ಥಶಾಸ್ತ್ರಜ್ಞ ಅಂಬೇಡ್ಕರ್ ಅವರಿಗೆ ಅನುಭವದಿಂದ ಸಿದ್ಧವಾಗಿತ್ತು.

ಜಮೀನ್ದಾರರ ಉಪಟಳವನ್ನು ಕಂಡಿದ್ದ ಅಂಬೇಡ್ಕರ್ ೧೯೨೭ರಿಂದಲೇ ಅದರ ವಿರುದ್ಧ ಹೋರಾಟ ಆರಂಭಿಸಿದ್ದರು. ಆ ವರ್ಷ ಚಿಪಳೂಣ್‌ನಲ್ಲಿ ಮಹಾನ್ ಪರಿಷತ್ ಸಭೆ ನಡೆದಾಗ ಖೋತೀ ಪದ್ಧತಿಯ ವಿಚಾರವೂ ಚರ್ಚೆಗೆ ಬಂದಿತ್ತು. ೧೯೨೭ರ ಡಿಸೆಂಬರ್‌ನಲ್ಲಿ 'ಸಮಾಜ ಕ್ರಾಂತಿ ಪರಿಷತ್ ಸಭೆ' ಮಹಾಡಿನಲ್ಲಿ ಜರುಗಿದಾಗ ಒಂದು ಬ್ರಾಹ್ಮಣ ಕುಟುಂಬಕ್ಕೆ ಸೇರಿದ್ದ ಬಾಪೂ ಸಾಹೇಬ್ ಸಹಸ್ರಬುದ್ಧೇ ಅವರಿಂದ ಮನುಸ್ಮೃತಿಯ ಒಂದು ಪ್ರತಿಗೆ ಅಗ್ನಿಸ್ಪರ್ಶ ನಡೆದಿತ್ತು. ಆ ಸಭೆಯಲ್ಲಿ ಅಂಬೇಡ್ಕರ್ ನುಡಿದದ್ದು ಇದು: ಅಸ್ಪೃಶ್ಯತೆಯು ಸರಳವಾದ ವಿಷಯವಲ್ಲ, ದಾರಿದ್ರ್ಯ ಮತ್ತು ಹೀನಸ್ಥಿತಿ ಎರಡೂ ಅದರಲ್ಲಿದೆ. ಈ ಹೀನ ದೆಸೆಯಿಂದ ಹೊರಬರಬೇಕಾದರೆ ಅಸಮಾನತೆಯ ಆಧಾರದ ಬುಡಕ್ಕೆ ಲಗ್ಗೆ ಇಡಬೇಕು.

'ಖೋತೀ ಪದ್ಧತಿ' ಅಸಮಾನತೆಯನ್ನು ಮಾತ್ರವಲ್ಲ, ಗುಲಾಮಗಿರಿಯನ್ನೇ ಅಸ್ತಿತ್ವಕ್ಕೆ ತಂದಿತ್ತು. ಊರಿನ ಸಾಹುಕಾರ ಕೇವಲ ಜಮೀನಿನ ಒಡೆಯನಾಗಿರದೆ ಅಲ್ಲಿಯ ಹತ್ತಾರು ಕುಟುಂಬಗಳ ಮಾಲಿಕನಂತೆ ವರ್ತಿಸುತ್ತಿದ್ದ. ಅವನ ಅಮಾನುಷ ವರ್ತನೆಗಳು ಒಂದಲ್ಲ, ಹತ್ತಲ್ಲ, ನೂರಾರು. ಅವನ ಮೇಲೆ ಯಾರದ್ದೂ ನಿಯಂತ್ರಣವಿರಲಿಲ್ಲ. ಬ್ರಿಟಿಷ್ ಸರ್ಕಾರವು ಖೋತೀ ಪದ್ಧತಿಯನ್ನು ನೀಚವೆಂದು ಪರಿಗಣಿಸಿದರೂ ಅದನ್ನು ತೆಗೆದುಹಾಕಲು ಸಿದ್ಧವಿರಲಿಲ್ಲ ; ಏಕೆಂದರೆ, ತೆರಿಗೆಯ ವಸೂಲಿ ಸಾಹುಕಾರನ ಮುಖಾಂತರ ನಡೆಯುತ್ತಿತ್ತು. ಯಾವ ಕೂಲಿಯನ್ನೂ ನಿರೀಕ್ಷಿಸದೆ ಒಡೆಯನ ತೊತ್ತುಗಳಾಗಿ ದುಡಿಯುತ್ತಿದ್ದ ಕುಟುಂಬಗಳ ಬಡತನ, ಅನಕ್ಷರತೆ, ಮುಂತಾದುವಲ್ಲದೆ ಸಾಹುಕಾರನ ಎಲ್ಲೆಯಿಲ್ಲದ ದೌರ್ಜನ್ಯಕ್ಕೂ ಬಲಿಯಾಗುವ ಸನ್ನಿವೇಶವು ಮಹಾರಾಷ್ಟ್ರದ ರತ್ನಾಗಿರಿ, ಚಿಪಳೂಣ್ ಮತ್ತು ಕೊಲಾಬಾ (ಈಗಿನ ರಾಯಗಢ) ಜಿಲ್ಲೆಗಳಲ್ಲಿ ವ್ಯಾಪಕವಾಗಿತ್ತು. ಇದನ್ನು 'ಕೊಂಕಣ ರಕ್ತ ಶೋಷಣೆ' ಎಂದು ಅಂಬೇಡ್ಕರ್ ಕರೆದಿದ್ದರು. ಆದರಿಂದ ಜನರನ್ನು ಪಾರುಮಾಡಲು ವಿಧಾನಸಭೆಯಲ್ಲಿ ಮಸೂದೆ ಮಂಡನೆ ಮಾಡುವ ಮುನ್ನ ಒಂದು ದಶಕಕ್ಕೂ ಹೆಚ್ಚು ಕಾಲ ಅಂಬೇಡ್ಕರ್ ರೈತಾಪಿ ಜನರನ್ನು ಸಂಘಟಿತ ಹೋರಾಟಕ್ಕೆ ಇಳಿಸಿದ್ದರು. ಸ್ವತಃ ತಾವೇ ಸಂಘಟಕರಾಗಿ ದುಡಿದುದಲ್ಲದೆ ಸುಬೇದಾರ ಸವಾದ್ಕರ್, ಅನಂತ ವಿನಾಯಕ ಚಿತ್ರೆ (ಭಾಯಿ ಚಿತ್ರೆ), ನಾನಾಸಾಹೇಬ್ ಟಿಪ್‌ಣೀಸ, ನಾಗೂ ಪಾಟೀಲ್, ಚಂದ್ರಕಾಂತ ಅಧಿಕಾರಿ, ಮುಂತಾದ ಅವರ ಸಹಚರರನ್ನು ಹೋರಾಟದ ಕಣದಲ್ಲಿ ಭಾಗಿಗಳನ್ನಾಗಿಸಿದ್ದರು. ಆ ಹತ್ತು-ಹದಿನೈದು ವರ್ಷಗಳ ಅಮೋಘ ಹೋರಾಟವನ್ನು ಸುದೀರ್ಘವಾಗಿ ದಾಖಲಿಸುವ ಉತ್ತಮ ಪುಸ್ತಕ 'ಖೋತೀ ವಿರುದ್ಧ್ ಚಾ ಲಢಾ'. ಅಧಿಕಾರಿಯವರು ಜುಲೈ ೧೯೮೯ರಲ್ಲಿ ತೀರಿಕೊಳ್ಳುವ ವೇಳೆಗೆ ಈ ಮರಾಠಿ ಪುಸ್ತಕದ ಹಸ್ತಪ್ರತಿಯನ್ನು ಸಿದ್ಧಪಡಿಸಿದ್ದರಾದರೂ ಅವರ ಜೀವಿತ ಕಾಲದಲ್ಲಿ [illegible]

ಅಧಿಕಾರಿಯವರ ಕುಟುಂಬದವರು ಈ ಪುಸ್ತಕವನ್ನು ಪ್ರಕಟಿಸಿ ಮಹದುಪಕಾರ ಮಾಡಿದ್ದಾರೆ. ಅಂಬೇಡ್ಕರರ ನೇತೃತ್ವದಲ್ಲಿ ರೈತಾಪಿ ಜನರ ಐತಿಹಾಸಿಕ ಹೋರಾಟದ ವಿಕ್ರಮವನ್ನು ದಾಖಲಿಸಲು ಅನುವು ಮಾಡಿಕೊಟ್ಟಿದ್ದಾರೆ. ಸಹಜವಾಗಿಯೇ ಇದು ಕನ್ನಡದಲ್ಲಿ ಲಭ್ಯವಾಗುವಂತಾಗಬೇಕೆಂಬ ಆಶಯ ಇದೆ.

ಕೌಟಿಲ್ಯನ ಕಾಲದಿಂದಲೂ ಸರ್ಕಾರದ ಬೊಕ್ಕಸಕ್ಕೆ ತುಂಬಬೇಕಾದ ತೆರಿಗೆಯನ್ನು ವಸೂಲುಮಾಡಲು ಗ್ರಾಮಗಳಲ್ಲಿ ಕೆಲವು ಅಧಿಕಾರಿಗಳನ್ನು ನೇಮಕಮಾಡುವ ಪದ್ಧತಿ ನಮ್ಮಲ್ಲಿದೆ. ಈ ಕೆಲಸದ ಜೊತೆಗೆ ಅವರು ತಮ್ಮ ಸ್ವಂತದ ಕಸುಬನ್ನು ಇರಿಸಿಕೊಂಡಿರಬಹುದು ಅಥವಾ ಸ್ವತಃ ರೈತರಾಗಿಯೂ ಇರಬಹುದು. ವಸೂಲಾದ ತೆರಿಗೆಯ ಒಂದು ನಿರ್ದಿಷ್ಟ ಭಾಗವೂ ಅವರಿಗೆ ಸೇರುವುದಿದೆ. ತೆರಿಗೆದಾರನು ಈ ಅಧಿಕಾರಿಗೆ ಪುಕ್ಕಟೆಯಾಗಿ ಅನೇಕ ಸೇವೆಗಳನ್ನು ಮಾಡಬೇಕೆಂಬ ನಿಯಮವೂ ಇರುತ್ತದೆ. ತೆರಿಗೆ ವಸೂಲಿ ಮಾಡುವ ಅಧಿಕಾರಿಯೂ ಕ್ರಮೇಣ ಸ್ವತಂತ್ರ ಜಮೀನ್ದಾರನಾಗಿ ತನ್ನ ಪಾಳೆಗಾರಿ ಪ್ರಭುತ್ವವನ್ನು ಚಲಾಯಿಸುವ ಮಟ್ಟ ತಲುಪುತ್ತಾನೆ. ಆಗ ಅವನ ಅಧಿಕಾರದ ವ್ಯಾಪ್ತಿಯು ಇಷ್ಟೇ ಎನ್ನುವಂತಿರುವುದಿಲ್ಲ. ಕೊಂಕಣದಲ್ಲಿ ಹೀಗಿರುತ್ತಿದ್ದ ಪದ್ಧತಿಗೆ ಖೋತೀ ಎಂಬ ಹೆಸರಿತ್ತು. ಪ್ರತಿಯೊಬ್ಬ ಖೋತಿಯೂ ಯಜಮಾನನಿಗಾಗಿ ವರ್ಷಕ್ಕೆ ಇಂತಿಷ್ಟು ದಿನಗಳ ಕೂಲಿಯನ್ನು ಪುಕ್ಕಟೆಯಾಗಿ ಮಾಡಬೇಕೆಂಬ ನಿಯಮವೂ ಇರುತ್ತಿತ್ತು. ೧೮೭೦ರ ಸೆಟಲ್‌ಮೆಂಟ್ ಆ್ಯಕ್ಟ್ ಪ್ರಕಾರ ಇದು ಕಾನೂನು ಎನಿಸಿಕೊಂಡಿತು. ಆಗಲೇ ತಳ ಊರಿದ್ದ ಸರ್ವಾಧಿಕಾರಕ್ಕೆ ಇದು ಕಾನೂನಿನ ರಕ್ಷಣೆಯನ್ನು ಒದಗಿಸಿಕೊಟ್ಟಿತು. ಉತ್ಪನ್ನದ ಒಂದು ಭಾಗವನ್ನು ಯಜಮಾನನಿಗೆ ಕೊಡುವುದು ಮೊದಲಿನಿಂದಲೂ ಇತ್ತು, ಆದರೆ ಈಗ ಅದು ಅಧಿಕಗೊಂಡಿತು.

ಖೋತೀಯ ಬಂಧನಕ್ಕೆ ಸಿಲುಕಿದ್ದವರಿಗೆ ಅದರಿಂದ ಹೊರಬರುವ ಸಾಧ್ಯತೆಯೇ ಕಾಣದಿದ್ದ ಸನ್ನಿವೇಶದಲ್ಲಿ ಅಂಬೇಡ್ಕರ್ ೧೯೨೯ರಲ್ಲಿ ದಾಪೂಲಿ ಮತ್ತು ಚಿಪಳೂಣ್‌ಗಳಲ್ಲಿ ಸಭೆಗಳನ್ನು ಸೇರಿಸಿದ್ದು ಒಂದು ಮಹತ್ವದ ಘಟನೆ. ಕುಣಬಿ, ಮರಾಠಾ, ಮಹಾರ್, ಚಾಂಭಾರ್ ಮುಂತಾದ ಎಲ್ಲ ಜಾತಿಗಳವರೂ ಅಲ್ಲಿ ಸೇರಿದ್ದರು. ಸ್ವಾರಸ್ಯದ ಸಂಗತಿಯೆಂದರೆ ಯಜಮಾನರ ಪೈಕಿ ಕೂಡ ಬ್ರಾಹ್ಮಣ, ಮರಾಠಾ, ಮುಸಲ್ಮಾನ, ಮುಂತಾದ ಎಲ್ಲ ಪಂಗಡದವರೂ ಇದ್ದರು.

೧೯೩೧ರಿಂದ ೩೮ರವರೆಗೆ ವಿವಿಧ ಸ್ವರೂಪಗಳಲ್ಲಿ ಹೋರಾಟವನ್ನು ಹಮ್ಮಿಕೊಳ್ಳಲಾಗಿತ್ತು. ಹಳ್ಳಿಗಳಲ್ಲಿ ಕಾಲಿಡಲು ಸಹ ನಿರ್ಬಂಧವಿರುತ್ತಿದ್ದ ಕಾಲದಲ್ಲಿ ಚಿತ್ರೆ ಮತ್ತು ಟಿಪ್‌ಣೀಸರು ಅದ್ಭುತವಾದ ಸಾಹಸಗಳನ್ನು ಮಾಡಿ ಸಂಘಟನೆಯನ್ನು ಬಲಪಡಿಸಿದರು. ಎಸ್. ಜಿ. ಸರ್‌ದೇಸಾಯಿ ಮತ್ತು ಶಾಮರಾವ್ ಪರುಳೇಕರರಂತಹ ಕಮ್ಯುನಿಸ್ಟ್ ಕಾರ್ಯಕರ್ತರು ಇದಕ್ಕೆ ಕೈ ಜೋಡಿಸಿ ಇಡೀ ವಾತಾವರಣಕ್ಕೆ ಒಂದು ಹೊಸ ಆಯಾಮ ನೀಡಿದರು. ಮುಂಬೈನಲ್ಲಿ ಇದೇ ಸಂಬಂಧದಲ್ಲಿ ಸಾವಿರಾರು ಮಂದಿ ರೈತರ ಮೆರವಣಿಗೆಯನ್ನು ನಡೆಸಲಾಗಿತ್ತು. ಅಂಬೇಡ್ಕರ್ ಅವರ ಮಸೂದೆಯನ್ನು ರತ್ನಾಗಿರಿಯ ಪ್ರತಿನಿಧಿ ಕರಂದೀಕರ್ ಕಟುವಾಗಿ ಟೀಕಿಸಿ ಮಸೂದೆಯ ಮಂಡನೆಗೆ ಅವಕಾಶ ನೀಡಿದ್ದೇ ಸರಿಯಲ್ಲವೆಂದು ವಾದಿಸಿದ್ದರು.

ಮಸೂದೆಯು ಶಾಸನವಾಗುವ ಮೊದಲೇ ಸರ್ಕಾರವು ಮುರಿದುಬಿತ್ತು. ಆದರೆ ಜನವ್ಯಾಪೀ ಹೋರಾಟವು ಅಗಾಧ ಪ್ರಮಾಣದಲ್ಲಿ ನಡೆದು ಜಮೀನ್ದಾರರ ಹದ್ದಿಲ್ಲದ ವರ್ತನೆಗೆ ಕಡಿವಾಣ ಹಾಕಿತು.

ವಕೀಲರಾಗಿ ರೈತಾಪಿ ಜನರ ಪರವಾಗಿ ವಾದ ಹೂಡುತ್ತಿದ್ದ ಚಂದ್ರಕಾಂತ ಅಧಿಕಾರಿಯವರು ಅಂಬೇಡ್ಕರರ ನೇತೃತ್ವದಲ್ಲಿ ಮೌಲಿಕವಾದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. ಸುರ್ಬಾನಾನಾ ಅವರ ವಿರುದ್ಧವಾಗಿ ಮುಂಬೈ ಸರ್ಕಾರವು ಹತ್ತಾರು ದಾವೆಗಳನ್ನು ಹೂಡಿ ಅವರನ್ನು ದಸ್ತಗಿರಿ ಮಾಡಿದ್ದಿತು. ಆಗೆಲ್ಲಾ ಅವರು ಅಂಬೇಡ್ಕರ್ ಅವರ ಮಾರ್ಗದರ್ಶನಕ್ಕಾಗಿ ಕಾಯುತ್ತಿದ್ದು ಅವರ ಸೂಚನೆಯಂತೆ ಮುಂದುವರೆಯುತ್ತಿದ್ದರು. ಜನರ ನಡುವೆ ನಿಂತು, ಜನರಿಗಾಗಿ ಹೋರಾಟ ನಡೆಸುವುದೆಂದರೇನು ಎಂಬುದನ್ನು ತಿಳಿಯಲು ಅಂಬೇಡ್ಕರರ ಈ ಹೋರಾಟದ ಇತಿಹಾಸವು ಒಂದು ಅಪೂರ್ವ ಕೃತಿಯಾಗಿದೆ.

– ಜಿ. ಆರ್.

## ನಮಸ್ಕಾರ

೧

ಎಳೆ ಬಿಸಿಲು ಮಂಜು ಮಳೆಯೊಳಗೆ
ಬೆಳಕು ಕಾಣದೆ ಸೂರ್ಯ
ನಮಸ್ಕಾರ ಮಾಡುವ ಮಂದಿ
ತಲೆಯೊಳಗೆ ಕೊಡಲಿಗಾನವೇ ಮೋಹನ ಮುರಳಿ

ಏನು ಮಾಡುವುದು? ಎಂತು ಸುರಿಯುವುದು?
ಈ ಚಿಗುರು, ಹೂ, ಕಾಯಿ
ಹಬ್ಬಿನಿಂತ ಆಸಷ್ಟಗಲ ಆಕಾಶವನ್ನು
ಬೇರೊಳಗಿನ ಮಣ್ಣ ರಸವನ್ನ ?
ಮಿಂಚಿನ ಸಂಚಿಗೆ ಫಳಿಗೆಯಿಲ್ಲ
ಕಾರ್ಯಾರಂಭ ಮಾಡಬೇಕಷ್ಟೆ-
ಎಲೆತುದಿ ಹನಿಯನ್ನು ರಮಿಸಿ
ಮತ್ತೊಂದು ಸೂರ್ಯ ನಮಸ್ಕಾರ ಮಾಡಿ !

೨

ಮರದ ಕನಸು-ಮೋಡದಲಿ ತೇಲಾಡುವ ಬಗೆ
ಭೂಮಿಯಲಿ ಈಜಾಡುವ ಬಗೆ....
ಪೂರ್ವ ಪಶ್ಚಿಮಗಳಲಿ ಕಣ್ಣು ನೆಟ್ಟವನಿವನು
ಹಗಲ ಸುಕ್ಕು ಕಾಣಬಹುದೆ
ಹಗಲ ಸುಕ್ಕು ನಿಲುಕಬಹುದೆ -
ಇವನಿಗೆ? ಇವನ ಅಮಾಯಕ ನಿಲುವಿಗೆ?



ಇಂತದೊಂದು ಚಣದೊಳಗೆ
ಹಣತೆಯ ಬೆಳಕಿಗೆ ಕುರುಡಾಗಿ
ಸವಾಲು ಹಾಕಿದವರಾರು?
ಚಿನ್ನದುಂಗುರ ತೊಟ್ಟ ಕೈಯಲಿ ನಮಸ್ಕಾರ ಮಾಡಿದವರು?!

೩

ನೆಳಲಲಿ ನಿಂತು ದಣವಾರಿಸಿಕೊಂಡವರ
ಕಣ್ಣೊಳಗೆ, ನೆನಪೊಳಗೆ
ರಾಧೆ ಕಾಣದಾದಳು
ಕೊಳಲು ಮೋಹನ ಮುರಲಿ ಎಲ್ಲ ಚೂಪಾಗಿ
ಎದುರು ನಿಂತವರ....ರಕ್ತ ಹೀರಿ,

ಒಂದು ಮರದ ಕನಸು (ಏನಿತ್ತು?)
ಹಸಿರು ನೆಟ್ಟವರ ಕಣ್ಣೊಳಗೇ ಉರುಳಿ ಬಿತ್ತು.

೪

ಮತ್ತೆ-
ಕನಸನ್ನು ಹೆತ್ತವಳ ಕಣ್ತುಂಬ
ಬೆಳಕಿನೆಚ್ಚರ ಪ್ರೀತಿ.

**ಕೆ. ನರಸಿಂಹಮೂರ್ತಿ**
ಕನ್ನಡ ಉಪನ್ಯಾಸಕ, ಶ್ರೀ ಕೊಂಗಾಡಿಯಪ್ಪ ಪದವಿ ಪೂರ್ವ
ಕಾಲೇಜು, ದೊಡ್ಡ ಬಳ್ಳಾಪುರ-೫೬೧೨೦೩., ಬೆಂಗಳೂರು
ಗ್ರಾಮಾಂತರ

## ಈ ನಮ್ಮ ಹೊಲದಲ್ಲಿ...

ಮುಳ್ಳಿನಾಗಿ ಬೇಲಿ ಇಲ್ಲ
[illegible]
[illegible]
[illegible]
ಮಳೆಯನ್ನೇ ಕಂಡಿಲ್ಲ!
ಒಂದು ಹನಿಯನ್ನೂ ಉಂಡಿಲ್ಲ
ನೇಗಿಲು ಒಮ್ಮೆಯೂ
ಮೊನೆ ಮೆಟ್ಟಿ ಮುತ್ತಿಟ್ಟಿಲ್ಲ.
ಮುದಿ ಮಣ್ಣಿನೆದೆ ಮೇಲೆ
ಶತ ಶತಮಾನಗಳ ಪಾಪಿ ಕಳೆ!
ಹಸಿರಿನ ಹೆಸರೇ ಇಲ್ಲ
ಇನ್ನು ತೆನೆ ಬಸಿರ ನಿಟ್ಟುಸಿರೆಲ್ಲಿ ?
ಗಿಲೀಟು ಮುಳ್ಳುಗಳಿಗೆ
ಮಚ್ಚು ಕುಡುಗೋಲಗಳ
ಎಚ್ಚರವೆಲ್ಲಿ ?
ಬಿತ್ತುವದಕ್ಕಿರುವುದು ಅಣು ಬೀಜಗಳು!
ಬೆಳೆಯುವುದು ಬೆಂಕಿ
ಉಳಿಯುವುದು ಬೂದಿಯಲ್ಲವೇ?!

## ಪುಟ್ಟಿಯ ಆಶಯ

ಅವ್ವ ಬಾರದೇನೆ ಯುಗಾದಿ
ನಮ್ಮ ಗುಡಿಸಿಲ ಅಂಗಳಕೆ
ಬಾರದೇನೆ ಯುಗಾದಿ
ಮನೆಯ ಮುಂದೆ ಅಗ್ಗವಾಗಿ ಸಿಕ್ಕ
ಸಗಣಿಯ ಸಾರಿಸಿ ಅಗಲಗಲ
ರಂಗೋಲೆಯ ಬಿಡಿಸಿ ಮನಗಳ ತುಂಬಿ
ಮಾವು ಬೇವುಗಳ ತೋರಣ ಕಟ್ಟಿದಾ ಕರೆಗೆ
ಓಗೊಟ್ಟು ಬಾರದೇನೆ ಯುಗಾದಿ
ಎದುರು ಮನೆಯ ಅಕ್ಕ
ಕೊಟ್ಟ ಅಂಗಿಯ ತೊಟ್ಟು
ಸಿಹಿ ಹೂರಣದ ನೆನಪಿಗೆ ಮೆಲುಕು ಹಾಕುತ್ತಾ
ಬಾಯಿ ಚಪ್ಪರಿಸುವ
ಕರೆಗೆ ಓಗೊಟ್ಟು ಬಾರದೇನೆ ಯುಗಾದಿ
ಅಜ್ಜಿಯ ಮಡಿಲ ಸೇರಿ
ಕಥೆಯ ಕೇಳಿ ಆಗರ
ತ್ಸಾಪೆ ಹಾಕಿದ ದೇವರ ಪಟದ ಮುಂದೆ
ಒಂದಿಷ್ಟು ಎಣ್ಣೆ ಹಾಕಿ ದೀಪ ಹಚ್ಚಿ
ಸಾಂಬ್ರಾಣಿಯ ಸುವಾಸನೆಗೆ ಬಾರದೇನೆ ಯುಗಾದಿ
ತಪ್ಪು ಹೆಜ್ಜೆ ಹಾಕುತ್ತಾ ಬಂದ
ಪುಟ್ಟ ತಂಗಿಯ ನಗುವನರಸಿ ಬಂದ
ಸೂರ್ಯನ ಕರೆಗೆ ಓಗೊಟ್ಟು ಬಾರದೇನೆ ಯುಗಾದಿ
ಹಸಿರಾಗದೇನೆ ನಮ್ಮೀ ಅಂಗಳ
ಚಿಗರೊಡೆದ ಚೈತ್ರ ಮಾಸದ ಚಿಗುರಿಗೆ
ಹರುಷದ ಹೊನಲ ಚೆಲ್ಲಿ
ತರತರದ ಹೂ ಗೊಂಚಲುಗಳು
ನನ್ನ ಮುಡಿಯೇರಿ ನಲಿವಿನಿಂದ
ತಲೆ ಎತ್ತಿ ನೋಡಿ ಒಂದು ಬಾರಿ ಆಗಸದಾ ಎತ್ತರಕೆ
ಏಣಿ ಹಾಕಿ ಕರೆಯುವಲ್ಲಿ ಬಾರದೇನೆ ಯುಗಾದಿ
ಅಪ್ಪನ ಇಂಗಿದ ತೋಳ್ ಕಟ್ಟಿಗೆ
ಬೊಚ್ಚು ಬಾಯಿಂದ ನಗೆಯನ್ನು
ಬೀರಿದ ಅಜ್ಜನ ಬಂದಿಯ
ಸಗ್ಗದ ಸುಖದ ಹಿಗ್ಗನ್ನು ತೋರಿದಾ
ಭವಿಷ್ಯದಾ ಬಾಳಿಗೆ ಬಾರದೇನೆ ಯುಗಾದಿ
ಹೊಸ ವರುಷಕ್ಕೊಂದೆ ಬಾರಿ
ಬರುವ ಈ ಯುಗಾದಿ
ಹೊಸತನದ ಬದುಕ ನೀಡಿ
ವರ್ತಮಾನದ ಹಗಲಿಗೆ
ಚೈತನ್ಯ ತರದೇನೆ
ಅವ್ವ ಚೈತನ್ಯ ತರದೇನೆ ಯುಗಾದಿ

**ಹಂಸಾ. ಆರ್**
[illegible]
[illegible]



[illegible]
[illegible]
[illegible]

# ಮಾನವೀಯತೆಯ ಬೆಳಕು: ಅಸಗರ್ ಅಲಿ ಇಂಜಿನಿಯರ್

''ಜನರನ್ನು ಕೊಂದ ಖಡ್ಗಗಳ ಮೇಲೆ ಶಾಂತಿ ಮಂತ್ರಗಳನ್ನೇಕೆ ಕೊರೆದಿದ್ದಾರೆ?'' ಕವಿ ಶಿವನ ಪ್ರಶ್ನೆ ಇದು. ಈ ಪ್ರಶ್ನೆಯನ್ನು ಮತ್ತೆ ಕೇಳಬೇಕಾಗಿ ಬಂದಿದೆ. ಧರ್ಮಾಂಧತೆಯ ಕರಿನೆರಳಿನ ವಿರುದ್ಧ ಹೋರಾಟ ನಡೆಸಿದ ಕತ್ತಲೆಯ ಮಧ್ಯೆಯೂ ಬೆಳಕಿನ ದೀಪ ಹಿಡಿದ ಅಸಗರ್ ಅಲಿ ಇಂಜಿನಿಯರ್ ಅವರ ಮೇಲೆ ಹಲ್ಲೆಯಾಗಿದೆ. 'ಹಿಂದೂ, ಮುಸ್ಲಿಂ, ಸಿಖ್ಖರ ನಡುವೆ ನಾನು ಮನುಷ್ಯರನ್ನು ಆಯ್ಕೆ ಮಾಡಿಕೊಳ್ಳುತ್ತೇನೆ' ಎಂಬ ಕವಿ ಮಾತಿನಂತೆ ಸದಾ ಮನುಷ್ಯತ್ವವನ್ನು ಅರಸಿದ, ಮಾನವೀಯತೆಯನ್ನು ಹರಡುತ್ತಾ ಹೊರಟವರ ಮೇಲೆ ಕಲುಷಿತ ಮನಸ್ಸುಗಳು ಕತ್ತಿ ಝಳಪಿಸಿವೆ.

ಪೋಲೀಸರಿಗೆ ಕೋಮುಸೌಹಾರ್ದತೆಯ ಬಗ್ಗೆ ಭೂಪಾಲದಲ್ಲಿ ಉಪನ್ಯಾಸ ನೀಡಿ ಮುಂಬೈಗೆ ಹಿಂತಿರುಗುತ್ತಿದ್ದ ಅಸಗರ್ ಆಲಿ ಅವರನ್ನು ವಿಮಾನದಲ್ಲಿ, ವಿಮಾನ ನಿಲ್ದಾಣದಲ್ಲಿ ನಿಲ್ಲಿಸಿ ಘೋರವಾಗಿ ಹಲ್ಲೆ ನಡೆಸಿದ ಧರ್ಮಾಂಧರು ಕೊನೆಗೆ ವಿಮಾನ ನಿಲ್ದಾಣಕ್ಕೆ ಸಮೀಪದಲ್ಲಿಯೇ ಇರುವ ಅವರ ಮನೆ, ಕಚೇರಿಗೂ ನುಗ್ಗಿ ಅಲ್ಲಿದ್ದ ದಾಖಲೆಗಳನ್ನು ಸುಟ್ಟಿದ್ದಾರೆ. ಅವರ ಬರಹಗಳಿಗೆ ಬೆಂಕಿ ಇಟ್ಟಿದ್ದಾರೆ. ಮನೆ, ಕಚೇರಿಯಲ್ಲಿ ಕಂಡ ಪ್ರತಿಯೊಂದನ್ನೂ ನಾಶ ಮಾಡಿದ್ದಾರೆ.

ಭಾರತ ವಿಭಜನೆಯ ನಂತರ ನಡೆದ ಧಾರುಣ ಘಟನೆಗಳನ್ನು ಕಂಡು ತಲ್ಲಣಿಸಿಹೋದ ಅಸಗರ್ ಆಲಿ ಅವರು ಹೃದಯಗಳನ್ನು ಹತ್ತಿರಕ್ಕೆ ತರುವ ಬಗ್ಗೆ ಯೋಚನೆ ಮಾಡಿದವರು. ವಿಭಜನೆಯ ನಂತರದ ಮೊತ್ತ ಮೊದಲ ಕೋಮುಗಲಭೆ ೧೯೬೧ರಲ್ಲಿ ಜಬಲ್‌ಪುರದಲ್ಲಿ ನಡೆದಾಗ ಅಸಗರ್ ಆಲಿ ಅವರು ಇನ್ನು ಜನರ ಮಧ್ಯೆ ನನ್ನ ಕೆಲಸ ಎಂದು ಭಾವಿಸಿ ಕೋಮುವಾದದ ವಿರುದ್ಧ ಹೋರಾಡಲು ಅಣಿಯಾದವರು.

ಇಂದೋರ್‌ನಲ್ಲಿ ಇಂಜಿನಿಯರಿಂಗ್ ಓದುತ್ತಿದ್ದ ಇವರು ಈ ಕೋಮುಗಲಭೆಗಳಿಂದ ತಲ್ಲಣಿಸಿ ತಮ್ಮಂತೆ ತಲ್ಲಣಿಸಿದವರನ್ನೆಲ್ಲಾ ಒಟ್ಟುಗೂಡಿಸಿದರು. ಜಬಲ್‌ಪುರ, ದುರ್ಗಾಪುರ, ಜಮಶೆಡ್‌ಪುರ, ರಾಂಚಿ ಹೀಗೆ ಒಂದರ ಬೆನ್ನ ಹಿಂದೆ ಒಂದರಂತೆ ಕೋಮುಗಲಭೆಗಳು ಸ್ಫೋಟಿಸುತ್ತಾ ಕಣ್ಣೀರು ಹರಡುತ್ತಾ ಹೋದಾಗ 'ಭ್ರಾತೃತ್ವದ ದನಿ' (ವಾಯ್ಸ್ ಆಫ್ ಬ್ರದರ್‌ಹುಡ್) ಸಂಘಟನೆ ಸ್ಥಾಪಿಸಿದರು.

ಅಲ್ಲಿಂದ ಇಲ್ಲಿಯವರೆಗೆ ಅಸಗರ್ ಆಲಿ ಅವರದ್ದು ಕೋಮುವಾದದ ವಿರುದ್ಧ ನಿಲ್ಲದ ಹೋರಾಟ. ಈ ಕಾರಣಕ್ಕಾಗಿಯೇ ಕೋಮುವಾದಿಗಳ ಕೆಂಗಣ್ಣು ಸದಾ ಅವರ ಮೇಲೆ.

### ಬೆಳಕಿಗಾಗಿ ಸಂಪರ್ಕಿಸಿ

*'ದೂರದಲ್ಲಿ ಇದ್ದವರನು ಹತ್ತಿರಕೆ ತರಬೇಕು' ಎಂಬ ಕನಸು ಕಂಡವರು ಅಸಗರ್ ಆಲಿ ಇಂಜಿನಿಯರ್. ಎರಡು ಧರ್ಮಗಳ ನಡುವೆ ಇರುವ ಕಂದರದ ನಡುವೆ ಸೇತುವೆ ಕಟ್ಟಲು ಇವರು ಸತತವಾಗಿ ಶ್ರಮಿಸುತ್ತಿದ್ದಾರೆ. ಪತ್ರಿಕೆಗಳಿಗೆ ನಿರಂತರವಾಗಿ ಕೋಮುವಾದದ ಅಪಾಯಗಳ ಬಗ್ಗೆ ಲೇಖನಗಳನ್ನು ಬರೆಯುತ್ತಾ ಬಂದಿದ್ದಾರೆ. ಇದಲ್ಲದೆ 'ಸೆಂಟರ್ ಫಾರ್ ಸ್ಟಡಿ ಆಫ್ ಸೊಸೈಟಿ ಅಂಡ್ ಸೆಕ್ಯುಲರಿಸಂ' ಎಂಬ ಸಂಸ್ಥೆ ಸ್ಥಾಪಿಸಿ ಆ ಮೂಲಕ ಕೋಮುಸೌಹಾರ್ದದ ಹಲವು ಕೆಲಸಗಳನ್ನು ನಡೆಸಿದ್ದಾರೆ.*

*ಈ ಪೈಕಿ ಪ್ರಮುಖವಾದದ್ದು 'ಇಂಡಿಯನ್ ಜರ್ನಲ್ ಆಫ್ ಸೆಕ್ಯುಲರಿಸಂ' ಎಂಬ ತ್ರೈಮಾಸಿಕದ ಪ್ರಕಟಣೆ. ಇದೇ ಅಲ್ಲದೆ 'ಸೆಕ್ಯುಲರ್ ಪರ್ಸ್‌ಪೆಕ್ಟಿವ್' ಎಂಬ ಪಾಕ್ಷಿಕದ ಪ್ರಕಟಣೆ. ಅಲ್ಲದೆ ಕೋಮು ಆತಂಕ ಹುಟ್ಟಿದ ಪ್ರತಿ ಸಂದರ್ಭದಲ್ಲಿ ಜನರೊಡನೆ ಬೆರೆತು ಅವರ ನೋವುಗಳನ್ನು ಕಂಡಿರಿಸಿದ್ದಾರೆ. ಸಮೀಕ್ಷೆ ನಡೆಸಿದ್ದಾರೆ. ಸುಮಾರು ೧೩ ಕೃತಿಗಳನ್ನು ಹೊರತಂದಿದ್ದಾರೆ. ಈ ಪೈಕಿ ಮಹಿಳೆಯರ ಮೇಲೆ ಕೋಮುಗಲಭೆಗಳ ಪರಿಣಾಮ, ಮುಂಬೈನ ಕೋಮುಗಲಭೆ ಪೀಡಿತ ಪ್ರದೇಶಗಳಲ್ಲಿ ಮಕ್ಕಳ ಅನುಭವ, ಭಾರತೀಯ ಮುಸ್ಲಿಂ ಮಹಿಳೆಯರಲ್ಲಿ ಶಿಕ್ಷಣ ಹಾಗೂ ಮಾಧ್ಯಮದ ಬಗೆಗಿನ ಅರಿವಿನ ಬಗ್ಗೆ ಸತ್ಯಾಂಶ, ವಿದ್ಯಾರ್ಥಿಗಳು ಮತ್ತು ಕೋಮುವಾದ, ಪ್ರಮುಖ ಪುಸ್ತಕಗಳು.*

*ವಿವರಗಳಿಗೆ.*

**ಅಸಗರ್ ಆಲಿ ಇಂಜಿನಿಯರ್**

ಸೆಂಟರ್ ಫಾರ್ ಸ್ಟಡಿ ಆಫ್ ಸೊಸೈಟಿ ಅಂಡ್ ಸೆಕ್ಯುಲರಿಸಂ, ೯ಬಿ, ಹಿಮಾಲಯ ಅಪಾರ್ಟ್‌ಮೆಂಟ್ಸ್,
೬ನೇ ರಸ್ತೆ, ಸಾಂತಾಕ್ರೂಜ್(ಇ) ಮುಂಬೈ-೪೦೦೦೫೫ ದೂರವಾಣಿ: [illegible]

ಹಿಂದೂ ಮತ್ತು ಮುಸ್ಲಿಂ ಕೋಮುವಾದದ ಎರಡೂ ಕರಾಳ ಮುಖಗಳನ್ನು ಬಯಲಿಗೆಳೆದವರು. ಅವರು ಮುಸ್ಲಿಂರಲ್ಲಿಯೇ ಬೋಹ್ರಾ ಪಂಗಡದಲ್ಲಿ ಇರುವ ಅತ್ಯಂತ ಧರ್ಮಾಂಧತೆಯ ವಿರುದ್ಧ ಸೆಣಸಿದವರು.

ಕೋಮುವಾದಿಗಳು ಇವರ ಮೇಲೆ ಹಲವಾರು ಬಾರಿ ಹಲ್ಲೆ ನಡೆಸಿದ್ದಾರೆ. ನಾಲ್ಕು ಬಾರಿ ಜೀವ ತೆಗೆಯಲು ಮುಂದಾಗಿದ್ದಾರೆ. ಜಾತಿಯಿಂದ ಬಹಿಷ್ಕಾರ ಹಾಕಿದ್ದಾರೆ. ಆದರೆ ಅವರದ್ದು ನಿಲ್ಲದ ಪಯಣ. ''ನಿಲ್ಲದು ನಿಲ್ಲದು ಪಯಣ, ನಮ್ಮದು ಸುದೀರ್ಘ ಪಯಣ...'' ಎಂಬಂತೆ ಅಸಗರ್ ಆಲಿ ಸುದೀರ್ಘ ಪಯಣದಲ್ಲಿ ಹೆಜ್ಜೆ ಹಾಕುತ್ತಿದ್ದಾರೆ. ಅವರ ಚಿಂತನೆಗಳು ಇಲ್ಲಿವೆ:

★ ಕೋಮುವಾದ ಹಾಗೂ ಕೋಮುವಾದಿ ಗಲಭೆಗಳು ಎರಡು ಬೇರೆ ಬೇರೆಯೇ. ಕೋಮುಗಲಭೆ ಇಲ್ಲ ಎಂದ ಮಾತ್ರಕ್ಕೆ ಕೋಮುವಾದ ಇಲ್ಲ ಎಂದು ಅರ್ಥವಲ್ಲ. ಜಾತ್ಯಾತೀತ ಶಕ್ತಿಗಳು ಕೋಮುಗಲಭೆಗಳು ಇಲ್ಲದಾಗಲೂ ಕೋಮುವಾದ ಹರಡುತ್ತಾ ಹೋಗುವುದನ್ನು ಗುರುತಿಸಲು ಹಲವು ಬಾರಿ ಸೋತಿವೆ. ಕೋಮುವಾದಿ ಶಕ್ತಿಗಳು ಗಲಭೆ ಇಲ್ಲದ ವೇಳೆಯಲ್ಲಿಯೂ ಸಹ ಅತ್ಯಂತ ಕ್ರಿಯಾಶೀಲವಾಗಿರುತ್ತವೆ. ಇಂತಹ ಗಲಭೆಗಳನ್ನು ಹುಟ್ಟು ಹಾಕುವುದರಿಂದ ರಾಜಕೀಯ ಲಾಭ ಇದೆ ಎಂದು ಗೊತ್ತಾದಾಗ ಮಾತ್ರ ಈ ಶಕ್ತಿಗಳು ಕೋಮುಗಲಭೆ ಹುಟ್ಟು ಹಾಕುತ್ತವೆ.

★ ಭಾರತದಲ್ಲಿ ಪ್ರಜಾಪ್ರಭುತ್ವ ಪ್ರಬುದ್ಧವಾಗಿರುವ ಕಾರಣದಿಂದಾಗಿ ಇಲ್ಲಿಯ ಜನತೆ ತಮ್ಮ ಹಕ್ಕುಗಳನ್ನು ಕಂಡುಕೊಳ್ಳುತ್ತಿದ್ದಾರೆ. ಈ ನಾಡಿನ ಎಲ್ಲರೂ ತಮ್ಮ ಹಕ್ಕುಗಳನ್ನು ರಕ್ಷಿಸಿಕೊಳ್ಳಲು ಹೊರಟಿರುವುದರಿಂದ ಮೇಲ್ಜಾತಿಯ ಹಿಂದೂಗಳಿಗೆ ಆತಂಕ ಆರಂಭವಾಗಿದೆ. ಅವರ ಮೆರೆದಾಟಕ್ಕೆ ಅಡ್ಡಿಯಾಗಿದೆ. ಈ ಶಕ್ತಿಗಳು ತಿರುಗೇಟು ಹೊಡೆಯಲು ಪ್ರಯತ್ನಿಸಿದ ಕಾರಣದಿಂದ ಕೋಮುಗಲಭೆಗಳು ಆರಂಭವಾಗಿವೆ. ಇದು ಭಾರತ ವಿಭಜನೆಯ ಮೊದಲು ಹಾಗೂ ನಂತರದಲ್ಲಿಯೂ ಸಹ ನಿಜ.
ವಿಭಜನೆಯ ಪೂರ್ವದಲ್ಲಿ ಮೇಲ್ವರ್ಗದ ಮುಸ್ಲಿಂರು ಈ ಆತಂಕಕ್ಕೊಳಗಾಗಿದ್ದರು. ಉತ್ತರಪ್ರದೇಶದ ಮುಸ್ಲಿಂ ಮೇಲ್ವರ್ಗ ಸ್ವತಂತ್ರ ಭಾರತದಲ್ಲಿ ತಮ್ಮ ಅಸ್ತಿತ್ವ ಇಲ್ಲವಾಗುತ್ತದೆ ಎಂಬ ಭಯದ ಕಾರಣಕ್ಕೆ ಪಾಕಿಸ್ತಾನವನ್ನು ಹುಟ್ಟುಹಾಕಲು ಕಾರಣರಾದರು. ೮೦ರ ದಶಕದಲ್ಲಿ ಮಂಡಲ್ ವರದಿ ಜಾರಿಯ ಜೊತೆ ಷಾ ಬಾನು ಪ್ರಕರಣ, ಸಿಖ್ಖರ ಮೇಲೆ ನಡೆದ ದಾಳಿ ಇವು ಮೇಲ್ವರ್ಗದ ಜನರು ತಲ್ಲಣಗೊಳ್ಳುವಂತೆ ಮಾಡಿದವು. ಐಷಾರಾಮ ಜೀವನ ನಡೆಸುವ ಈ ವರ್ಗದಲ್ಲಿ ಅಭದ್ರತೆ ಉಂಟಾದರೆ ಅವು ತಿರುಗೇಟು ನೀಡುತ್ತವೆ. 'ಇಂಡಿಯನ್ ಎಕ್ಸ್‌ಪ್ರೆಸ್'ನಲ್ಲಿ ಒಬ್ಬ ಅಂಕಣಕಾರ ಭಾರತದ ಅಲ್ಪಸಂಖ್ಯಾತರು ಎಷ್ಟು ಹೆಚ್ಚಿದ್ದಾರೆಂದರೆ ಅವರಿಗೆ ಇನ್ನು ಹತ್ತು ವರ್ಷ ಮತದಾನದ ಹಕ್ಕನ್ನು ಇಲ್ಲದಂತೆ ಮಾಡಬೇಕು ಎಂದು ಬರೆದಿದ್ದರು. ಅದು ನನಗೆ ಇನ್ನೂ ನೆನಪಿದೆ.

★ ಕೋಮುವಾದಿ ದೃಷ್ಟಿಕೋನವನ್ನು ಹರಡುವುದರಲ್ಲಿ ಮುಖ್ಯ ತಪ್ಪಿತಸ್ಥರೆಂದರೆ ಮಧ್ಯಮ ವರ್ಗದವರು. ಅವರ ಆಲೋಚನೆಗಳು ಬದಲಾದಲ್ಲಿ ಅವರು ಕೋಮುವಾದ ಹರಡುವುದಿಲ್ಲ. ಕೋಮುವಾದ ಹರಡುವ, ತರಗತಿಗಳಲ್ಲಿ ಬೋಧಿಸುವ, ಪತ್ರಿಕೆಗಳಲ್ಲಿ ಬರೆಯುವ, ವಿಷ ಹರಡುವ ಕೆಲಸದಿಂದ ದೂರ ಸರಿಯುತ್ತಾರೆ.

★ ನಾವು ಕೋಮುವಾದದ ವಿರುದ್ಧ ಚಳುವಳಿ ಆರಂಭಿಸಿದ ದಿನಗಳಲ್ಲಿ ಬಲರಾಜ ಸಾಹ್ನಿ ದೊಡ್ಡ ಬೆಂಬಲ ನೀಡಿದ್ದರು. ೧೯೭೦ರಲ್ಲಿ ಭಿವಂಡಿಯಲ್ಲಿ ಕೋಮುಗಲಭೆಗಳು ನಡೆದಾಗ ಸಾಹ್ನಿ ಕಾಶ್ಮೀರದಲ್ಲಿ ರಜಾ ದಿನಗಳಿಗೆ ಹೋಗುವವರಿದ್ದರು. ಆದರೆ ಈ ಗಲಭೆ ಗೊತ್ತಾದ ತಕ್ಷಣ ಅದನ್ನು ಕೈ ಬಿಟ್ಟು ೧೫ ದಿನಗಳ ಕಾಲ ಸತತವಾಗಿ ಭಿವಂಡಿ ಮತ್ತು ಸುತ್ತಮುತ್ತಲ ಗಲಭೆ ಪೀಡಿತ ಹಳ್ಳಿಗಳಲ್ಲಿ ಜನರಿಗೆ ಸಾಂತ್ವನ ಹೇಳುತ್ತಾ ತಿರುಗಾಟ ನಡೆಸಿದ್ದರು. (ಬಲರಾಜ್‌ರ ಜೊತೆ ಕೆ.ಎ. ಅಬ್ಬಾಸ್ ಮತ್ತು ಭಿಷಮ್ ಸಾಹ್ನಿ ಸಹ ಇದ್ದರು.-ಸಂ.)

★ ಭಾರತ ಧರ್ಮಾಂಧರ ಕೈಗೆ ಸಿಕ್ಕು ಮತ್ತೊಂದು ತಾಲಿಬಾನ್ ರಾಷ್ಟ್ರವಾಗುವುದಕ್ಕೆ ಮುನ್ನ ಎಚ್ಚತ್ತುಕೊಳ್ಳಬೇಕು. ಪಾಕಿಸ್ತಾನ ಇಂದು ಧರ್ಮಾಂಧರಿಂದ ತುಂಬಿರುವ

ಪರಿಣಾಮವಾಗಿ ಮತ್ತೊಂದು ತಾಲಿಬಾನ್ ರಾಷ್ಟ್ರವಾಗಿದೆ. ಈ ಧರ್ಮಾಂಧತೆಯ ಕರಿನೆರಳು ಕಾಶ್ಮೀರದ ಮೇಲೆ ಬಿದ್ದಿದೆ. ಭಾರತದಲ್ಲಿ ಅದರ ನೆರಳು ಚಾಚುತ್ತಿದೆ.

★ ಜಾತ್ಯತೀತತೆ ಇಲ್ಲದ ಪ್ರಜಾಪ್ರಭುತ್ವ ಯಾವ ದೇಶದಲ್ಲಿಯೂ ಜೀವಂತವಾಗಿರಲು ಸಾಧ್ಯವಿಲ್ಲ. ಜಾತ್ಯತೀತತೆ ಇಲ್ಲದ ಕಡೆ ಸರ್ವಾಧಿಕಾರ ಇರುತ್ತದೆ. ಪಾಕಿಸ್ತಾನದಲ್ಲಿ ಈಗ ಇರುವುದೂ ಸರ್ವಾಧಿಕಾರವೇ. ಭಾರತದ ದೊಡ್ಡ ಶಕ್ತಿಯೇ ಪ್ರಜಾಪ್ರಭುತ್ವ. ಪ್ರಜಾಪ್ರಭುತ್ವ ಇರುವ ಕಾರಣದಿಂದಾಗಿಯೇ ಕಾರ್ಗಿಲ್, ಕೋಮುವಾದವನ್ನು ತಡೆಯಲು ಭಾರತಕ್ಕೆ ಸಾಧ್ಯವಾಗಿದೆ. ಪ್ರಜಾಪ್ರಭುತ್ವ ಬಲವಾಗಿದ್ದೆಡೆ ಹಿಂಸೆ ಇರುವುದಿಲ್ಲ. ಪಾಕಿಸ್ತಾನದಲ್ಲಿ ಪ್ರಜಾಪ್ರಭುತ್ವ ದುರ್ಬಲವಾಗಿ ಇರುವುದರಿಂದ ಹಿಂಸೆ ತಾಂಡವವಾಡುತ್ತಿದೆ. ಪಾಕ್ ಈ ಕಾರಣದಿಂದಾಗಿಯೇ ಯಾವುದೇ ಹಂತದಲ್ಲಿ ಕುಸಿಯುವ ಘಟ್ಟಕ್ಕೆ ಬಂದು ನಿಂತಿದೆ.

★ ಯಾವುದೇ ಧರ್ಮ ಹಿಂಸೆಯನ್ನು ಬೋಧಿಸುವುದಿಲ್ಲ. ಇಸ್ಲಾಂ ಹಿಂಸೆಯನ್ನು ಪ್ರಚೋದಿಸುತ್ತದೆ ಎಂದು ಹೇಳುವುದು ರಾತ್ರಿಯನ್ನು ಹಗಲು ಎಂದಷ್ಟೇ ಸುಳ್ಳು. ತಲವಾರ್ ಹಿಡಿದು ಮತಾಂತರಕ್ಕೆ ಪ್ರಚೋದಿಸಲಾಗುತ್ತಿದೆ ಎಂಬ ಮಾತು ಶುದ್ಧ ಸುಳ್ಳು. ಬರುವವರನ್ನು ಹೃದಯವಂತಿಕೆ ಹಾಗೂ ವಿಶ್ವಾಸದಿಂದ ಬರಮಾಡಿಕೋ ಎಂದು ಕುರಾನ್ ಹೇಳುತ್ತದೆ. ಮಾನವೀಯತೆ ಇಲ್ಲದ ಮನುಷ್ಯ ಮುಸಲ್ಮಾನ್ ಅಲ್ಲ.

★ ಅಹಿಂಸೆ ಮತ್ತು ಪ್ರಜಾಪ್ರಭುತ್ವ 'ನಗ್ನ ಸಂತ' ಗಾಂಧೀಜಿ ಕೊಟ್ಟ ಕೊಡುಗೆ. ಇವೆರಡನ್ನೂ ಬಲಪಡಿಸಿದಲ್ಲಿ ಭಾರತದಲ್ಲಿ ಕೋಮುಸೌಹಾರ್ದತೆ ಇನ್ನೂ ಬಲವಾಗುತ್ತದೆ. ಭಾರತಕ್ಕೆ ಸೂಫಿ ಸಂತರ ಬಲವಾದ ಆಧಾರವಿದೆ. ಎಲ್ಲರಿಗೂ ಶಾಂತಿಯಿರಲಿ ಎಂದು ಬೋಧಿಸಿದ ಸೂಫಿ ಸಂತರ ನೆಲವನ್ನು ಧರ್ಮಾಂಧರ ಕೈಗೆ ಕೊಡುವುದು ಬೇಡ.

(ವಿವಿಧ ಸಂದರ್ಶನ, ಭಾಷಣಗಳಿಂದ ಅವರ ಚಿಂತನೆಯನ್ನು ಆಯ್ದುಕೊಳ್ಳಲಾಗಿದೆ)



*ಅಸಗರ್ ಆಲಿ ಇಂಜಿನಿಯರ್*

## ಕೋಮುವಾದ ಹತ್ತಿಕ್ಕಿದ 'ಸೈತಾನ'

ನೀನು ಸೈತಾನ.

-ಕೋಮು ಸೌಹಾರ್ದತೆಯ 'ಬೆಳಕ'ನ್ನು ಇಸ್ಲಾಂ ಧರ್ಮದ ಒಂದು ಪಂಗಡವಾದ ಬೊಹ್ರಾ ಧರ್ಮಗುರು ಕರೆದದ್ದು ಹೀಗೆ.

ಅಸಗರ ಅಲಿ ಇಂಜಿನಿಯರ್ ಅವರ ವೃದ್ಧ ತಾಯಿಯನ್ನು ಕರೆದು ಧರ್ಮಗುರು ಆ ಸೈತಾನನೊಂದಿಗೆ ಬದುಕಬೇಡ ಎಂದು ಆಜ್ಞೆ ಹೊರಡಿಸಿದರು. ಈ ಇಳಿ ವಯಸ್ಸಿನಲ್ಲಿ ಇನ್ನೆಲ್ಲಿ ಇರಲಿ ಎಂಬ ತಾಯಿಯ ಪ್ರಶ್ನೆಗೆ ಅವರ ಬಳಿ ಉತ್ತರವಿರಲಿಲ್ಲ. ಆಕೆಯನ್ನು ಸಾಕುವ ಮನಸ್ಸೂ ಇರಲಿಲ್ಲ. ಹಾಗಿದ್ದರೆ ಒಂದೇ ಮನೆಯಲ್ಲಿ ಪರದೆ ಹಾಕಿ ಬೇರೆ ಅಡುಗೆ ಮಾಡಿಕೊಳ್ಳಿ ಎಂದು ನಿರ್ದೇಶನ ನೀಡಲಾಯಿತು.

ಅಸಗರ್ ಅಲಿ ಅವರನ್ನು ಧರ್ಮದಿಂದ ಹೊರಹಾಕಲಾಯಿತು. ಇದ್ದ ಮನೆಯಲ್ಲಿ ಪರದೆ ಅಡ್ಡ ಬಂತು. ಎರಡು ಒಲೆ ಉರಿಯಲಾರಂಭಿಸಿದವು. ಇಷ್ಟೇ ಸಾಲದೆಂಬಂತೆ ತಾಯಿ ಸರಿಯಾಗಿ ಧರ್ಮಗುರುಗಳ ಆಜ್ಞೆ ಪಾಲಿಸುತ್ತಿದ್ದಾರೋ ಇಲ್ಲವೋ ಎಂಬುದನ್ನು ನೋಡಲು ಇಲ್ಲಸಲ್ಲದ ವೇಳೆಯಲ್ಲಿ ಬೊಹ್ರಾ ಹೆಂಗಸರು ಮನೆಗೆ ದಾಳಿ ಇಡುತ್ತಿದ್ದರು.

ತಾಯಿಯ ಈ ಪರಿಸ್ಥಿತಿಯನ್ನು ನೋಡಲಾಗದೆ ಅಸಗರ್ ಅಲಿ ತಮ್ಮ ಇದ್ದ ಬದ್ದ ಆಸ್ತಿ ಮಾರಿ ತಾಯಿಗೊಂದು ಪ್ರತ್ಯೇಕ ಮನೆ ಕೊಂಡರು.

ಅಸಗರ್ ಅಲಿ ತಮ್ಮ ಧರ್ಮದಿಂದ ಬಹಿಷ್ಕೃತಗೊಂಡಾಗ ಅನುಭವಿಸಿದ ವ್ಯಥೆಯ ಸರಮಾಲೆಯನ್ನೇ ಮುಂದಿಡುತ್ತಾರೆ.

ನನ್ನ ಮಕ್ಕಳು ಇರ್ಫಾನ್, ಸೀಮಾ ಅಂತೂ ತುಂಬಾ ತೊಂದರೆಗೊಳಗಾದರು. ನೆಂಟರನ್ನು ನೋಡುವಂತಿಲ್ಲ, ಮಕ್ಕಳ ಜೊತೆ ಮಾತನಾಡುವಂತಿಲ್ಲ ಎಂಬ ಪರಿಸ್ಥಿತಿ. ಕದ್ದು ಮುಚ್ಚಿ ನಾನಿಯ ಮನೆಗೆ ಹೋಗುತ್ತಿದ್ದರು. ಅವರು ಮನೆಯಲ್ಲಿದ್ದ ವೇಳೆ ಬೇರೆಯವರು ಯಾರಾದರೂ ಬಂದರೆ ತಕ್ಷಣವೇ ಮಕ್ಕಳು ಮಂಚದ ಕೆಳಗೆ ಬಚ್ಚಿಟ್ಟುಕೊಳ್ಳಬೇಕಾಗುತ್ತಿತ್ತು, ನೆಂಟರು ಹೋಗುವವರೆಗೂ ಇದೇ ಗತಿ.

ನನ್ನ ದೊಡ್ಡ ಅಣ್ಣ ಸತ್ತಾಗ ಆತನ ಶವ ಮೆರವಣಿಗೆಯಲ್ಲಿ ಭಾಗವಹಿಸಲೂ ಬಿಡಲಿಲ್ಲ. ನನ್ನ ಬದುಕಿಗೆ ದೊಡ್ಡ ಆಧಾರವಾಗಿದ್ದ ಆತನ ಕೊನೆಯ ಯಾತ್ರೆಯಲ್ಲಿ ಭಾಗವಹಿಸಲು ಹೋದಾಗ ಶವವನ್ನೇ ಎಸೆದುಬಿಡುವ ಬೆದರಿಕೆ ಒಡ್ಡಿದರು. ನಾನು ಕಣ್ಣೀರಿಡುತ್ತಾ ವಾಪಸ್ಸಾದೆ. ನಾನು ಅಳುತ್ತಿರುವುದು ನೋಡಿ ತಾಳಲಾಗದೆ ನನ್ನ ಮಾವ, ಚಿಕ್ಕಪ್ಪ ಓಡಿ ಬಂದು ಸಮಾಧಾನ ಮಾಡಿದರು. ಅವರು ಮಾಡಿದ 'ಘೋರ' ತಪ್ಪಿಗೆ ನಂತರ ವಿಚಾರಣೆ ನಡೆಸಿ ಪ್ರತಿಯೊಬ್ಬರಿಗೂ ಹತ್ತು ಸಾವಿರ ರೂ. ದಂಡ ವಿಧಿಸಲಾಯಿತು.

ನನ್ನನ್ನು ಎಷ್ಟೋ ಜನ ಮುಸ್ಲಿಂರಲ್ಲಿ ಇದೊಂದೇ ಶಿಸ್ತಿನ ಪಂಗಡ. ಅದನ್ನು ಮುರಿಯಲು ನೀನೇಕೆ ಹೋರಾಡುತ್ತೀಯಾ ಎಂದು ಪ್ರಶ್ನಿಸುತ್ತಿದ್ದರು. ನಾನು ನಿಮಗೆ ಹಿಟ್ಲರ್‌ನ ಶಿಸ್ತು ಬೇಕೆ ಎಂದು ಪ್ರಶ್ನಿಸುತ್ತಿದ್ದೆ. ಇದು ಸ್ಮಶಾನ ಶಿಸ್ತು, ಇಲ್ಲಿ ಯಾರೂ ಮಾತನಾಡುವಂತಿಲ್ಲ, ಮಾತನಾಡಿದರೆ ಮುಗಿಯಿತು. ಒಂದೋ ಧರ್ಮದಿಂದ ಹೊರಕ್ಕೆ, ಇಲ್ಲ ಕೊಲೆ, ಎರಡೇ ಮಾರ್ಗ.

ಅಸಗರ್ ಅಲಿ ಇಂಜಿನಿಯರ್ ಅವರ ಒಡಲೊಳಗೆ ನೋವಿನ ಕಥೆಗಳು ಸಾಕಷ್ಟಿವೆ. ಮನುಷ್ಯ ಮನುಷ್ಯನೊಳಗೆ ಹುಟ್ಟುತ್ತಿರುವ ಅಪಾರ ಕಂದಕದ ಬಗ್ಗೆ ನಿಟ್ಟುಸಿರಿದೆ. ಇವರ ಹೋರಾಟ ಮಾನವೀಯತೆಯ ಸೆಲೆಯನ್ನು ಒಂದಿಷ್ಟಾದರೂ ಚಿಮ್ಮಿಸಲು ಸಾಧ್ಯವಾಗಿದೆ. ಬೊಹ್ರಾ ಧರ್ಮಗುರು ತನ್ನ ಬಿಗಿಹಿಡಿತ ಸಡಿಲಿಸಬೇಕಾದ ಅನಿವಾರ್ಯತೆಯನ್ನು ಇವರ ಪಟ್ಟು ಬಿಡದ ಪ್ರತಿಭಟನೆ ಉಂಟುಮಾಡಿದೆ. ಇವರ ಹೋರಾಟ ನಿಧಾನವಾಗಿ ಯಶಸ್ಸು ಕಂಡು ಜಗತ್ತಿನಾದ್ಯಂತ ಈ ಧರ್ಮದೊಳಗೆ ಪ್ರಶ್ನಿಸುವವರು ಎದ್ದು ನಿಂತಿದ್ದಾರೆ. ಅಪಾರ ಸಂಖ್ಯೆಯಲ್ಲಿ ಮಹಿಳೆಯರೂ ಇವರ ಹೋರಾಟದಲ್ಲಿ ಕೈಗೂಡಿಸಿದ್ದಾರೆ.

ಈ ಯಶಸ್ಸಿನ ಹತಾಶೆಯೇ ಈಗ ಮತ್ತೆ ಅಸಗರ್ ಅಲಿ ಇಂಜಿನಿಯರ್ ಅವರ ಮೇಲೆ ಬೊಹ್ರಾ ಧರ್ಮೀಯರು ಹಲ್ಲೆ ನಡೆಸಲು ಕಾರಣವಾಗಿದೆ. ಅಸಗರ್ ಅಲಿ ಅವರು ಪ್ರಯಾಣ ಮಾಡುತ್ತಿದ್ದ ವಿಮಾನದಲ್ಲಿಯೇ ಬೊಹ್ರಾ ಧರ್ಮಗುರುವೊಬ್ಬ [illegible] ಆರಂಭಿಸಿದರು. ಅಸಗರ್ ಅಲಿ ಅವರನ್ನು ವಿಮಾನದಲ್ಲಿಯೇ [illegible] ವಿಮಾನ ಇಳಿಯಲು ಬಿಡದೆ ವಿಮಾನ ನಿಲ್ದಾಣದಲ್ಲಿ [illegible]ಗಿದೆ.

ಅಷ್ಟೇ ಅಲ್ಲ, ನಂತರ ಅಸಗರ್ ಅಲಿ ಅವರೇ ಧರ್ಮ ಗುರುಗಳನ್ನು ಹೀಯಾಳಿಸಿದರು, ವಿಮಾನ ಇಳಿಯಲು ಬಿಡಲಿಲ್ಲ ಎಂಬ ಸುದ್ದಿ ಹಬ್ಬಿಸಲಾಗಿದೆ. ಧರ್ಮಾಂಧರಿಂದ ಹಲ್ಲೆಗೊಳಗಾಗಿ ಅವರು ಮುಂಬೈನ ನಾನಾವಟಿ ಆಸ್ಪತ್ರೆಗೆ ದಾಖಲಾಗಿದ್ದರೆ, ಇತ್ತ ಅಸಗರ್ ಅಲಿ ಅವರ ವಿರುದ್ಧ ಮುಂಬೈ, ಮದ್ರಾಸ್‌ನಲ್ಲಿ ಬಂದ್ ಆಚರಿಸಲಾಗಿದೆ. ಬೆಂಗಳೂರಿನಲ್ಲಿ ಪ್ರತಿಭಟನಾ ಮೆರವಣಿಗೆ ತೆಗೆಯಲಾಗಿದೆ. ಈ ಕಾರ್ಯಕ್ಕಾಗಿಯೇ ಈಗ [illegible] ಮಾಡಲಾಗಿದೆ.

- [illegible]

# ಇವರೆಂತಹ ಸಾಧುಗಳು?

ನಮ್ಮ ದೇಶದಲ್ಲಿ ಮುಗ್ಧ ಜನರ ಭಾವನೆಗಳನ್ನೇ ಬಲಿಪಶುವಾಗಿಸಿಕೊಂಡು, "ಆ ಕಾಯಿಲೆಯನ್ನು ಗುಣಪಡಿಸುತ್ತೇವೆ. ಈ ಮಂತ್ರದಲ್ಲಿ ಆ ಶಕ್ತಿಯಿದೆ, ಈ ಮಹಿಮೆಯಿದೆ" ಎಂದೆಲ್ಲ ಪ್ರಚಾರ ಹೊಡಿಸಿ ಶ್ರೀಮಂತರಾದ ಸಾಧುಗಳಿದ್ದಾರೆ. ಪ್ರಸ್ತುತ ನಾನು ವಾಸಿಸುವ ರಾಯಗಢ ಜಿಲ್ಲೆಯ ಸಾಧು (ಮರಾಠಿಯಲ್ಲಿ ಇವರು "ಮಹಾರಾಜರು") ಗಳ ಬಗ್ಗೆ ಹೇಳಬೇಕಾಗಿದೆ.

ನನ್ನ ಮಗ ಐದು ವರ್ಷದವನಾಗಿದ್ದು, ಕೆಲ ಶಬ್ದಗಳನ್ನಾಡುತ್ತಾನೆ; ಕಿವಿ ಚೆನ್ನಾಗಿ ಕೇಳಿಸುತ್ತದೆ. ಮುಂಬೈನಲ್ಲಿ ಹತ್ತು ಸಾವಿರಕ್ಕಿಂತ ಹೆಚ್ಚಿನ ಹಣ ಸುರಿದು ಎಲ್ಲ ಬಗೆಯ ವೈದ್ಯಕೀಯ ತಪಾಸಣೆಯನ್ನು ಮಾಡಲಾಯಿತು. ಎಲ್ಲ ವರದಿಗಳೂ ನಾರ್ಮಲ್ ಇದ್ದವು! ಹೀಗಿರುವಾಗ, ಪರಿಚಿತರೊಬ್ಬರ ಆಗ್ರಹದ ಮೇರೆಗೆ ನಾನು ಮಹಾಡ್ ಎಂಬ ಊರಿಗೆ ಪ್ರಯಾಣಿಸಿದೆ. ಅಲ್ಲಿ ಸರ್ಕಾರಿ ನೌಕರಿ ಮಾಡುವ ಏಳು ಮಕ್ಕಳ ತಂದೆಯಾಗಿರುವ 'ಮಹಾರಾಜ'ರಿದ್ದಾರೆ! ಕಳೆದ ಹದಿನೈದು ದಿನಗಳಲ್ಲಿ ಮೂರು ಸಲ ಅವರಲ್ಲಿ ಹೋಗಿ, ಮಗನಿಗಾಗಿ ಔಷಧಿ ದಯಪಾಲಿಸಲು ಪ್ರಾರ್ಥಿಸಿಕೊಂಡಾಗ, "ಹೆದರದಿರಿ. ನಿಮ್ಮ ಮಗ ಒಂದು ವರ್ಷದಲ್ಲಿ ಖಂಡಿತ ಮಾತನ್ನಾಡುತ್ತಾನೆ" ಎಂದು ಭರವಸೆ ನೀಡಿದರು. ಆದರೆ "ಸದ್ಯ ಔಷಧಿ ಉಪಲಬ್ಧವಿಲ್ಲ. ನಿಮ್ಮ ಊರಿಗೆ ಕಳುಹಿಸುವ ವ್ಯವಸ್ಥೆ ಮಾಡುತ್ತೇನೆ" ಎಂದರು. ಸದಾ ಕಾಲವೂ ಸಿಗರೇಟು ಸೇದುವ, ಎಪ್ಪತ್ತೈದು ವರ್ಷದವರಾದ, ಇವರ ಬಗ್ಗೆ ನನಗ್ಯಾವ ಒಳ್ಳೆಯ ಭಾವನೆಗಳೂ ಉಂಟಾಗಲಿಲ್ಲವಾದರೂ, ನನ್ನ ಮಗನ ಔಷಧ ಮುಖ್ಯ, ಅವರ ವೈಯಕ್ತಿಕ ವಿಷಯವೇಕೆ ಎಂದು ನನ್ನ ಮನಸ್ಸಿಗೆ ಸಮಾಧಾನಿಸಿದೆ.

ಮಧ್ಯಾಹ್ನ ಅವರು ಮಲಗಿರುವುದರಿಂದ ಸುಮಾರು ನಾಲ್ಕೈದು ತಾಸಾದರೂ ಅಂಗಳದಲ್ಲಿ ಕಾಯಬೇಕಾಗಿತ್ತು.



ಅಷ್ಟರಲ್ಲಿ ಒಬ್ಬ ಸುಂದರ ವಿವಾಹಿತ ಮಹಿಳೆಯ ಹೊಟ್ಟೆಯ ಮೇಲೆ ಕೈಯಾಡಿಸಿ, ಆಕೆಯನ್ನು ಬರಸೆಳೆದು, ಒಬ್ಬ ತರುಣನು ಒಳಕ್ಕೆ ಕರೆದುಕೊಂಡು ಹೋದ! ಕೇವಲ ಸಿನೆಮಾದಲ್ಲಿ ಇಂತಹ ದೃಶ್ಯ ಕಂಡ ನನಗೆ, ಅತ್ಯಂತ ನಾಚಿಕೆ ಆ ಕ್ಷಣದಲ್ಲಾಯಿತು. "ಗಂಡ-ಹೆಂಡತಿ ಇರಬೇಕು, ಅದಕ್ಕೆ ಹೀಗೆ ಸರಸವಾಡುತ್ತಾರೆ" ಎಂದುಕೊಂಡೆ.

ಅಷ್ಟರಲ್ಲಿ ನನ್ನ ಪರಿಚಿತರು ಅಲ್ಲಿಗೆ ಆಗಮಿಸಿದರು. ಆ ಬಳಿಕ ನಮಗೆ ಚಹಾ ನೀಡಿದ ಆಕೆ ಹಾಗೂ ಆ ವ್ಯಕ್ತಿಯನ್ನು ನೋಡಿ ನನ್ನ ಪರಿಚಿತರಿಗೆ ಕೇಳಿದೆ: "ಅವರಿಬ್ಬರೂ ದಂಪತಿಗಳೇ ?" ಅದಕ್ಕವರು "ಛೇ, ಛೇ ! ಆತ ಈ ಮಹಾರಾಜರ ಎರಡನೆಯ ಮಗ. ಮೇ ತಿಂಗಳಲ್ಲಿ ಆತನ ವಿವಾಹವಿದೆ. ಆಕೆ ಹೀಗೆಯೇ 'ಗುರು ಸೇವೆ'(?) ಮಾಡಲು ಮುಂಬೈಯಿಂದ ಬಂದಿರುವಾಕೆ. ಹೀಗೆಯೇ ಸಾವಿರಾರು ಭಕ್ತರು ಇಲ್ಲಿ ಬಂದು ಸೇವೆ ಮಾಡುತ್ತಾರೆ" ಎಂದು ನುಡಿದಾಗ ನನ್ನ ಮನಸ್ಸಿಗೆ ಅತ್ಯಂತ ಕಳವಳವಾಯಿತು. ಪರಿಚಿತರ ತೀವ್ರ ವಿರೋಧವಿದ್ದರೂ, ನಸುಗತ್ತಲಿನಲ್ಲಿಯೇ ಅಲ್ಲಿಂದ ಎದ್ದು ಒಂದೂವರೆ ಕಿ. ಮೀ. ನಡೆದು ಮಹಾಡ್ ಬಸ್‌ಸ್ಟಾಪ್ ತಲುಪಿ ಬಸ್ಸನ್ನೇರಿ ಅರ್ಧರಾತ್ರಿಯಲ್ಲಿಯೇ ಮನೆ ಸೇರಿದೆ.

ಆ 'ಮಹಾರಾಜ'ರ ಮಗ ನನ್ನೆದುರಿನಲ್ಲಿಯೇ ಆ ಹೆಂಗಸನ್ನು ಮುಟ್ಟಬೇಕಾದರೆ ಇದು ಕಲಿಯುಗದ ಮಹಾನ್ ಮಹಿಮೆಯಲ್ಲದೆ ಇನ್ನೇನು?

ನನ್ನ ಮಗ ಸುಧಾರಿಸದಿದ್ದರೂ ಚಿಂತೆಯಿಲ್ಲ. ಆದರೆ, ತಮ್ಮ ಮಗನ ಚಾರಿತ್ರ್ಯವನ್ನು ಅಂತಃಚಕ್ಷುವಿನಿಂದ ಕಾಣಲಾರದ 'ಮಹಾರಾಜ'ರು ಇತರರ ಸಮಸ್ಯೆಗಳನ್ನು ಎಷ್ಟು ದಿವ್ಯದೃಷ್ಟಿ(? !) ಬೀರಿ ಬಗೆಹರಿಸಬಲ್ಲರು ?

ಇದು ಮಹಾರಾಷ್ಟ್ರದ ಸಮಸ್ಯೆಯಲ್ಲ, ಕರ್ನಾಟಕದಲ್ಲಿಯೂ ಇಂತಹ ಕೋಟ್ಯಾಧಿಪತಿ ಸ್ವಾಮಿಗಳಿದ್ದಾರೆ. ಯಾರೂ ನನ್ನಂತೆ ಮೂರ್ಖರಾಗಿ, ಬಳಿಕ ಎಚ್ಚೆತ್ತುಕೊಳ್ಳದಿರಲೆಂದು ಶುಭ ಹಾರೈಸುತ್ತೇನೆ. ನಾನು ಇಂತಹ ಎರಡು ಬಂಗ್ಲೆ, ಮಾರುತಿ ಕಾರುಗಳ ಒಡೆಯರಾದ ಸ್ವಾಮಿಗಳ ಬಳಿ ಹೋಗಲೇಬಾರದಿತ್ತು. ನನ್ನದೇ ತಪ್ಪು.

**ಶೋಭಾ ಪ್ರಮೋದ್**
ಮಾಣ್‌ಗಾಂವ್, ರಾಯಗಢ ಜಿಲ್ಲೆ, ಮಹಾರಾಷ್ಟ್ರ

## ಸಾದರ ಸ್ವೀಕಾರ

**ಇಬ್ಬನಿ(ಸಣ್ಣ ಕಥೆಗಳು)** *ವಿವಿಧ ಲೇಖಕರು.*
ಪುಟ : ೬೪ ಬೆಲೆ : ಗ್ರಂಥದಾನ

**ಬೇಂದ್ರೆ-ಮಧುರಚೆನ್ನ ಸಖ್ಯಯೋಗ**
ಡಾ॥ ಗುರುಲಿಂಗ ಕಾಪಸೆ
ಪುಟ : ೫೬ ಬೆಲೆ : ರೂ.೨೦

**ಬಹುಮಾನಿತ ಲೇಖನಗಳು** ಡನ್‌ಕನ್ ಝಳಕಿ, ಶಂಕ್ರಪ್ಪ ಎಂ.ಬಿತ್ನಾಳ, ದೀಪಾನಾಯಕ ಹಿರೇಗುತ್ತಿ
ಪುಟ : ೪೪ ಬೆಲೆ : ಗ್ರಂಥದಾನ

**ಏಕಾಂತದ ಮಳೆ**(ಕವನ ಸಂಕಲನ)
ಎಂ.ಆರ್.ಭಗವತಿ ಪುಟ : ೬೬ ಬೆಲೆ : ರೂ. ೩೫

**ಹಕ್ಕಿ ಹರಿವ ನೀರು** (ಕವನ ಸಂಕಲನ)
*ಕವಿತಾ ರೈ* ಪುಟ : ೮೮ ಬೆಲೆ : ರೂ. ೪೫

**ಹುಚ್ಚು ಹೊಳೆಯ ಮೂಲ** (ಕವನ ಸಂಕಲನ)
*ವಿವಿಧ ವಿದ್ಯಾರ್ಥಿಗಳು.*
ಪುಟ : ೭೨ ಬೆಲೆ : ಗ್ರಂಥದಾನ

ಮೇಲಿನ ಆರು ಪುಸ್ತಿಕೆಗಳ ಪ್ರಕಾಶಕರು, ಕನ್ನಡ ಸಂಘ, ಕ್ರೈಸ್ಟ್ ಕಾಲೇಜು, ಕುವೆಂಪು ನಗರ, ಬೆಂಗಳೂರು-೨೯.

**ಮೃಗತೃಷ್ಣಾ** (ನಾಟಕ) *ವಸುಮತಿ ಉಡುಪ*
ಪುಟ : ೫೪ ಬೆಲೆ : ರೂ. ೩೦
ಕರ್ನಾಟಕ ಸಂಘ, ಶಿವಮೊಗ್ಗ.

**ಕಾಡು ಕಣಿವೆಯ ಹಕ್ಕಿ** (ಕವನ ಸಂಕಲನ)
*ಡಾ॥ ವಿ. ಮುನಿಯಪ್ಪ* ಪುಟ : ೧೦೪ ಬೆಲೆ : ರೂ. ೬೦
ವಿಚಾರವಾದಿ ಪ್ರಕಾಶನ, ೧೨೪೦, ೩ನೇ ಕ್ರಾಸ್ ಹೊಂಗೆ ರಸ್ತೆ, ಕುವೆಂಪು ನಗರ, ಮೈಸೂರು-೫೭೦೦೨೩

**ಭಾರತಗೀತೆ** (ನೂರೊಂದು ಕವಿತೆಗಳು)
*ಅಹ್ಮದ್ ಅನ್ವರ್* ಪುಟ : ೧೪೨

ವಿಚಾರ ಪ್ರಕಾಶನ, ಪ್ರಥಮ ಮಹಡಿ, ವಿಜಯಶ್ರೀಮಹಲ್, ಪಾಂಡೇಶ್ವರ, ಮಂಗಳೂರು-೫೭೫೦೦೧

**ಅಟ್ಟದಲ್ಲಿ ಒಂದು ರಾತ್ರಿ** ಕಿರಣರ ಕತೆ ಕವಿತೆ
ಪುಟ : ೪೦ ಬೆಲೆ : ರೂ. ೨೦
ಸ್ವಂತಿಕಾ ಸಾಹಿತ್ಯ ಬಳಗ, ಸುಳ್ಯ, ದ.ಕ.-೫೭೪೨೩೯

**ಜ್ಞಾನಚಕ್ಷು** (ವಚನಗಳು) ಕಂಠೀರವ
ಪುಟ : ೨೮ ಬೆಲೆ : ರೂ.೫
ಶ್ರೀಕೃಷ್ಣ ಪ್ರಕಾಶನ, ಮೈಸೂರು-೫೭೦೦೨೪

**ಸೂಕ್ತಿಗಳಲ್ಲಿ ಸಾಹಿತ್ಯ** *ಟಿ. ವಿ. ವೆಂಕಟರಮಣಯ್ಯ*
ಪುಟ : ೬೪ ಬೆಲೆ : ರೂ. ೧೫
ಟಿ. ವಿ. ವೆಂಕಟರಮಣಯ್ಯ EWS-218 KHB ಕಾಲೋನಿ, ೨ನೇ ಹಂತ, ೫ನೇ ಕ್ರಾಸ್, ಬಸವೇಶ್ವರನಗರ, ಬೆಂಗಳೂರು-೭೯

**ರೊಟ್ಟಿ ಮತ್ತು ತತ್ವಜ್ಞಾನ**

*ಡಾ॥ ಮಹಾಬಲೇಶ್ವರ ರಾವ್*

**ಪುಟ : 116** **ಬೆಲೆ : ರೂ. 35**

**ಸುಮಂತ ಪ್ರಕಾಶನ**, ನಂ. 1-183, ಉಪ್ಪಿನ ಕೋಟೆ, (ಗಾಲದಕಟ್ಟೆ ರಸ್ತೆ) ಉಡುಪಿ-576 213



*ಚಿಂತನಶೀಲ ಬರಹಗಳ ಸಂಕಲನ. ಆರೋಗ್ಯಕರ ಸಮಾಜದ ನಿರ್ಮಾಣವಾಗಬೇಕಾದರೆ ಸುಸಂಸ್ಕೃತರಾದ, ಸದಭಿರುಚಿಯಿರುವ, ಅಪಾಯಕಾರಿಯಲ್ಲದ ಸ್ವತಂತ್ರ ಮನೋವೃತ್ತಿಯ, ಒಳ್ಳೆಯದನ್ನು ಗ್ರಹಿಸಿ ಮುಂದಡಿಯಿಡುವ ಕ್ರಿಯಾಶೀಲ ಪ್ರತಿಭಾವಂತ ಜನರ ಆವಶ್ಯಕತೆಯಿದೆ ಎಂಬುದು ಈ ಎಲ್ಲ ಬರಹಗಳ ಒಟ್ಟು ತಾತ್ವಿಕ ದನಿ. ಅನೇಕ ಸಂಸ್ಕೃತಿಗಳ ಭಾರತದಲ್ಲಿ ಹಳತನ್ನೆಲ್ಲ ತ್ಯಜಿಸಲಾರದೆ ಹೊಸತನ್ನೆಲ್ಲ ಸ್ವೀಕರಿಸಲಾರದೆ ತೊಳಲಾಡುವ ಶ್ರೀಸಾಮಾನ್ಯನ ಚಿತ್ರಣವಿದೆ.*



**ತಲೆ ಬಾಗದ ಜನ** (ನಾಟಕ)

*ಕೆ. ವೆಂಕಟರಾಜು*

**ಪುಟ : 48** ಬೆಲೆ : ರೂ. [illegible]

**ಶಾಂತಲಾ ಕಲಾವಿದರು**, ಮೂರನೆಯ ರಸ್ತೆ, ಭ್ರಮರಾಂಬ ಬಡಾವಣೆ, ಚಾಮರಾಜನಗರ - 571 313

*ಪ್ರಸ್ತುತ ನಾಟಕ ಈಸೂರಿನ ಗ್ರಾಮಸ್ಥರು ದಾಸ್ಯದ ವಿರುದ್ಧ ಪ್ರತಿಭಟಿಸಿದ [illegible] ಸ್ವಾತಂತ್ರ್ಯ ಪೂರ್ವ ದಿನಗಳಲ್ಲಿ ದೇಶಕ್ಕಾಗಿ ಹುತಾತ್ಮರಾದ. ದಾಸ್ಯಕ್ಕೆ ತಲೆಬಾಗದ ವಿರುದ್ಧ [illegible] ಕಳೆಯುವಷ್ಟರಲ್ಲಿ ದೇಶವನ್ನೇ ಹರಾಜು ಹಾಕುವ ಮಟ್ಟಕ್ಕೆ [illegible]? ಇನ್ನೊಂದು ಸ್ವಾತಂತ್ರ್ಯ ಹೋರಾಟವನ್ನು ನಾವು ಯಾರೊಡನೆ ಮಾಡಬೇಕು ? ಹಳೆಯ ನೆನಪು ಮಾತ್ರ ಸುಂದರ. ವಾಸ್ತವತೆ ಕಠೋರ.*



**ಚಿತ್ರಾಂತರಂಗ**

*ಶಂಕರ ಪಾಟೀಲ*

**ಪುಟ : 139** **ಬೆಲೆ : ರೂ. 80**

**ಪ್ರಗತಿ ಪ್ರಕಾಶನ**, ಕಲಾಭವನ, ವಿದ್ಯಾನಗರ, ದಾವಣಗೆರೆ-5

*ಭಾಷಾ ಮಾಧ್ಯಮದ ಹಂಗಿಲ್ಲದೆ ವಿಶ್ವದ ಎಲ್ಲರೊಂದಿಗೆ ಚಿತ್ರಕಲೆ ಮಾತ್ರ ಮಾತಾಡಬಲ್ಲುದು. ಚಿತ್ರಕಲೆಯನ್ನು ಅನೇಕ ದೃಷ್ಟಿಕೋನಗಳಿಂದ ನೋಡುವ ಪಾಟೀಲರು ಸ್ವತಃ ಚಿತ್ರ ಕಲಾವಿದರು, ಕಲಾ ಅಧ್ಯಾಪಕರು, ಛಾಯಾಚಿತ್ರಕಾರರು. ಶ್ರೇಷ್ಠ ಚಿತ್ರಕಲೆಯನ್ನು ಆಸ್ವಾದಿಸಲು ನೆರವಾಗುವಂತಹ ಲೇಖನಗಳಿವೆ. ಚಿತ್ರಕಲೆಯ ವಿದ್ಯಾರ್ಥಿಗಳಿಗೆ ಉಪಯುಕ್ತ ಕೃತಿಯಿದು.*

**ಕಾಲ್ನಡಿಗೆ** (ಬರಹಗಳ ಸಂಕಲನ) *ಬಿ. ಎಂ. ಪುಟ್ಟಯ್ಯ*

**ಪುಟ : 140** **ಬೆಲೆ : ರೂ. 60.00**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜ್, ಕುವೆಂಪು ನಗರ, ಬೆಂಗಳೂರು- 560 029.



*ಇಲ್ಲಿನ ಒಂಬತ್ತು ಬರಹಗಳು ವಿವಿಧ ವಿಷಯಗಳನ್ನು ಎತ್ತಿಕೊಂಡು ಸಮಕಾಲೀನ ಸಮಾಜದಲ್ಲಿ ಬೆಳೆದು ಬಂದ ಅನೇಕ ಆಚರಣೆಗಳನ್ನು ಪ್ರಶ್ನಿಸುತ್ತವೆ. ಮೇಲ್ನೋಟಕ್ಕೆ ವಿಮರ್ಶಾ ಲೇಖನಗಳೆಂದು ಒಪ್ಪಿಕೊಂಡರೂ ಇವು ಯಾವುದೇ ಕೃತಿಯ ಬಗ್ಗೆ ಆಗಿರದೆ ಕೃತಿಯಲ್ಲಿ ಪ್ರತಿಪಾದಿಸಲಾಗಿದೆ ಎನ್ನಲಾದ ಆಯಾ ಸಮಾಜದ ಕಡೆಗೇ ಬೆಟ್ಟು ಮಾಡಿವೆ.*

**ತೋಟಿಯ ಮಗ** (ಕಾದಂಬರಿ)

*ಮಲಯಾಳಂ ಮೂಲ : ತಗಳಿ ಶಿವಶಂಕರ ಪಿಳ್ಳೆ*

*ಕನ್ನಡಕ್ಕೆ : ಮೋಹನ ಕುಂಟಾರ್*

**ಪುಟ : 160** **ಬೆಲೆ : ರೂ. 96**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜ್, ಕುವೆಂಪುನಗರ ಬೆಂಗಳೂರು-560 029



*ಚಾತುರ್ವರ್ಣಗಳೆಂದು ಹೇಳಿಕೊಳ್ಳುತ್ತಾ 'ಪಂಚಮ' ವರ್ಗವೊಂದನ್ನು ನಾಜೂಕಾಗಿ ಪ್ರತ್ಯೇಕಿಸಿ ಹೊಲಸನ್ನೆಲ್ಲ ತೊಳೆದು ಶುಚಿಮಾಡುವ ಕೆಲಸಕ್ಕೆ ನೇಮಿಸಿತು ನಮ್ಮ ಸಮಾಜ. ಹಿಡಿ ಅನ್ನಕ್ಕಾಗಿ ಮೇಲ್ವರ್ಗದ ಎಂಜಲು ತಿಂದು ಬದುಕಿ ಮೂರು ತಲೆಮಾರು ಕಳೆದರೂ ಮನುಷ್ಯರಂತೆ ಬಾಳಲಾರದ "ತೋಟಿ"ಗಳ ನರಕ ಸದೃಶವಾದ ಬಾಳಿನ ಗೋಳು ಈ ಕಾದಂಬರಿಯಲ್ಲಿ ಚಿತ್ರಿತವಾಗಿದೆ.*



**ಯಾರ ಜಪ್ತಿಗೂ ಸಿಗದ ನವಿಲುಗಳು** (ದೇವನೂರು ಮಹಾದೇವರ ಸಾಹಿತ್ಯ ಕುರಿತು) *ಸಂಪಾದಕಿ : ಜಿ. ಚಂದ್ರಿಕಾ*

**ಪುಟ : 208** **ಬೆಲೆ : ರೂ. 120**

**ಅಭಿನವ**, 4148/ಎ, ಮೂರನೆಯ ಮುಖ್ಯರಸ್ತೆ, ರಾಜಾಜಿನಗರ, ಎರಡನೆಯ ಹಂತ 'ಬಿ' ವಿಭಾಗ, ಬೆಂಗಳೂರು-10

*ದೇವನೂರರು ಬರೆದುದು ಅತೀ ಕಡಿಮೆಯಾದರೂ ಅವರ ಕೃತಿಗಳ ಬಗ್ಗೆ ಇತರರಿಂದ ಬಂದ ವಿಮರ್ಶಾ ಸಾಹಿತ್ಯವೇ ಅನೇಕ ಪಟ್ಟು ಅಧಿಕ! ಎಷ್ಟು ಬರೆದರು, ಎನ್ನುವುದಕ್ಕಿಂತ ಏನು ಬರೆದರು, ಎಂದು ಹುಬ್ಬೇರಿಸುವಂತೆ ರಚಿಸಿದ ಇವರ ಕೃತಿಗಳಿಗೆ ಅನೇಕ ಪ್ರಶಸ್ತಿಗಳೂ ಲಭಿಸಿವೆ. ಬದುಕನ್ನು ಹೇಗಿದೆಯೋ ಹಾಗೆ ತೋರಿಸಬಲ್ಲ ವಿಶಿಷ್ಟ ಬರವಣಿಗೆ ರೂಢಿಸಿಕೊಂಡ ಅವರ ಸಾಹಿತ್ಯದ ಕುರಿತು ಸಾಹಿತಿ-ವಿಮರ್ಶಕರು ನಡೆಸಿದ ವಿಚಾರ ಮಂಥನ.*



**ಬಣ್ಣದ ಕಾಲು** (ಸಣ್ಣ ಕಥೆಗಳು)

*ಜಯಂತ ಕಾಯ್ಕಿಣಿ*

**ಪುಟ : 144** **ಬೆಲೆ : ರೂ. 48**

**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ.ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು- 560 001.

*ಹದಿಮೂರು ಸಣ್ಣ ಕಥೆಗಳು ತಮ್ಮ ವಿಶಿಷ್ಟ ಶೈಲಿಯಲ್ಲಿ ಆತ್ಮೀಯವಾಗಿ ನಮ್ಮೊಂದಿಗೆ ನೇರ ಮಾತಿಗಿಳಿಯುತ್ತವೆ. ಓದುತ್ತ ಸಾಗಿದಂತೆ ಕಥಾಪಾತ್ರಗಳು ಪರಕೀಯವಾಗಿ ಉಳಿಯದೆ "ಅನ್ನಾ ತಿನ್ನಿ ಅನ್ನಾ" ಎಂದು ಎಚ್ಚರಿಸುವ ನಮ್ಮ ಹಿತೈಷಿಗಳಾಗುತ್ತವೆ. ಕೆಲವು ಪಾತ್ರಗಳಂತೂ ಬೂದಿಮುಚ್ಚಿದ ಕೆಂಡದಂತಿದ್ದು ಗಾಳಿ ಬೀಸಿದಾಗ ನಿಗಿ ನಿಗಿ ಉರಿದು ತಮ್ಮ ಇರುವಿಕೆಯನ್ನು ಸಾರುತ್ತವೆ. ಎಳೆಯ ಪ್ರತಿಭೆಯೊಂದು ತನ್ನ ಬಣ್ಣದ ಚಿತ್ರದಿಂದ ಮುಖಪುಟದ ಅಂದವನ್ನು ಹೆಚ್ಚಿಸಿದೆ.*

**ನಕ್ಷೆ-ನಕ್ಷತ್ರ** (ಸಾಹಿತ್ಯ-ಇತಿಹಾಸ-ಸಂಸ್ಕೃತಿ ಕುರಿತ ಲೇಖನಗಳು)

*ಡಾ॥ ಬಸವರಾಜ ಕಲ್ಗುಡಿ*

**ಪುಟ : 244** **ಬೆಲೆ : ರೂ. 120**

**ಕನ್ನಡ ಸಂಘ**, ಕ್ರೈಸ್ಟ್ ಕಾಲೇಜ್, ಕುವೆಂಪುನಗರ, ಬೆಂಗಳೂರು- 560 029



*ಸಾಹಿತ್ಯ ಮತ್ತು ಸಂಸ್ಕೃತಿಗಳ ಸಂಬಂಧವನ್ನು [illegible] ಏಕಮುಖೀಯವಾಗಿರಬೇಕಾಗಿಲ್ಲ ಎಂಬ [illegible] ಸೃಜನಶೀಲ ಹುಡುಕಾಟದ ಫಲವಾಗಿ ಬಂದ ಲೇಖನಗಳ ಸಂಗ್ರಹ. [illegible] ಸಾಹಿತ್ಯಕ್ಕೆ ಸಂಬಂಧಿಸಿದಂತೆ ಸಂಸ್ಕೃತಿ - ಸಾಹಿತ್ಯ, ಇತಿಹಾಸ [illegible] ಜೊತೆಯಾಗಿ [illegible] ಗುರುತಿಸುವ ಅಧ್ಯಯನ ಯೋಗ್ಯ ಲೇಖನಗಳು.*

- [illegible]

# ತಂಬೂರಿ ಬೆಳಕಲ್ಲಿ

ವಿಜಯವಾಮನ

ಲೇಖನದ ಶೀರ್ಷಿಕೆ ಓದುಗರನ್ನು ಅಚ್ಚರಿಗೊಳಿಸಿದರೆ ಬರೆದದ್ದು ಸ್ವಲ್ಪ ಸಾರ್ಥಕವಾದಂತೆ! ಯಾರೇ ಆಗಲಿ ಸಂಗೀತದ 'ನಾದ'ವನ್ನು ಬಲ್ಲರೇ ಹೊರತು ಅದರ ಬಣ್ಣ ಅಥವಾ ಬೆಳಕನ್ನು ಕುರಿತು ಯೋಚಿಸಿದವರು ವಿರಳ. 'ಸಂಗೀತದಲ್ಲಿ ನಾದ ಅರ್ಥವಾದೀತು, ಆದರೆ ಬೆಳಕು?' ಎಂದು ಹುಬ್ಬೇರಿಸುತ್ತೇವೆ. ಮನುಷ್ಯನ ಪಂಚೇಂದ್ರಿಯಗಳು, ಅವುಗಳ ಇತಿಮಿತಿ ಹಾಗೂ ಸಾಮರ್ಥ್ಯಗಳ ಬಗ್ಗೆ ಸರಿಯಾದ ತಿಳಿವು ಇಲ್ಲದಿರುವುದೇ ಇಂಥ ಅಚ್ಚರಿಯ ಪ್ರತಿಕ್ರಿಯೆಗಳಿಗೆ ಕಾರಣ. ಇದು ಯೋಗ ಹಾಗೂ ವಿಜ್ಞಾನ ಎರಡಕ್ಕೂ ಸಂಬಂಧಿಸಿದ ವಿಚಾರ. ಪತಂಜಲಿಯು ವರ್ಣ ಪ್ರವೃತ್ತಿ, ಶಬ್ದ ಪ್ರವೃತ್ತಿಗಳ ಬಗ್ಗೆ ಹೇಳುತ್ತಾ ''ವಿಶೋಕಾ ವಾ ಜ್ಯೋತಿಷ್ಮತೀ'' ಎನ್ನುತ್ತಾನೆ. ಬಸವಣ್ಣ ಹೇಳುವ ''ನುಡಿದರೆ ಸ್ಫಟಿಕದ ಶಲಾಕೆಯಂತಿರ ಬೇಕು, ನುಡಿದರೆ ಮಾಣಿಕದ ದೀಪ್ತಿ ಯಂತಿರಬೇಕು'' ಎನ್ನುವ ಮಾತುಗಳೂ ನೇರವಾಗಿ ಯೋಗಶಾಸ್ತ್ರದಿಂದಲೇ ಬಂದದ್ದು.

ಎಲ್ಲರಿಗೂ ತಿಳಿದಂತೆ ಶಬ್ದ, ಬೆಳಕು, ವಿದ್ಯುತ್ ಮುಂತಾದವು ಶಕ್ತಿ (ಎನರ್ಜಿ)ಯ ಬೇರೆ ಬೇರೆ ರೂಪಗಳು. ಶಕ್ತಿಯ ರೂಪ ಪರಿವರ್ತನೆಯು ತಿಳಿದಂಥ ವಿಚಾರವೇ. ಈ ಹಿನ್ನೆಲೆಯಲ್ಲಿ 'ನಾದ' ಮತ್ತು 'ಬಣ್ಣ' ಶಕ್ತಿಯ ಎರಡು ರೂಪಗಳು ಎಂದು ಒಪ್ಪಿಕೊಳ್ಳಬೇಕಾಗುತ್ತದೆ. ವಿಚಿತ್ರವಾದ ವೈಜ್ಞಾನಿಕ ಸತ್ಯ ಘಟನೆಯೊಂದರ ಬಗ್ಗೆ ಎಲ್ಲೋ ಓದಿದ್ದು ನೆನಪಾಗುತ್ತದೆ. ಟಿಬೆಟ್ ಮಿಲಿಟರಿ ಅಧಿಕಾರಿಯೊಬ್ಬ ತನ್ನ ಜೊತೆಯಲ್ಲಿ ಒಬ್ಬ ಲಾಮಾನನ್ನು ಕರೆದುಕೊಂಡು ಕತ್ತಲೆಯ ಗುಹೆಯನ್ನು ಹೊಕ್ಕಾಗ ದಾರಿಕಾಣದೆ ತಬ್ಬಿಬ್ಬಾಗುತ್ತಾನೆ. ಆಗೊಂದು ಅಚ್ಚರಿ ಕಾದಿದೆ. ಲಾಮಾ ತನ್ನ ಜಾಗಟೆಯನ್ನು ಮರದ ಸುತ್ತಿಗೆಯಿಂದ ಹೊಡೆದು, ಹೊರಟ ಶಬ್ದ ತರಂಗಗಳೆಲ್ಲ ರೇಡಿಯಂ ಕಿರಣಗಳಂತೆ ಹಸಿರು ಬಣ್ಣ ಸೂಸಿ, ಬೆಳಕು ಮೂಡಿಸುತ್ತಾನೆ. ಶಾಸ್ತ್ರಗಳಲ್ಲಿ 'ನಾದ' ಎನ್ನುವುದಕ್ಕೆ 'ನಾ' ಎಂದರೆ ಪ್ರಾಣವೆಂದೂ, 'ದ' ಎಂದರೆ ಅಗ್ನಿಯೆಂದೂ ಅರ್ಥವಿದೆ.

''ನಕಾರಂ ಪ್ರಾಣನಾಮಾನಂ ದಕಾಶಮನಲಂ ವಿದುಃ'' ಎಂದು ಸಂಗೀತರತ್ನಾಕರ ಹೇಳುತ್ತದೆ.

ಕೆಲವು ಜನ ಕೆಲವು ಬಣ್ಣ ಅಥವಾ ಕೆಲವು ಶಬ್ದಗಳನ್ನೇ ಏಕೆ ಇಷ್ಟ ಪಡುತ್ತಾರೆ? ಈ ರೀತಿಯ ಆಯ್ಕೆಗೆ ಕಾರಣಗಳೇನು? ತೆಳು ಬಣ್ಣಗಳು ಕೆಲವರಿಗೆ ಇಷ್ಟವಾದರೆ ಸ್ನಿಗ್ಧ ಬಣ್ಣಗಳು ಕೆಲವರಿಗೆ ಇಷ್ಟವಾಗತ್ತೆ. ಪ್ರಶಾಂತವಾದ ಬಾನ್ಸುರಿಯ ನಾದ ಕೆಲವರಿಗೆ ಮೆಚ್ಚುಗೆಯಾದರೆ, Metallic Rock ಸಂಗೀತಕ್ಕೆ ಮೈಕೈಯೆಲ್ಲ ಝಾಡಿಸುತ್ತಾ enjoy ಮಾಡುವವರೂ ಇಲ್ಲವೇ? ಅಥವಾ ಒಬ್ಬನಿಗೆ ಸಿತಾರ್ ಇಷ್ಟವಾದರೆ ಇನ್ನೊಬ್ಬನಿಗೆ ಷಹನಾಯ್ ರುಚಿಸುತ್ತದಲ್ಲ ! ಇಂಥ ಆಯ್ಕೆಗಳು ಯಾಕಿವೆ? ಈ ಆಯ್ಕೆಗಳ ಹಿಂದೆ ಎಂಥ ಮನಸ್ಸುಗಳಿರುತ್ತವೆ? ಮನುಷ್ಯನ ಅಂತರಂಗದ



ಸಾಮರ್ಥ್ಯ, ಅವನ ಆತ್ಮ ವಿಕಾಸದ ಹಂತ, ಅವನ ಸ್ಥೂಲ ಸೂಕ್ಷ್ಮಾದಿ ಗುಣಗಳು, ಅವನ ಮನೋಭಾವನೆ ಇತ್ಯಾದಿಗಳೆಲ್ಲ ಅವನ ಇಂಥ 'ಆಯ್ಕೆ'ಗಳಿಗೆ ಕಾರಣವಿರಬಹುದೇ? ಅಥವಾ ಇಂಥ 'ಆಯ್ಕೆ'ಗಳಿಂದಲೇ ಮೇಲಿನ ವಿಷಯಗಳೆಲ್ಲ ನಿರ್ಧಾರಿತವಾಗುತ್ತವೋ? ಬಣ್ಣಗಳ ವಿಷಯದಲ್ಲಂತೂ ನಾವು ನಮ್ಮ ನಿಜವಾದ 'ಬಣ್ಣ' ಬಯಲು ಮಾಡಿಕೊಂಡು ಬಿಡುತ್ತೇವೆ. ತಿಳಿನೀಲಿ ಕವಿ ಹೃದಯದವನದೆಂದೋ, ನಸುಗುಲಾಬಿ ಕನಸುಗಾರನದೆಂದೋ, ಹಸಿರು ಪ್ರಸನ್ನ ಚಿತ್ತನದೆಂದೋ, ಕೆಂಪು possessive ಎಂದೋ ಏನೇನೋ ಬುರುಡೆ ಜ್ಯೋತಿಷ್ಯ ಬಿಡಬಹುದು. ಇಷ್ಟಾದರೂ ಆಗತಾನೇ ಹುಟ್ಟಿದ ಮಗು ಶಬ್ದಕ್ಕೆ ಪ್ರತಿಕ್ರಿಯಿಸುವ ಹಾಗೆ ಬಣ್ಣಕ್ಕೆ [illegible] ಬಣ್ಣದ ಪ್ರಪಂಚ [illegible] ನಂತರವೇನೋ!

ಜಗತ್ತಿನ ಎಲ್ಲ ಧರ್ಮಗಳೂ ಸೃಷ್ಟಿಯ ಪ್ರಾರಂಭ 'ನಾದ'ದಿಂದಲೇ ಎಂದು ಹೇಳುತ್ತವೆ. ಬೈಬಲ್ 'In the beginning was the Word' ಎನ್ನುತ್ತದೆ. ಖುರ್ ಆನ್‌ನ ನಂಬಿಕೆಯೂ ಇಂಥದ್ದೇ. ಕೃಷ್ಣನ ಕೊಳಲ ನಾದ, ಶಿವನ ಡಮರುವಿನ ನಾದ ಅಥವಾ ವಿಷ್ಣುವಿನ ಶಂಖದಿಂದ ಹೊಮ್ಮಿದ 'ಓಂ'ಕಾರ ಅಥವಾ ಪ್ರಣವ ನಾದವೇ ಎಲ್ಲಕ್ಕೂ ಮೂಲ ಎಂಬ ನಂಬಿಕೆ ಇದೆ.

ನಾದದ ಮುಂದಿನ ಹಂತ ಬೆಳಕು ಅಥವಾ ಬಣ್ಣ. ಶಕ್ತಿಯು ಯಾವುದೇ ಪ್ರಕಾರದಲ್ಲಿಯೂ ಅದರ ಮೂಲ ಸೆಲೆಯನ್ನು ಪರಮಾಣುಗಳ ಕಂಪನದಲ್ಲಿ ಗುರ್ತಿಸಲಾಗುತ್ತದೆ. ಈ ಕಂಪನವನ್ನೇ Vibration ಎನ್ನುತ್ತೇವೆ. ಇಂಥಾ ಕಂಪನಗಳು ಕಿವಿಗೆ ಬಿದ್ದಾಗ, ಅಂದರೆ ಶ್ರವ್ಯಾನುಭವಕ್ಕೆ ಸಿಕ್ಕಾಗ, ಶಬ್ದವೆನ್ನಿಸಿಕೊಂಡರೆ, ಕಣ್ಣಿಗೆ ಬಿದ್ದಾಗ, ಅಂದರೆ ದೃಶ್ಯಾನುಭವಕ್ಕೆ ದೊರಕಿದಾಗ, ಬಣ್ಣವೆನ್ನಿಸಿಕೊಳ್ಳುತ್ತದೆ. ಈ ಕಂಪನಗಳ ಇನ್ನೂ ಸ್ಥೂಲ ರೂಪವೇ ಸ್ಪರ್ಶವಾಗಿ ಪರಿಣಮಿಸುತ್ತದೆ. ಎಲ್ಲರಿಗೂ ಎಲ್ಲ ಬಣ್ಣಗಳು ಒಂದೇ ತೆರನಾಗಿ ಕಾಣುವುದಾಗಲಿ, ಎಲ್ಲ ಶಬ್ದಗಳೂ ಒಂದೇ ಬಗೆಯಾಗಿ ಕೇಳುವುದಾಗಲಿ ಸಾಧ್ಯವಿಲ್ಲ. ಅದು ವ್ಯಕ್ತಿಯ ಸಾಮರ್ಥ್ಯದ ಮೇಲೆ ಅವಲಂಬಿತವಾಗಿರುತ್ತದೆ. ಪಂಚೇಂದ್ರಿಯಗಳೆಲ್ಲವೂ ಬೇರೆಬೇರೆಯಾಗಿಯೇ ಅನುಭವವನ್ನು ಪಡೆಯುತ್ತವೆ ಎನ್ನುವುದು ಮನುಷ್ಯನ ಸಾಮಾನ್ಯ ಗ್ರಹಿಕೆ. ಆದರೆ ಬಗೆಬಗೆಯ ಅನುಭವಗಳು ಬೇರೆಬೇರೆ ಇಂದ್ರಿಯಗಳ ಮೂಲಕ [illegible] ಮನಸ್ಸು ಅವುಗಳನ್ನು ಅಂತರಂಗದಲ್ಲಿ [illegible] ಕೊಳ್ಳುತ್ತದೆ ಎಂಬುದು ಯೋಗದಲ್ಲಿ [illegible] ಸಂಗತಿ. ಯೋಗದರ್ಶನವು ''[illegible] ಪ್ರವೃತ್ತಿರುತ್ಪನ್ನಾ ಮನಸಃ'' ಎಂದು [illegible] ಹೇಳುತ್ತಾ ಸೂಕ್ಷ್ಮವಾದ, ಗೂಢವಾದ [illegible] ದಕ್ಕಿಸಿಕೊಳ್ಳಬಹುದು ಎಂದು [illegible] ಇಂಗ್ಲಿಷ್ ಭಾಷೆಯಲ್ಲಿ SYNAESTHESIA ಎನ್ನುವ ಪದ ಇದೆ. [illegible] ''[illegible] ಪ್ರಚೋದನೆಯಲ್ಲಿ ಎರಡು ಅಥವಾ ಹೆಚ್ಚು ಸಂವೇದನೆಗಳ ಅನುಭವ [illegible]

ಹಿಡಿಯಿಡುವುದು.'' ಅಂಥ ಅಥವಾ ಒಂದು ಇಂದ್ರಿಯಕ್ಕೆ ದಕ್ಕಿದ ಅನುಭವ ಬೇರೆ ಇಂದ್ರಿಯಕ್ಕೂ ಗ್ರಾಹ್ಯವಾಗಿರುವುದು. ನಮ್ಮ ದಿನನಿತ್ಯದ ಮಾತುಗಳಲ್ಲಿ ನಾವು ಇಂಥ ಎಷ್ಟೋ ಪ್ರಯೋಗಗಳನ್ನು ಮಾಡಿರುತ್ತೇವೆ. Loud colours, Sweet voice, Cold blue, Hot red, Tone of the colour ಇತ್ಯಾದಿ ಕಾವ್ಯಗಳಲ್ಲೂ ಇಂಥಾ ಪ್ರಯೋಗಗಳಿವೆ. ಗೋಪಾಲಕೃಷ್ಣ ಅಡಿಗರು ಒಂದೆಡೆ ''ಬಣ್ಣ ಬಣ್ಣದ ಗೊಗ್ಗರು ಗಲಭೆ'' ಅನ್ನುತ್ತಾರೆ. ಇಂಥದೇ ಮಿಶ್ರ ಸಂವೇದನೆಗೆ ಇನ್ನೊಂದು ಉದಾಹರಣೆ ಕೀಟ್ಸ್ ಕವಿಯ ನೈಟಿಂಗೇಲ್ ಪದ್ಯದ ಈ ಸಾಲುಗಳು-

*Tasting of Flora and the Country green*
*Dance and provencal song, and sunburnt mirth*

ಇಲ್ಲಿ ರುಚಿ, ದೃಶ್ಯ, ವರ್ಣ, ಶಬ್ದ, ಸ್ಪರ್ಶ,ಚಲನೆ ಮುಂತಾದವುಗಳೆಲ್ಲ ಅನುಭವದಲ್ಲಿ ವ್ಯಕ್ತವಾಗುತ್ತದೆ !

ವೆಂಕಟಮಖಿಯು 'ಚತುರ್ದಂಡೀ ಪ್ರಕಾಶಿಕಾ' ದಲ್ಲಿ ಶ್ರುತಿಯ ಬಗ್ಗೆ ಹೇಳುವ ಶ್ಲೋಕ ಇದೆ.

''ತಾ ಏತಾಃ ಶ್ರುತ್ಯಃ ವೀಣಾಯಾಂ ಪ್ರಕಾಶಂತೇ---''

ಇಪ್ಪತ್ತೆರಡು ಶ್ರುತಿಗಳಿವೆಯಂತೆ. ಇವುಗಳು ವೀಣೆಯಲ್ಲಿ ಬೇರೆ ಬೇರೆಯಾಗಿ ಪ್ರಕಾಶಿಸುತ್ತವೆ, ಎನ್ನುತ್ತಾನೆ. ವಿಚಿತ್ರವಾದರೂ ಸತ್ಯವಾದ ಮಾತು. ತಂತ್ರಯೋಗಕ್ಕೆ ಸಂಬಂಧಿಸಿದಂತೆ ಅಲ್ಲಮ ಪ್ರಭು ಹೇಳುವುದನ್ನು ಗಮನಿಸಿ :

'ಹೃದಯಸ್ಥಾನದಲ್ಲಿ ಅನಾಹತ ಚಕ್ರ, ವಾಯುವೆಂಬ ಮಹಾಭೂತ.

------ಅಲ್ಲಿಹ ಅಕ್ಷರ ಹನ್ನೆರಡು ---ಅದರ ವರ್ಣ ನೀಲವರ್ಣ''.

ಸಂಗೀತಾನುಭವವೂ ತುಂಬ ಗಹನದಲ್ಲಿ ಯೋಗಾನುಭವವೇ. ಇದೇ ಕಾರಣಕ್ಕಾಗಿ ತ್ಯಾಗರಾಜರಿಗೆ ನಾದ ಯೋಗಿಗಳೆಂದೇ ಕರೆಯುತ್ತೇವೆ. ಪುದುಕೋಟೆಯ ಗೆಜೆಟಿಯರನಲ್ಲಿ ತ್ಯಾಗರಾಜರು ಜ್ಯೋತಿ ಸ್ವರೂಪಿಣಿ ರಾಗವನ್ನು ಹಾಡಿ ದೀಪ ಹೊತ್ತಿಸಿದ ಬಗ್ಗೆ ದಾಖಲೆ ಇದೆ. ರಾಗದ ಕ್ರಮವಿಲಾಸಕ್ಕೆ ತಕ್ಕಂತೆ ಆ ದೀಪ ಬಗೆಬಗೆಯ ಉಜ್ವಲತೆಯಿಂದ ಬೆಳಗಿತು ಎಂದೂ ದಾಖಲಾಗಿದೆ. (A Manual of the Pudukotta State, Vol.II, Part I)

ಸಂಗೀತವನ್ನು ವೈಜ್ಞಾನಿಕ ವಿಶ್ಲೇಷಣೆಗೆ ಒಳಪಡಿಸಿ ಅನೇಕ ಪ್ರಯೋಗಗಳನ್ನು ನಡೆಸಲಾಗಿದೆ. ಅದರಲ್ಲೂ ತಂಬೂರಿಯ 'ನಾದ'ದ ವಿಶ್ಲೇಷಣೆ ಕುರಿತು ಅನೇಕ ಸಂಶೋಧನೆಗಳಾಗಿವೆ. ಆ್ಯಂಟನ್ ಏರೆನ್ಸ್‌ವಿಗ್, ಡಾ|| ಸಿ.ವಿ. ರಾಮನ್, ಡಾ|| ಬಿ.ಸಿ. ದೇವ್, ಗಣೇಶ ಸುಂದರಂ ಮುಂತಾದವರು ಈ ವಿಚಾರವಾಗಿ ಬೇಕಾದಷ್ಟು ಪ್ರಯೋಗಗಳನ್ನು ಮಾಡಿದ್ದಾರೆ. ಧ್ವನಿ ಮತ್ತು ವರ್ಣಗಳು ನಮ್ಮ ಪ್ರಜ್ಞೆಯನ್ನೂ ಮೀರಿದ ಹಂತಗಳಲ್ಲಿ ಎಂತೆಂಥಾ ಪ್ರಭಾವಗಳನ್ನು ಬೀರುತ್ತವೆ ಎನ್ನುವ ಸಂಶೋಧನೆ ನಡೆದಿದೆ. ಡಾ|| ಸಿ. ಆರ್. ಶಂಕರನ್ ಎನ್ನುವವರು 'ಧ್ವನಿವರ್ಣ ಶಾಸ್ತ್ರ' (Alpha phonoid Theory) ಎಂದೇ ಶಾಸ್ತ್ರ ನಿರೂಪಿಸಿದ್ದಾರೆ. ಶಬ್ದ ಹಾಗೂ ಬಣ್ಣಗಳ ಸಂಪರ್ಕ, ಸಂವೇದನೆಗಳ ಸಾಧ್ಯತೆ ಕುರಿತು ಸಾಕಷ್ಟು ಚರ್ಚೆಗಳಾಗಿವೆ. ಪಂಡಿತ ರವಿಶಂಕರ್ ಅವರ ಆಯ್ದ ನಾಲ್ಕು ರಾಗಾಲಾಪಗಳನ್ನು ಶ್ರೋತೃ ಸಮುದಾಯಕ್ಕೆ ನೀಡಿ, ಭಾವನೆಗಳನ್ನು ಪ್ರಚೋದಿಸುವ ಕ್ರಮ ಕುರಿತು ಪ್ರಯೋಗ ಹಾಗೂ ಅದರ Feedback ಮಾಹಿತಿಗಳು ಲಭ್ಯ ಇವೆ. ಡಾ|| ಎ. ಡಾನ್ಯೆಲು ಅನ್ನುವವರು ಹಿಂದೂಸ್ಥಾನಿ ರಾಗ ಕಾಪಿ ಬಗ್ಗೆ ಸಂಗ್ರಹಿಸಿರುವ ಈ ಮಾಹಿತಿಯ ಸ್ವಾರಸ್ಯವನ್ನು ಗಮನಿಸಿ: ''ಭೋಗವನ್ನು ಪ್ರಚೋದಿಸುವ ಪ್ರಜ್ವಲಿತ ಶ್ವೇತವರ್ಣದ ಕಾಪಿಕಾ (ಕನ್ನಿಕೆ) ನೀಲವರ್ಣದ ಉಡಿಗೆ ತೊಟ್ಟು ಕಾಯುತ್ತಿದ್ದಾಳೆ''.

ಕರ್ಣಾಟಕ ಸಂಗೀತದಲ್ಲಿ 'ವರ್ಣಗಳು' ಎಂಬ ಪ್ರಮುಖ ರಚನೆಗಳೇ ಇವೆ. ಸಂಗೀತ ಶಾಸ್ತ್ರದ ತಾಂತ್ರಿಕ ದೃಷ್ಟಿಯಿಂದ ಬಹಳ ಮುಖ್ಯ ರಚನೆಗಳಿವು. ಅಭ್ಯಾಸಕ್ಕೆ ಹಾಗೂ ಕಛೇರಿ ಕಾರ್ಯಕ್ರಮಕ್ಕೆ ಎರಡೂ ಸಂದರ್ಭಗಳಲ್ಲೂ ಈ ರಚನೆಗಳು ಸೊಗಸು ನೀಡುತ್ತವೆ. ಆದರೆ ಇವಕ್ಕೆ 'ವರ್ಣ' ಎಂದೇಕೆ ಕರೆದರು ಎನ್ನುವುದು ಪ್ರಸ್ತುತ ವಿಚಾರ.

'ವರ್ಣೋः ಗಾನಕ್ರಿಯಾ ಉಚ್ಯತೇ' ಎನ್ನುತ್ತದೆ ಶಾಸ್ತ್ರ. ಚಿತ್ರ ಕಲೆಯಲ್ಲಿ ಬಣ್ಣಗಳು ನೀಡುವ ಪರಿಣಾಮದ ಹಾಗೆ ಇಲ್ಲಿ ರಾಗವೊಂದರ ಚಿತ್ರೀಕರಣವಾಗುತ್ತದೆ. ಆರೋಹ ಅವರೋಹಗಳ ಮೂಲಕ ವರ್ಣಧಾತುಗಳನ್ನು ಹೆಣೆಯುವುದರಿಂದ ಸಂಗೀತ ಸಿದ್ಧಿಯಾಗುತ್ತದೆ. ಇಲ್ಲಿ 'ವರ್ಣಧಾತು' ಎಂಬ ಪದವನ್ನು ಗಮನಿಸಿ. colour pigment ಎಂಬ ಪದಕ್ಕೆ ಸಮಾನಾರ್ಥಕ. 'ಹೆಣೆಯುವುದು' ಎನ್ನುವ ಪದವನ್ನೂ ಗಮನಿಸಿ. ಸ್ವರಗಳನ್ನು ಬೆರಳುಗಳಲ್ಲಿ ಹಿಡಿದು ಹೆಣೆಯಬಹುದಾದ 'ವಸ್ತು' (Matter) ಎನ್ನುವಂಥಾ ವಿವರಣೆ ಇದು! ನೀಲಾಂಬರಿ, ಕನಕಾಂಗಿ, ಶ್ಯಾಮಲಾಂಗಿ, ಧವಳಾಂಬರಿ, ಸುವರ್ಣಾಂಗಿ ಎನ್ನುವ ರಾಗಗಳೇ ಇವೆ.

ಹಜರತ್ ಇನಾಯತ್ ಖಾನ್ ಎನ್ನುವ ಸೂಫಿ ಸಂತನೊಬ್ಬ ಶಬ್ದದ ಬಣ್ಣಗಳ ಬಗ್ಗೆ ವ್ಯಾಖ್ಯಾನ ಮಾಡುತ್ತಾನೆ. ಯೋಗದಲ್ಲಿ ಶ್ರವ್ಯ ಹಾಗೂ ದೃಶ್ಯ ಅನುಭವಗಳು ಐಕ್ಯವಾಗಿ ಒಂದು ಇನ್ನೊಂದಾಗುವ ಅಂದರೆ ಬಣ್ಣವನ್ನು ಕೇಳುವ ಅಥವಾ ನಾದವನ್ನು ಕಾಣುವ ಪರಿಯನ್ನು ಹೇಳುತ್ತಾರೆ. ಆಲ್ಡಸ್ ಹಕ್ಸ್‌ಲಿ ತನ್ನ Doors of perception ಅನ್ನುವ ಲೇಖನದಲ್ಲಿ ಇಂಥದೇ ಕೆಲವು ಸಂಗತಿಗಳನ್ನು ಉದಾಹರಿಸುತ್ತಾನೆ. ಭಾಸ್ಕರ್ ಚಂದಾವರ್ಕರ್ ಎನ್ನುವವರು ಇಡೀ ಸಂಗೀತಾನುಭವವನ್ನು ಕಣ್ಣಿಗೆ ಕಟ್ಟುವಂತೆ ''ಬಣ್ಣಿ''ಸುತ್ತಾರೆ. ಕೇಸರಬಾಯಿ ಕೇಸ್ಕರ್ ಎನ್ನುವ ಪ್ರಸಿದ್ಧ ಗಾಯಕಿಯ ಮಾಲಕೌಸ್ ರಾಗ ತನ್ನ ಮೇಲೆ ಮಾಡಿದ ಪರಿಣಾಮವನ್ನು ಡಾ|| ಬಿ.ಸಿ.ದೇವ ಹೀಗೆ ದಾಖಲಿಸಿದ್ದಾರೆ: ಆ ಹಾಡುಗಾರಿಕೆಯ ಸಂದರ್ಭದಲ್ಲಿ ''ವರ್ಣರಂಜಿತ ತುಂತುರ ಕಾರಂಜಿ''ಯನ್ನು ಕಂಡು ಅನುಭವಿಸಿದ ಹಾಗಾಯಿತು.

ಈ ಲೇಖನಕ್ಕೆ ಶೀರ್ಷಿಕೆ ಹೊಳೆಯಿಸಿದ ಕವಿ ಜಿ.ಎಸ್.ಎಸ್. ಅವರ ಇತ್ತೀಚಿನ ಸಾಲುಗಳು ಹೀಗಿವೆ :

*ಇಗೋ ಹೊರಟೆ*
*ಗೋಡೆಗಳಿರದ ಬಟ್ಟ ಬಯಲೊಳಗೆ*
*ತಂಬೂರಿ ಬೆಳಕಲ್ಲಿ ದಾರಿ ಹುಡುಕುತ್ತಾ.*

*(ಕೃಪೆ: ಆಕಾಶವಾಣಿ, ಭದ್ರಾವತಿ)*

ವಿಜಯವಾಮನ
ನಂ. ೧,ಗುಲ್ ಮೊಹರ್, ಕೆ.ಎಚ್.ಬಿ. ಕಾಲನಿ, ಗಾಂಧಿನಗರ, ಸಾಗರ.



# ಮಧ್ಯಕಾಲೀನ ಸಮಾಜ ಮತ್ತು ಸಾಮಾಜಿಕ ಚಿಂತನೆಗಳು

"ಮನುಷ್ಯನ ಜ್ಞಾನ ಸ್ವತಂತ್ರ ಅಸ್ತಿತ್ವವನ್ನುಳ್ಳ ಪ್ರಕೃತಿಯ (ಭೌತವಸ್ತು) ಪ್ರತಿಬಿಂಬವಾಗಿರುವಂತೆ ಮನುಷ್ಯನ ಸಾಮಾಜಿಕ ಜ್ಞಾನ, ಅಂದರೆ ತಾತ್ವಿಕ, ಧಾರ್ಮಿಕ, ರಾಜಕೀಯ ವಿಚಾರಗಳಿಗೆ ಸಂಬಂಧಿಸಿದ ಅವನ ಅನೇಕ ದೃಷ್ಟಿಕೋನಗಳು ಮತ್ತು ಸಿದ್ಧಾಂತಗಳು, ಸಮಾಜದ ಆರ್ಥಿಕ ವ್ಯವಸ್ಥೆಯನ್ನು ಪ್ರತಿಬಿಂಬಿಸುತ್ತವೆ," ಎಂದು ಲೆನಿನ್ ಹೇಳಿದ್ದಾರೆ. ಭೌತಿಕ ಸಂಪತ್ತಿನ ಉತ್ಪಾದನಾ ವಿಧಾನ ಬಹುಮಟ್ಟಿಗೆ ಸಾಮಾಜಿಕ ಸಂಬಂಧಗಳ ಬುನಾದಿಯಾಗಿರುತ್ತದೆ ಎಂಬ ಗ್ರಹಿಕೆಯೊಡನೆ ನಾವು ಮಧ್ಯಕಾಲೀನ ಸಮಾಜ ವಿಶ್ಲೇಷಣೆಯನ್ನು ಮಾಡಬೇಕಾಗುತ್ತದೆ. ಭಾರತದ ಜಾತಿ ವ್ಯವಸ್ಥೆ - ಅಸಮಾನತೆಗಳು ನೇರವಾಗಿ ಉತ್ಪಾದನ ಸಂಬಂಧಗಳು ಹಾಗೂ ಹಂಚಿಕೆ ವಿಧಾನಗಳಿಂದ ರೂಪುಗೊಂಡಿವೆ. ಎಲ್ಲ ಸಾಮಾಜಿಕ ಕಾರ್ಯಗಳ ಧಾರ್ಮಿಕ ಲಕ್ಷಣಗಳು ಬ್ರಾಹ್ಮಣನಿಗೆ ದಾನ ಕೊಡುವುದರಿಂದಲೇ ರೂಪುಗೊಂಡಂಥವು. ಎಲ್ಲ ಉತ್ಪಾದನಾ ಸಾಮಗ್ರಿಗಳು ತಮ್ಮ ಬೆಲೆಯನ್ನು ಗಳಿಸಿಕೊಳ್ಳುತ್ತಿದ್ದುದು ಬ್ರಾಹ್ಮಣನ ಧಾರ್ಮಿಕ ಕೃಪಾ ಕಟಾಕ್ಷದಿಂದಲೇ. ಹೀಗಾಗಿ ಶ್ರೇಣೀಕರಣದ ಸಂಬಂಧಗಳು ಬ್ರಾಹ್ಮಣ ಮೌಲ್ಯದ ಹಿನ್ನೆಲೆಯಲ್ಲಿ ಹೆಚ್ಚಿಕೊಳ್ಳುತ್ತಾ ಹೋಗಿರುವುದು ಕಂಡುಬರುತ್ತದೆ.

### ಊಳಿಗಮಾನ್ಯ ವ್ಯವಸ್ಥೆ

ಭಾರತದ ಊಳಿಗಮಾನ್ಯ ಆಸ್ತಿಯ ಬೆಳವಣಿಗೆಯು ಭೂಮಿಯ ಸಾಮೂಹಿಕ ಒಡೆತನವನ್ನು ಛಿದ್ರಗೊಳಿಸಿ ಆಸ್ತಿಯನ್ನು ಖಾಸಗೀಕರಣ (ದಾನ) ಮಾಡುವುದರ ಮೂಲಕ ಆಯಿತು. ಈ ಪ್ರಕ್ರಿಯೆ ರೈತರ ಆರ್ಥಿಕ ಗುಲಾಮಿತನದ ಬೆಳವಣಿಗೆಗೆ ಕೂಡ. ಉತ್ಪಾದನಾ ಶಕ್ತಿಗಳಿಂದ ಮಿಗುತಾಯವನ್ನು ಪಡೆದು ಅದನ್ನೂ ಆಳುವ ವರ್ಗದ ವಿವಿಧ ಸಮೂಹಗಳಿಗೆ ವಿತರಣೆ ಮಾಡಿಕೊಳ್ಳುವ ಪ್ರಕ್ರಿಯೆ ಅವ್ಯಾಹತವಾಗಿ ಮಧ್ಯಕಾಲೀನ ಸಮಾಜದಲ್ಲಾಯಿತು. ಲಭ್ಯವಿರುವ ಶಾಸನ ಹಾಗೂ ಸಾಹಿತ್ಯ ಈ ವಾದವನ್ನು ಪುಷ್ಟೀಕರಿಸುತ್ತದೆ.

ಕೃಷಿಯ ವಿಸ್ತರಣೆಯನ್ನು ಹಾಗೂ ಮಿಗುತಾಯ ಹೆಚ್ಚಳವನ್ನು ಉಚಿತ ಭೋಜನ (ಸತ್ರ), ಯಾತ್ರಾ (ತೀರ್ಥ) ಮತ್ತು ಪುರೋಹಿತಶಾಹಿ ಸಂಸ್ಥೆ (ಮಠ, ದೇವಸ್ಥಾನ)ಗಳಿಗಾಗಿ ಉಪಯೋಗಿಸಿಕೊಳ್ಳಲಾಯಿತು. ಮಧ್ಯಕಾಲೀನ ಸಮಾಜದಲ್ಲಿ ದೇವಸ್ಥಾನಗಳು ರಾಜಕೀಯ ಶಕ್ತಿಯನ್ನು ನ್ಯಾಯಬದ್ಧ ಗೊಳಿಸುವ ಹಾಗೂ ರೈತರ ಅಧೀನತೆಯನ್ನು ಬಲವಾಗಿ ನೆಲೆಗೊಳಿಸುವ ಸಾಧನವಾಯಿತು. ಆರಂಭದಲ್ಲಿ ಇದು ರಾಜಕೀಯವಾಗಿ ಪ್ರಮುಖವಾಗಿದ್ದ ಕಾಂಚಿ, ಐಹೊಳೆ, ಪಟ್ಟದಕಲ್, ಬಾದಾಮಿ ಮುಂತಾದ ಸ್ಥಾನಗಳಿಗೆ ಮಾತ್ರ ಸೀಮಿತವಾಗಿದ್ದು ನಂತರ ಗ್ರಾಮೀಣ ಪ್ರದೇಶಗಳಿಗೂ ಹರಡಿದ್ದನ್ನು ಗಮನಿಸಬಹುದು. ಸಿರಾದ ಮಂಡಲೇಶ್ವರನೊಬ್ಬ ದೇವಸ್ಥಾನ ಹಾಗೂ ಸತ್ರಕ್ಕಾಗಿ ಅರಮನೆಯನ್ನು ಮತ್ತು ಇಡೀ ಗ್ರಾಮವನ್ನು ದತ್ತಿ ಬಿಟ್ಟಿದ್ದಕ್ಕೆ ಉಲ್ಲೇಖಗಳಿವೆ. (EC XII ಸಿರಾ ೩೮; ಕ್ರಿ.ಶ. ೮೭೮)

ಹೀಗೆ ದೇವಸ್ಥಾನಗಳು ಭೂಮಾಲೀಕರಾದುದರಿಂದ ಹಾಗೂ ಉತ್ಪಾದನಾ ಸಾಧನಗಳ ಒಡೆಯರಾದುದರಿಂದ ಯುದ್ಧ ಹಾಗೂ ಬೇರೆ ಕೆಲವು ಪ್ರಕ್ಷೋಭೆಗಳಿಂದ ಪಾರಾಗುವುದು ಸಾಧ್ಯವಿತ್ತು. ೧೧ನೇ ಶತಮಾನದ ನಂತರ ದೇವಾಲಯಗಳ ಗ್ರಾಮೀಣಾಭಿಮುಖ ಬೆಳವಣಿಗೆ ಅವುಗಳಿಗೆ ಬಿಟ್ಟ ಜಮೀನಿನ ವಿಸ್ತರಣೆಯಿಂದ ಆಯಿತು. ಇದು ರಾಜಕೀಯ ಅಧಿಕಾರದ ವಿಸ್ತರಣೆಗೆ ಅನುಕೂಲವಾದುದು ಎಂದು ಚೆನ್ನಪಟ್ಟಣದ ಬಳಿಯ ಮಳೂರಿನ ಶಾಸನದಿಂದ ತಿಳಿಯುತ್ತದೆ. ೧೦ನೇ ಶತಮಾನಕ್ಕೆ ಮೊದಲು ಈ ಊರಿನಲ್ಲಿ ಯಾವುದೇ ದೇವಾಲಯವಿರಲಿಲ್ಲ. ಚೋಳರ ದಂಡನಾಯಕನೊಬ್ಬ ಮಳೂರಿನ ಈಶ್ವರ ದೇವಾಲಯ ಹಾಗೂ ಪುರೋಹಿತರಿಗಾಗಿ ಮಳೂರು ಸಭಾದಿಂದ ಜಮೀನು ಖರೀದಿಸಿ ದಾನ ಕೊಟ್ಟನು. ಮುಂದಿನ ೧೫ ವರ್ಷಗಳಲ್ಲಿ ಮಳೂರಿನಲ್ಲಿ ಬೃಹತ್ ದೇವಾಲಯ ಸಮೂಹ ನಿರ್ಮಾಣ ಹಾಗೂ ಸಂಬಂಧಪಟ್ಟ ಎಲ್ಲಾ ಬ್ರಾಹ್ಮಣಶಾಹಿ ವ್ಯವಸ್ಥೆ ಸುಭದ್ರವಾಗಿ ತಳವೂರಿದ್ದನ್ನು ಶಾಸನಗಳು ತಿಳಿಸುತ್ತವೆ. (FC IX ಚನ್ನಪಟ್ಟಣ ೮೮; AD ೧೦೧೫).

### ರಾಜಪ್ರಭುತ್ವ

ಮಧ್ಯಕಾಲೀನ ಭಾರತದಲ್ಲಿ ಅನೇಕ ರಾಜಮನೆತನಗಳ ಆಳ್ವಿಕೆ, ಪರಸ್ಪರ ಯುದ್ಧಗಳು ಮನೆಮಾಡಿದ್ದವು. ವೀರಸ್ವರ್ಗದ ಕಲ್ಪನೆ, ಯುದ್ಧದಲ್ಲಿ ಸತ್ತ ವೀರನಿಗೆ ವೀರಗಲ್ಲುಗಳು, ದೂರದಲ್ಲಿ ಸತ್ತ ಪತಿಯ ನೆನಪಿನಲ್ಲಿ ಅವನ ಮಡದಿ ಸತ್ತ ಗಂಡನನ್ನು ಸ್ಮರಿಸಿ ಚಿತೆಯೇರುವ ಅನುಗಮನ, ಗಂಡನ ಚಿತೆಯ ಜೊತೆಯಲ್ಲಿಯೇ ಚಿತೆಯೇರುವ ಸಹಗಮನ, ಇಂತಹ ಸ್ತ್ರೀಯರಿಗೆ ಸ್ಮಾರಕಗಳಾಗಿ ಮಾಸ್ತಿಕಲ್ಲುಗಳನ್ನು ನಿಲ್ಲಿಸುವುದು, ಒಡೆಯನಿಗಾಗಿ ಪ್ರಾಣ ಕೊಡುವ ವೇಳವಾಳಿಯಂತಹ ಅನೇಕ ಕ್ರೂರ ಸಂಪ್ರದಾಯಗಳು ಇವೆಲ್ಲಾ ಅಂದಿನ ಸಮಾಜದಲ್ಲಿ ಮನೆಮಾಡಿದ್ದವು. ರಾಜಪ್ರಭುತ್ವ ಮತ್ತು ಊಳಿಗಮಾನ್ಯ ಆರ್ಥಿಕ ವ್ಯವಸ್ಥೆಗಳ ಅಡಿಯಲ್ಲಿ ಒಟ್ಟಾರೆ ಭಾರತದಲ್ಲಿ ಶ್ರೇಣೀಕೃತ ಸಮಾಜ ಮನೆಮಾಡಿತ್ತು. ಇದು ಮುಸ್ಲಿಂ ರಾಜರುಗಳಿಗೂ ಅನ್ವಯಿಸುತ್ತದೆ. ಅಂದಿನ ಸಾಮಾಜಿಕ ಚೌಕಟ್ಟಿನಲ್ಲಿ ನಾಲ್ಕು ವರ್ಣಗಳಲ್ಲದೆ ಅದರ ಹೊರಗೆ ಪಂಚಮರಿದ್ದರು. ಪಂಚಮರ ಸ್ಥಿತಿ ತೀರ ಹೀನಾಯವಾಗಿತ್ತು. ಊರಿನಲ್ಲಿ ವಾಸಿಸುವಂತಿರಲಿಲ್ಲ. ಇವರಿಗೆ ವಿದ್ಯಾಭ್ಯಾಸ ನಿಷೇಧವಾಗಿತ್ತು.

ವೈದಿಕ ಧರ್ಮದ ಅಡಿಯಲ್ಲಿ ಅನೇಕ ಸಂಪ್ರದಾಯಗಳು ಸಮಾಜದಲ್ಲಿ ಬೇರು ಬಿಟ್ಟಿದ್ದವು. ದೇವದಾಸಿ, ಅಂಗಭೋಗ, ರಂಗಭೋಗಗಳು ದೇವಾಲಯಗಳಲ್ಲಿ ವ್ಯಾಪಕವಾಗಿದ್ದವು. ಮಧ್ಯಕಾಲೀನ



ಭಾರತದಲ್ಲಿಯೇ ನಾವು ಅತಿ ಹೆಚ್ಚು ಸತಿ ಸಹಗಮನಗಳಾಗಿರುವುದನ್ನು ಕಾಣುತ್ತೇವೆ (ವಿಜಯನಗರ ಸಾಮ್ರಾಜ್ಯದ ಅವಧಿಯಲ್ಲಿಯೇ ಅತಿಹೆಚ್ಚು). ಕೃಷಿಯ ವಿಸ್ತರಣೆ, ಹೊಸ ತಂತ್ರಜ್ಞಾನ, ಹೆಚ್ಚಿನ ಉತ್ಪಾದನೆಯ ಅಗತ್ಯ ಇವು ರೈತರ ಮೇಲೆ ಅಧಿಕ ಹೊರೆಯನ್ನು ಹೇರಿತು. ಇದರಿಂದಾಗಿ ಕೇವಲ ರೈತರಲ್ಲದೆ ಹಲವಾರು ಕುಶಲಕರ್ಮಿಗಳು, ಕೃಷಿಕಾರ್ಮಿಕರು ಜೀತಗಾರರಾಗಬೇಕಾಯಿತು. ಈ ರೀತಿ ವೃತ್ತಿಜೀವಿಗಳು ಜೀತಗಾರರಾಗುವುದಕ್ಕೆ ಸೊರಬದ ಶಾಸನವೊಂದು ಉದಾಹರಣೆ ("ಆವಲಿ ನಾಡ ಪ್ರಭು ಕಾಮಗೌಡನ ಬೆಸವಾದ ನಾಗಣ್ಣ"). ಅಗಸ ನಾಗಣ್ಣನೆಂಬುವನು ಕಾಮಗೌಡನ ಜೀತದಾಳುವಾಗಿ ಅವನಿಗೆ ಅಗತ್ಯ ಸೇವೆ ಮಾಡುತ್ತಿದ್ದುದು ಇದನ್ನು ಸಾಬೀತು ಮಾಡುತ್ತದೆ (EC VII ಸೊರಬ ೧೨೮, ೧೨೮೮ AD). ಕೃಷಿ ವಿಸ್ತರಣೆಗಾಗಿ ಬಲವಂತವಾಗಿ ಜೀತದಾಳುಗಳನ್ನು ದುಡಿಸಲಾಯಿತು. ಈ ರೀತಿಯ ದರ್ಪದ ಬೆಳವಣಿಗೆಗೆ ಆಗಿನ **ತೊತ್ತು**, **ಬೆಸೆವಾಗ** ಶಬ್ದಗಳೇ ಸಾಕ್ಷಿ. ಇವರು ಆ ಕಾಲದ ಶ್ರಮಜೀವಿಗಳು. ಈ ಶ್ರಮಜೀವಿಗಳು ಬ್ರಾಹ್ಮಣ ಹಿಡುವಳಿಗಳಲ್ಲಿ ಜೀತಗಾರರಾಗಿದ್ದು ಅವರನ್ನು ಪಶುಗಳ ಜತೆ ತೋರಿಸಲಾಗಿತ್ತು (ಎಮ್ಮೆ, ಎತ್ತು, ಪಸು, ತೊತ್ತು). ೧೨ನೆಯ ಶತಮಾನದ ಕುಣಿಗಲ್ ಶಾಸನ ಇವಕ್ಕೆ ಒಂದು ಉದಾಹರಣೆ.

**ಡಾ॥ ಸಿದ್ಧಲಿಂಗಸ್ವಾಮಿ**

ಶ್ರಮಜೀವಿಗಳ ಬಗ್ಗೆ ಪಕ್ಷಪಾತದಿಂದ ಕೂಡಿದ [illegible]

ಜಾತಿಗಳವರನ್ನು ಪ್ರಿಯ ಪುತ್ರ ಅಥವಾ ಪ್ರಿಯ ಮಗು ಎಂದು ಸಂಬೋಧಿಸಿದ್ದರೆ, ಉಳಿದ ಶ್ರಮಜೀವಿಗಳಿಗೆ ಅಂತಹ ಸಂಬೋಧನೆಗಳಿಲ್ಲ. (EC XII ಕುಣಿಗಲ್; ೧೧೫೭).

ದೇವಾಲಯ ವ್ಯವಸ್ಥೆಯ ವಿಸ್ತರಣೆಯು ವೃತ್ತಿಜೀವಿಗಳನ್ನು, ಕುಶಲಕರ್ಮಿಗಳನ್ನು ಗುಲಾಮೀಕರಿಸುವ ಪ್ರಕ್ರಿಯೆಗೆ ಪೂರಕವಾಗಿ ಬೆಳೆದಿದೆ. ಮಠ ಮಾನ್ಯಗಳ ಜಮೀನುಗಳಲ್ಲಿ ರೈತರು ಹಾಗೂ ಸೇವಕರು ವಂಶಪಾರಂಪರ್ಯವಾಗಿ ನಡೆದುಕೊಳ್ಳುತ್ತಿದ್ದರೂ ಸಹ ಇವರ ಪರಿಸ್ಥಿತಿ ಜೀತದಾಳುಗಳಿಗಿಂತ ಭಿನ್ನವಾಗಿರಲಿಲ್ಲ. ಶ್ರೀಮಂತ ಜಮೀನುದಾರರ ಗಳಿಕೆಯಲ್ಲಿ ಜಮೀನಿನ ಜತೆ ದ್ವಿಪಾದಿ, ಚತುಷ್ಪಾದಿ, ಗೃಹ, ಧಾನ್ಯ, ಧನ ಕೂಡ ಹಸ್ತಾಂತರವಾಗುತ್ತಿದ್ದುದು ಗುಲಾಮಿತನದ ಅಸ್ತಿತ್ವವನ್ನು ತೋರಿಸುತ್ತದೆ. ಸೊರಬ ತಾಲ್ಲೂಕಿನ ಶಾಸನ (೧೨೧೩) ಬ್ರಾಹ್ಮಣ ಗ್ರಾಮಕ್ಕೆ ದಾಳಿಮಾಡಿದ ಸಾಮಂತನೊಬ್ಬ ಅವರ ಪಶು, ಧಾನ್ಯ ಮತ್ತು ಜನರನ್ನು ಬಂಧಿಸಿದನೆಂದು ಹೇಳಿದೆ. (EC VIII ಸೊರಬ ೩೨೯, ೧೨೧೩).

**ಸಂಘರ್ಷಗಳು**

ಮಧ್ಯಕಾಲೀನ ಸಾಮಾಜಿಕ ಸಂಘರ್ಷಗಳು ಭೂಮಾಲಿಕರು ಹಾಗೂ ರೈತಾಪಿ ಜನರ ನಡುವೆ ನಡೆದುದಕ್ಕೆ ಹಲವಾರು ಉದಾಹರಣೆಗಳಿವೆ. ರೈತರಲ್ಲದವರ ಅತಿ ಬೇಡಿಕೆಯು ಕೃಷಿ ಉತ್ಪನ್ನಗಳ ಕೊರತೆಯನ್ನುಂಟುಮಾಡಿ ತನ್ಮೂಲಕ ಸಂಘರ್ಷಗಳು ಸಂಭವಿಸಿದವು. ಭೂಮಾಲಿಕರು ಹಾಗೂ ದೇವದಾನ ಹಿಡುವಳಿದಾರರು ಮಿಗುತಾಯದ ಬಳಕೆದಾರರಾಗಿದ್ದು ಇವರುಗಳ ಮಿತಿಮೀರಿದ ಒತ್ತಾಯಗಳು ಅಲ್ಲದೆ ಸದಾ ಬೆಳೆಯುತ್ತಿದ್ದ ನಗರಗಳು ಘರ್ಷಣೆಗೆ ಕಾರಣವಾದವು. ದೇವಸ್ಥಾನ ಹಾಗೂ ಪಾಳೆಯಗಾರಿ ಮನೆಗಳ ಬೇಡಿಕೆಯಿಂದಾಗಿ ಭೋಗವಸ್ತುಗಳ ಉತ್ಪಾದನೆ ಕೂಡ ಆಯಿತು. ಲಭ್ಯವಿರುವ ಶಾಸನಗಳು ಈ ಸಂಬಂಧದಲ್ಲಿ ಬ್ರಾಹ್ಮಣರು - ರೈತರು, ಸಾಮಂತರು - ಬ್ರಾಹ್ಮಣರು, ಅಗ್ರಹಾರಗಳು - ರೈತರ ಗ್ರಾಮಗಳ ನಡುವಿನ ಸಂಘರ್ಷದ ಬಗ್ಗೆ ಮಾಹಿತಿ ನೀಡುತ್ತವೆ.

೧೨೫೧ರ ಕರ್ನಾಟಕದ ಒಂದು ಶಾಸನವು ಬ್ರಾಹ್ಮಣ - ರೈತರ ಘರ್ಷಣೆಯನ್ನು ಪ್ರಸ್ತಾಪ ಮಾಡುತ್ತದೆ. ತಮ್ಮ ಜಮೀನುಗಳನ್ನು ಬ್ರಾಹ್ಮಣರ ದಾನದ ಹಿಡುವಳಿಯಾಗಿ ಪರಿವರ್ತಿಸುವುದನ್ನು ರೈತರು ವಿರೋಧಿಸಿದರು. ಇದು ರೈತರ ಪರಂಪರಾಗತ ಒಡೆತನ ಹಾಗೂ ಹಕ್ಕುಗಳ ಮೇಲಿನ ಅತಿಕ್ರಮಣಕ್ಕೆ ಉದಾಹರಣೆ. ಜನರ ವಿರೋಧವನ್ನು ತಿಳಿದ ರಾಜ ಗ್ರಾಮಕ್ಕೆ ಸೈನ್ಯ ಕಳುಹಿಸಿ ಲೂಟಿ ಮಾಡಿದ. ಜೊತೆಗೆ ಮಹಿಳೆಯರ ಶೀಲಭಂಗ ಮಾಡಿದ್ದಲ್ಲದೆ ಮಕ್ಕಳ ಮೇಲೂ ಆಕ್ರಮಣ ಮಾಡಿದರು. (MAR ೧೯೩೬, No.೧೯, p ೮೪). ೧೨೩೦ರ ಮತ್ತೊಂದು ಶಾಸನದಲ್ಲಿ (ಹಾಸನ EC V, ೧೨೨), ಬ್ರಾಹ್ಮಣರ ಏಜೆಂಟರು ಊರಿನ ತಾಳೆ ವೃಕ್ಷವೊಂದನ್ನು ಕಡಿಯಲು ಬಂದಾಗ ಅದನ್ನು ವಿರೋಧಿಸಿದ ಇಬ್ಬರು ರೈತರ ಕೊಲೆಯಾದ ಬಗ್ಗೆ ಪ್ರಸ್ತಾಪವಿದೆ. ನೀರಾವರಿ ಕೆರೆಗಳ ನಿಯಂತ್ರಣಕ್ಕಾಗಿ ಊರಿನ ರೈತರು ಹಾಗೂ ಭೂಮಾಲಿಕನ ನಡುವೆ ನಡೆದ ಘರ್ಷಣೆಯಲ್ಲಿ ಮಾಲೀಕ ಸತ್ತ ಬಗ್ಗೆ ಹಾಗೂ ಮಾಲೀಕನ ಪರವಾಗಿ ಹೊಯ್ಸಳರಾಜ ವೀರಗಲ್ಲನ್ನು ಸ್ಥಾಪಿಸಿದ ಬಗ್ಗೆ ಮತ್ತೊಂದು ಶಾಸನ ಹೇಳುತ್ತದೆ. (EC V ಹಾಸನ ೮೨). ಮತ್ತೊಂದು ಘಟನೆಯಲ್ಲಿ ಗ್ರಾಮದ ಕೆರೆಯಿಂದ ನೀರು ತೆಗೆಯುವ ಬಗ್ಗೆ ಬ್ರಾಹ್ಮಣ ಕುಟುಂಬ ಹಾಗೂ ರೈತರ ಕುಟುಂಬದ ನಡುವಿನ ಘರ್ಷಣೆಯಲ್ಲಿ ರೈತ ಕುಟುಂಬದ ಸದಸ್ಯ ಮೃತನಾದ.

ದತ್ತಿ ಜಮೀನುಗಳು ಬೊಕ್ಕಸಕ್ಕೆ ಯಾವ ತೆರಿಗೆಯನ್ನೂ ನೀಡದೆ, ಬ್ರಾಹ್ಮಣರು ಈ ಜಮೀನುಗಳ ನೆರೆ ಹೊರೆಯ ಕಾಡುಗಳನ್ನು ಹಾಗೂ ಫಲವತ್ತಾದ ಜಮೀನುಗಳನ್ನೂ ಒತ್ತುವರಿ ಮಾಡಿಕೊಂಡು ಬಂದರು. ಆದಾಗ್ಯೂ ಬ್ರಾಹ್ಮಣಶಾಹಿ ಸಿದ್ಧಾಂತದ ಪ್ರಭಾವ ಹಾಗೂ ಸಾಮಾಜಿಕ ಅಸಮಾನತೆಯನ್ನು ಒಪ್ಪುವ ಮನೋಭಾವದಿಂದಾಗಿ ಭಾರತದ ರೈತ ಹೊರಬಂದು ವ್ಯವಸ್ಥೆಯನ್ನು ವಿರೋಧಿಸಲಿಲ್ಲ. ಹೀಗಾಗಿ ಭಯ ಮತ್ತು ಮೋಸದ ನೆರಳಲ್ಲಿ ಈ ಊಳಿಗಮಾನ್ಯ ಧಾರ್ಮಿಕ ಸಿದ್ಧಾಂತ ಬೆಳೆಯಲು ಅವಕಾಶವಾಯಿತು. ಊಳಿಗಮಾನ್ಯ [illegible] ಧಾರೆಯ ಪ್ರಮುಖ ವಾಹಕರಾಗಿದ್ದವರೆಂದರೆ [illegible] ಮತ್ತು ಮುಖ್ಯ ಪುರೋಹಿತ ವರ್ಗ. [illegible] ಯನ್ನು [illegible] ಈ ವರ್ಗ [illegible] ದಪ್ಪ [illegible] ಪೂರ್ವಜನ್ಮದ ಪಾಪಪುಣ್ಯಗಳಿಂದ [illegible] ಅಥವಾ [illegible] ಸಂಕಲ್ಪಕ್ಕೆ ಅನುಗುಣವಾಗಿರುತ್ತದೆ [illegible] ಹಣೆಬರಹದಲ್ಲಿನ [illegible] ಸ್ವತಃ ಅಸಮರ್ಥನಾಗಿರುತ್ತಾನೆ; [illegible] ಮಾಡದೆ ಅವನು ತನ್ನ [illegible] ಎಂಬುದಾಗಿ ಬೋಧಿಸುತ್ತಲೇ ಬಂದಿದೆ.

ಸಮಾಜದ ಜಾತಿವಾರು ವಿಭಜನೆಯನ್ನು ಹಿಂದೂ ಧರ್ಮ ಉಗ್ರವಾಗಿ ಸಮರ್ಥಿಸಿತು. ಬಿಗಿಯಾದ ಕಟ್ಟುಪಾಡುಗಳನ್ನು ಕಣ್ಣು ಮುಚ್ಚಿ ಅನುಸರಿಸಬೇಕೆಂದು ಒತ್ತಿಹೇಳುವ ಮೂಲಕ ಅಧೀನ ಪ್ರವೃತ್ತಿ ಬೆಳೆಸಲಾಯಿತು. ಈ ನೆಲೆಗಳಿಂದ ದೂರ ಸರಿದು ಮುಕ್ತ ಚಿಂತನೆಯ ಯಾವುದೇ ಲಕ್ಷಣವನ್ನು ತೋರುವ ಪ್ರಯತ್ನಗಳನ್ನು ನಿರ್ದಯವಾಗಿ ಮೆಟ್ಟಿಹಾಕಿ ದಂಡನೆ ವಿಧಿಸಲಾಗುತ್ತಿತ್ತು. ಈ ಹಿನ್ನೆಲೆಯಲ್ಲಿ ಭಾರತದಲ್ಲಿ ನಡೆದ ಧಾರ್ಮಿಕ ಚಳುವಳಿಯ ಕೆಲವು ಬೆಳವಣಿಗೆಗಳನ್ನು ಹಿಂದೂ ಧಾರ್ಮಿಕ ಸ್ವರೂಪಗಳ ವಿರುದ್ಧದ ಪ್ರತಿಕ್ರಿಯೆಗಳೆಂದರೆ ತಪ್ಪೇನೂ ಅಲ್ಲ. ಏಕೆಂದರೆ ಈ ಬೆಳವಣಿಗೆಗಳೆಲ್ಲವೂ ಮುಖ್ಯವಾಗಿ ಹಿಂದೂ ಧಾರ್ಮಿಕ ವ್ಯವಸ್ಥೆಯ ಜಡ ಸ್ವರೂಪ ಹಾಗೂ ನಿರ್ದೇಶನಗಳನ್ನು ವಿರೋಧಿಸಿಯೇ ತಮ್ಮ ಸ್ವರೂಪಗಳನ್ನು ಮೌಲ್ಯಾತ್ಮಕವಾಗಿ ಬದಲಾಯಿಸಿಕೊಂಡಿವೆ. ಭಕ್ತಿ ಚಳುವಳಿಗಳು ಭಾರತದಲ್ಲಿ ಮುಖ್ಯವಾಗಿ ಬ್ರಾಹ್ಮಣೇತರ ಹಾಗೂ ಬ್ರಾಹ್ಮಣ ವಿರೋಧಿ ಚಳುವಳಿಗಳೇ ಆಗಿವೆ. ಇವು ಜಾತಿಯ ಅಂತಸ್ತಿನ ಶ್ರೇಣೀಕರಣವನ್ನು ವಿರೋಧಿಸುವ ಕೆಲಸವನ್ನು ಮಾಡಿದವು.

ಡಾ|| ಸಿದ್ದಲಿಂಗಸ್ವಾಮಿ
ಡಿ-೮, ಪಿಡಬ್ಲ್ಯೂಡಿ ಕ್ವಾರ್ಟರ್ಸ್, ಜೀವನ ಭೀಮಾನಗರ
ಎಚ್. ಎ. ಎಲ್., ತಿನೇ ಸ್ಟೇಜ್, ಬೆಂಗಳೂರು- ೫೬೦ ೦೭೫



# ಬಾಸುಗಳು ಮತ್ತು ಡೂಸುಗಳು!

ಎಸ್. ಜಿ. ಶಿವಶಂಕರ್

'ಹೊಟ್ಟೆಗಿಷ್ಟು ಕೂಳು. ಮೈಮುಚ್ಚಲು ಬಟ್ಟೆ, ತಲೆಯ ಮೇಲೊಂದು ಸೂರು ಮಾನವನ ಮೂಲಭೂತ ಆವಶ್ಯಕತೆ' ಎಂಬ ಮಾತು ಇಂದು-ನೆನ್ನೆಯದಲ್ಲ, ಆದರೆ ಈ ಮಾತನ್ನೀಗ ಬದಲಾಯಿಸುವ ಕಾಲ ಸನ್ನಿಹಿತವಾಗಿದೆ ಎನ್ನುವುದು ನನ್ನ ಖಚಿತವಾದ ಅಂಬೋಣ. ಏನೆಂದು ಬದಲಿಸಬೇಕು ಎಂಬ ಪ್ರಶ್ನೆ ನಿಮ್ಮ ಬಾಯ ತುದಿಯಲ್ಲಿದೆ ಎಂಬುದು ನನಗೆ ಗೊತ್ತಿದೆ (ನೀವೇನಾದರೂ ಈ ಲೇಖನ ಓದುವ ತಪ್ಪು ಮಾಡಿದ್ದರೆ !).

ಇತ್ತೀಚಿನ ದಿನಗಳಲ್ಲಿ ತಾಪೇದಾರಿ ಮಾಡುವುದು ಗಂಡಸಿಗೇ ಏಕೆ ಹೆಂಗಸರಿಗೂ ಅನಿವಾರ್ಯವಾಗಿಬಿಟ್ಟಿದೆ. ಹೀಗೆ ಹೊಟ್ಟೆಪಾಡಿಗಾಗಿ ಕೆಲಸ ಮಾಡುವಾಗ ನಮಗೊಬ್ಬ ಮೇಲಧಿಕಾರಿ ಇದ್ದೇ ಇರುತ್ತಾನೆ. ಆತನನ್ನು ಎಲ್ಲರೂ 'ಬಾಸ್' ಎಂದು ಕರೆಯುವುದು ಇತ್ತೀಚಿನ ದಿನಗಳಲ್ಲಿ ಮಾಮೂಲಿಯಾಗಿಬಿಟ್ಟಿದೆ. ಹತ್ತು ವರ್ಷಗಳ ಹಿಂದೆ 'ಬಾಸ್' ಎಂದರೆ ನಮ್ಮ ಕಣ್ಮುಂದೆ ಕಾಣಿಸುತ್ತಿದ್ದುದು ಹಿಂದಿ ಸಿನಿಮಾಗಳ ಖಳರು ಮತ್ತು ಖೂಳರು ! ಇಂದಿನ ದಿನಗಳಲ್ಲಿ ಎಲ್ಲ ತಾಪೇದಾರಿ ಕೆಲಸ ಮಾಡುವವರಿಗೂ ಬಾಸು ಇದ್ದೇ ಇರುತ್ತಾನೆ, ಮತ್ತು ಕೆಳಗಿನವರು ಅವನ ನಿರ್ದೇಶನಗಳಿಗನುಸಾರವಾಗಿ ಕೆಲಸ ಮಾಡಲೇಬೇಕಾಗುತ್ತದೆ.

ಎಲ್ಲ ಜನರೂ ಹೇಗೆ ಒಂದೇ ರೀತಿಯಿರುವುದಿಲ್ಲವೋ ಹಾಗೇ ಈ ಬಾಸುಗಳೂ ಸಹ ಬೇರೆಬೇರೆ ರೀತಿಯವರಾಗಿರುತ್ತಾರೆ. ಅವರ ಕಾರ್ಯ ವೈಖರಿ, ಜೀವನ ಶೈಲಿ, ಮಾತಾಡುವ ವಿಧಾನ, ಸುಳ್ಳು ಹೇಳುವ ಕಲೆ - ಎಲ್ಲವೂ ವೈವಿಧ್ಯಮಯವಾಗಿರುತ್ತವೆ. ಅನಾದಿ ಕಾಲದಿಂದಲೂ ಬಾಸುಗಳಿಗೂ ಸುಳ್ಳುಗಳಿಗೂ ಅವಿನಾಭಾವ ಸಂಬಂಧವಿದೆ ! ಬಹುತೇಕ ಎಲ್ಲ ಬಾಸುಗಳಿಗೂ ಸುಳ್ಳು ಹೇಳುವ ಚಟವಿದ್ದು ಅವರು ಹೇಳುವ ಅಸಂಖ್ಯ ಸುಳ್ಳುಗಳನ್ನು ಕೇಳಲೇಬೇಕಾಗುವುದು ಅವರ ಕೈ ಕೆಳಗಿನವರಿಗೆ ಅನಿವಾರ್ಯ! ಸುಳ್ಳಿಗೆ ಅನೇಕ ಪರ್ಯಾಯ ಪದಗಳಿವೆ. ಉದಾಹರಣೆಗೆ ಹೇಳುವುದಾದರೆ 'ಬುರುಡೆ', 'ಗ್ಯಾಸು', 'ಡೂಸು', ಇತ್ಯಾದಿಗಳು. ಇವುಗಳಲ್ಲಿ ತುಂಬಾ ಪ್ರಚಲಿತವಾಗಿರುವ 'ಡೂಸು' ಎಂಬ ಪದವನ್ನು ನಾನಿಲ್ಲಿ ಪ್ರಯೋಗಿಸಿದ್ದೇನೆ.

ಮನುಷ್ಯನ ಜೀವನ ಸರಳವಾಗಿದ್ದಾಗ, ಮೋಸ- ತಟವಟ ಗೊತ್ತಿಲ್ಲದ ಕಾಲದಲ್ಲಿ , ನನ್ನ ಲೇಖನದ ಮೊದಲನೆಯ ಸಾಲು ಎಲ್ಲ ಕಾಲಕ್ಕೂ ಸಲ್ಲುತ್ತಿದ್ದಿತೇನೋ. ಆದರೆ ಈಗ ನಾವು ಇಪ್ಪತ್ತೊಂದನೆಯ ಶತಮಾನಕ್ಕೆ ಕಾಲಿಡುತ್ತಿರುವ ಈ ಸಮಯದಲ್ಲಿ , ನ್ಯಾಯವಾದ ಬದುಕು ಅಂದರೇನು ಎಂದೇ ತಿಳಿಯದ ಈ ಕಾಲದಲ್ಲಿ , ಅನಾದಿ ಕಾಲದಿಂದಲೂ ಒಪ್ಪಿರುವ 'ಅನ್ನ, ಬಟ್ಟೆ ಮತ್ತು ಸೂರು ಮಾನವನ ಮೂಲಭೂತ ಆವಶ್ಯಕತೆಗಳು' ಎಂಬ ಮಾತನ್ನು ಈ ರೀತಿ ಬದಲಿಸಬೇಕಾದ ಸಮಯ ಸನ್ನಿಹಿತವಾಗಿದೆ: 'ಹೊಟ್ಟೆಗಿಷ್ಟು ಕೂಳು, ಮೈಮುಚ್ಚಲು ಬಟ್ಟೆ, ತಲೆಯ ಮೇಲೆ ಸೂರು, ಕೆಲಸದಲ್ಲಿ ಒಬ್ಬ ಬಾಸು ಮಾನವನ ಮೂಲಭೂತ ಆವಶ್ಯಕತೆ' !

ಏನು ಇಷ್ಟಕ್ಕೇ ಆಕಳಿಗೆ ಬಂತೆ..? ಮೊದಲನೆಯ ಪ್ಯಾರವೇ ಇಷ್ಟು ಭಯಂಕರವಾಗಿರಬೇಕಾದರೆ ಇನ್ನು ಲೇಖನ ಇನ್ನಾವ ಮಟ್ಟದಲ್ಲಿದ್ದೀತು ಎಂಬ ಅನುಮಾನ ಉಂಟಾಗಿದೆಯೆ? ಉದಾಸೀನದಿಂದ ನಿದ್ರೆ ಆವರಿಸುತ್ತಿದೆಯೆ? ಇನ್ನೂ ವಿಷಯದ ಪ್ರಸ್ತಾವನೆಯೇ ಆಗಿಲ್ಲವಲ್ಲ..? ಆದುದರಿಂದ ನೀವು ನಿದ್ರೆಯನ್ನು ತಡೆಯುವುದು ಅನಿವಾರ್ಯ ಎಂದು ಇಲ್ಲಿಯೇ ನಿಮಗೊಂದಿಷ್ಟು ಎಚ್ಚರಿಕೆ ಕೊಟ್ಟು ಮುಂದುವರಿಸುವೆ.

ಬಾಸುಗಳ ಬಗೆಗೆ ಹೆಚ್ಚು ಹೇಳುವ ಆವಶ್ಯಕತೆಯೇ ಇಲ್ಲ. ಏಕೆಂದರೆ ಪ್ರತಿ ಮಾನವನಿಗೂ ಒಬ್ಬ ಬಾಸು ಇರುವುದರಿಂದ ಅವರ ಪ್ರವೃತ್ತಿಗಳ ಬಗೆಗೆ ಕೆಳಗಿನವರಿಗಾಗಲೇ ತಿಳಿದಿರುತ್ತದೆ. ಬಾಸುಗಳ ಪ್ರವೃತ್ತಿಗಳ ಬಗೆಗೆ ಹೇಳುವುದೆಂದರೆ ಮರಳಿನ ರಾಶಿಯಲ್ಲಿ ಮರಳ ಕಣಗಳನ್ನು ಎಣಿಸಿದಂತೆ; ಆಕಾಶದ ನಕ್ಷತ್ರಗಳನ್ನು ಎಣಿಸಿದಂತೆ! ಎಲ್ಲರಿಗೂ ಒಬ್ಬ ಬಾಸು ಇರುವುದರ ಬಗೆಗೆ ನಿಮಗೊಂದಿಷ್ಟು ಅನುಮಾನ ಬಂದಿರಬಹುದು. ಅತ್ಯಂತ ಉನ್ನತ ಹುದ್ದೆಯಲ್ಲಿರುವವನಿಗೆ ಯಾರು ಬಾಸು, ಎಂಬ ಯೋಚನೆ ನಿಮ್ಮನ್ನು ಹಳೆಯ ಚರ್ಮ ರೋಗದಂತೆ ಬಾಧಿಸಬಹುದು. ಅದಕ್ಕೆ ಸಮಂಜಸವಾದ ಉತ್ತರವನ್ನು ನಾನು ಕೊಡಬಲ್ಲೆ. ಈಗ, ನಾನು ಹುಡುಗನಾಗಿದ್ದ ಕಾಲದಲ್ಲಿ ಮಕ್ಕಳು ಆಡುತ್ತಿದ್ದ ಆಟವೊಂದರ ಬಗೆಗೆ ಹೇಳುತ್ತೇನೆ ಈಗಿನ ಮಕ್ಕಳ ಆಟ ಬಿಡಿ... ಏನೆಂದು ಹೇಳುವಂತೆಯೇ ಇಲ್ಲ. ಕ್ರಿಕೆಟ್ಟು, ಚೆಸ್, ಕೇರಂ ಮುಂತಾದುವನ್ನು ಬಿಟ್ಟರೆ ಅವರೆಂತಾ ಆಟ ಆಡುತ್ತಾರೋ ನನ್ನ ಗಮನಕ್ಕಂತೂ ಒಂದೇ ಎಲ್ಲ ಬಹುಶಃ ವಾಜಪೇಯಿ-ಜಯಾ-ಮಮತಾ, ವೀರಪ್ಪನ್-ಪೊಲೀಸು, ಸಿನಿಮಾದ ಅಂತ್ಯಾಕ್ಷರಿ, ಕಿಲ್ಲರ್- ಪಿಕಿಮ್ ಮುಂತಾದ ಆಟಗಳನ್ನು ಆಡುತ್ತಾರೆಂದು ನನ್ನ ಅನಿಸಿಕೆ. ಬಹುತೇಕ ಮಕ್ಕಳನ್ನು ನಾನು ನೋಡಿರುವುದು ಕಣ್ಣು-ಬಾಯಿ ತೆರೆದು ಟಿವಿಯ ಮುಂದೆ ಕುಳಿತಿರುವ ಭಂಗಿಯಲ್ಲಿಯೇ !

ಈಗ ನಾನು ಉಲ್ಲೇಖಿಸುತ್ತಿದ್ದ ಆಟದ ವಿಷಯಕ್ಕೆ ಬರೋಣ. ಆಟದ ಪ್ರಾರಂಭ ನನಗೆ ಮರೆತಿದೆ. ಆದರೆ ಆಟದ ಯಾವುದೋ ಹಂತದಲ್ಲಿ ಇಬ್ಬರು ಹುಡುಗರ ನಡುವೆ ಹಣ್ಣೊಂದನ್ನು ತಿಂದ ನಂತರ ಅದರ ಸಿಪ್ಪೆಯ ಬಗೆಗೆ ಈ ರೀತಿ ಸಂವಾದ ನಡೆಯುತ್ತದೆ :

''ಸಿಪ್ಪೆ ಎಲ್ಲಾ ಏನು ಮಾಡಿದೆ?'' ''ಬಾಗಿಲು ಹಿಂದೆ ಹಾಕಿದೆ.'' ''ಬಾಗಿಲು ಏನು ಕೊಡ್ತು?'' ''ಬಾಗಿಲು ಸೌದೆ ಕೊಡ್ತು.'' ''ಸೌದೆ ಏನು ಮಾಡಿದೆ?'' ''ಸೌದೆ ಒಲೆಗೆ ಹಾಕಿದೆ''.

ಹೀಗೆ ಅಂತ್ಯವಿಲ್ಲದೆ ಆಟ ಸಾಗುತ್ತದೆ. ಯಾಕೆ ಈ ಮಾತು ಹೇಳಿದೆನೆಂದರೆ ಎಲ್ಲ ಬಾಸುಗಳಿಗೂ ಇನ್ನೊಬ್ಬ ಬಾಸು ಇದ್ದು, ಮೇಲೆ ಹೇಳಿದ ಆಟದಂತೆ ಇದು ಸಾಗುತ್ತದೆ.

ಸರ್ಕಾರಿ ಕಛೇರಿಯಲ್ಲಾಗಲಿ, ಖಾಸಗಿ ಕಂಪೆನಿಯಲ್ಲಾಗಲಿ, ಹೋಟೆಲು, ಸಿನಿಮಾ ಥಿಯೇಟರು, ಕೇಶ ಕರ್ಮಶಾಲೆ - ಇಲ್ಲಾ ಇನ್ಯಾವುದೇ ರೀತಿಯ ವ್ಯಾಪಾರೀ ಸಂಸ್ಥೆಗಳಲ್ಲಾಗಲಿ ಬಾಸುಗಳು ಇದ್ದೇ ಇರುತ್ತಾರೆ ; ಎಲ್ಲ ಕಡೆ ಬ್ಯಾಕ್ಟೀರಿಯಾಗಳಂತೆ ಹರಡಿಕೊಂಡಿರುತ್ತಾರೆ. ಎಲ್ಲಾ ಬಾಸುಗಳಿಗೂ ಡೂಸು ಬಿಡುವ ಚಟ ಅತಿಯಾಗಿರುತ್ತದೆ. ಇದು ತಮ್ಮೆಲ್ಲರ ಅನುಭವಕ್ಕೂ ಬಂದಿರಲೇಬೇಕು! ಇದೆಂತಾ ರೋಗ ಎಂದು ನನಗಿನ್ನೂ ಅರ್ಥವಾಗಿಲ್ಲ. ಏಕೆಂದರೆ ನನ್ನ ಜೊತೆಯಲ್ಲಿಯೇ ಕೆಲಸ ಮಾಡುತ್ತಿದ್ದವರೊಬ್ಬರು ಬಡ್ತಿ ದೊರೆತು ಬಾಸಾದ ಮೇಲೆ ಅದುವರೆಗೂ ಇಲ್ಲದ ಡೂಸು ಬಿಡುವ ಖಾಯಿಲೆಗೆ ತುತ್ತಾಗಿದ್ದರು! ಅಂದರೆ ಇದು ವಿಚಿತ್ರ ರೋಗ ಎಂಬುದರಲ್ಲಿ ಅನುಮಾನವೇ ಬೇಡ! ಆದರೆ ಈ ಖಾಯಿಲೆಯಿಂದ ಇದುವರೆವಿಗೂ ಯಾರಿಗೂ ಯಾವ ರೀತಿಯಿಂದಲೂ ಅಪಾಯವಾಗಿಲ್ಲ, ಯಾರ ಪ್ರಾಣವೂ ಹೋಗಿಲ್ಲ. ಈ ಮಾತನ್ನ ನೀವು ಒಪ್ಪದಿರಲು ಸಾಧ್ಯ! ಏಕೆಂದರೆ ಕೆಲವು ಬಾಸುಗಳು ಬಿಡುವ ಡೂಸುಗಳಿಂದ ಪ್ರಾಣ ಹೋಗುವಂತಹ ಹಿಂಸೆಯಾಗಬಹುದು. ಆದರೆ ಪ್ರಾಣವಂತೂ ಹೋಗಿಲ್ಲವಲ್ಲ !

ಈ ಬಾಸುಗಳು ಡೂಸುಗಳನ್ನ ಏಕೆ ಬಿಡಬೇಕೆಂಬುದು ನನಗೇ ಏಕೆ, ನಿಮಗೂ ಸಹ ಆಶ್ಚರ್ಯವಾಗಿರಬಹುದು. ಇದಕ್ಕೆ ಸ್ಪಷ್ಟವಾದ ಕಾರಣಗಳು ಗೋಚರಿಸದಿದ್ದರೂ ತಮ್ಮ ಕೆಳಗಿನವರ ಮುಂದೆ ತಾನೆಷ್ಟು ಬುದ್ಧಿವಂತ, ಚಾಣಾಕ್ಷ, ಪ್ರಭಾವಶಾಲಿ, ಗಟ್ಟಿಗ, ಧೀರ-ಶೂರ ಎಂದು ತೋರಿಸಿಕೊಳ್ಳಲಿಕ್ಕಾಗಿಯೆ ಡೂಸು ಬಿಡುವುದು ಎಂಬುದು ಸೂರ್ಯನ ಬೆಳಕಿನಂತೆ ಮುಖಕ್ಕೆ ರಾಚುತ್ತದೆ. ಅದರಲ್ಲಿಯೂ ಮಹಿಳಾ ಉದ್ಯೋಗಿಗಳ ಮುಂದಂತೂ ಇವರ ಡೂಸುಗಳು ಮತ್ತಷ್ಟು ವೈವಿಧ್ಯಮಯವಾಗಿ ಬಿಡುತ್ತವೆ. ಅವಿವಾಹಿತ ತರುಣಿಯರಿದ್ದರಂತೂ ಬಾಸುಗಳ ಉತ್ಸಾಹ ಹೇಳತೀರದು: ಆತ ಯಾವ ವಯಸ್ಸಿನವನಾದರೂ ಸರಿಯೇ. ಹೀಗೆ ಕೊಚ್ಚಿಕೊಳ್ಳುವದರಿಂದಲೂ (ಡೂಸುಗಳಲ್ಲಿ ಸ್ವತಃ ತುತ್ತೂರಿ ಊದುವುದು ಸಹ ಸೇರಿರುತ್ತದೆ), ಮಾಡದಿರುವುದನ್ನು ಮಾಡಿದೆ ಎಂದು ಜಂಭ ಕೊಚ್ಚಿಕೊಳ್ಳುವುದರಿಂದಲೂ ಇವರಿಗೆ ಏನು ಸಿಗುತ್ತದೆ ಎಂದು ಅನೇಕ ಸಲ ನಾನು ಆಶ್ಚರ್ಯಪಟ್ಟಿದ್ದೇನೆ. ಇವರ ಡೂಸುಗಳು ಯಾವ ರೀತಿಯಲ್ಲಿರುತ್ತವೆ ಎಂಬುದಕ್ಕೆ ಒಂದು ಘಟನೆಯನ್ನು ಉಲ್ಲೇಖಿಸಬಹುದು.

ಸರ್ಕಾರಿ ಕಛೇರಿಯೊಂದರಲ್ಲಿ ಇದು ನಡೆಯಿತು. ಈ ಕಛೇರಿಗೊಬ್ಬ ಬಾಸು ಮತ್ತು ಅವನ ಕೈಕೆಳಗೆ ಇಬ್ಬರು ಸಣ್ಣ ಬಾಸುಗಳು ಮತ್ತು ಹತ್ತಾರು ಉದ್ಯೋಗಿಗಳು ಇದ್ದರು. ಈ ಕಛೇರಿಯ ಬಾಸಿನ ಬಾಸು ಬೆಂಗಳೂರಿನಲ್ಲಿ ಇರುವುದು. ಕಛೇರಿಯ ಬಾಸು ತಿಂಗಳಲ್ಲಿ ಒಂದು ಅಥವಾ ಎರಡು ಸಲ ಕಛೇರಿಯ ಕೆಲಸದ ಮೇಲೆ ಬೆಂಗಳೂರಿಗೆ ಹೋಗುವುದಿದೆ. ಪ್ರತಿಸಲ ಹೋಗಿ ಬಂದ ಮೇಲೆ ಅಲ್ಲಿ ನಡೆದದ್ದನ್ನು ರಸವತ್ತಾಗಿ ಇಡೀ ಕಛೇರಿಯವರಿಗೆ ತಿಳಿಸಲು ಏಕಪಾತ್ರಾಭಿನಯವನ್ನೇ ಮಾಡುತ್ತಿದ್ದರು. ಸಾಮಾನ್ಯವಾಗಿ ಹೋಗುವಾಗ ರಿಪೋರ್ಟುಗಳನ್ನು ತೆಗೆದುಕೊಂಡು ಹೋಗುವುದು, ವಾಪಸ್ಸು ಬಂದ ಮೇಲೆ ಅದನ್ನು ತಿದ್ದಿ ತೀಡಿ ಮತ್ತೆ ಕಳಿಸುವುದು ಇವೆಲ್ಲಾ ಮಾಮೂಲು. ಒಮ್ಮೆ ಈ ಬಾಸು ಅವರ ಬಾಸಿನ ಕೈಯಿಂದ ಚೆನ್ನಾಗಿ ಬೈಸಿಕೊಂಡು ಬಂದಿದ್ದರಂತೆ! ಇದನ್ನು ಗುಟ್ಟಾಗಿ ಅವರ ಜೊತೆ ಹೋಗಿದ್ದ ಸೆಕ್ಷನ್ ಆಫೀಸರ್ ಶಾಮಣ್ಣ ಹೇಳಿದ್ದು. ಆದರೆ ಬಾಸು ಹೇಳಿದ್ದೆ ಬೇರೆ. ತಾನು ಹೇಗೆ ತನ್ನ ಬಾಸನ್ನು ತನ್ನ ಬುದ್ಧಿವಂತಿಕೆ ಮತ್ತು ಚಾತುರ್ಯಗಳಿಂದ ಬೆರಗಾಗಿಸಿ ಅವರ ತಪ್ಪುಗಳನ್ನೆಲ್ಲಾ ಎತ್ತಿ

ತೋರಿಸಿದೆ ಮತ್ತು ಅದರಿಂದ ಅವರು ತನ್ನನ್ನು ಹೊಗಳಿದರು ಎಂದೆಲ್ಲಾ ಹೇಳಿಕೊಂಡರಂತೆ. ತಾವು ಹೇಳುತ್ತಿರುವುದನ್ನ ತಮ್ಮ ಕೈ ಕೆಳಗಿನವರು ನಂಬುತ್ತಿಲ್ಲಾ ಎಂಬ ಅನುಮಾನವಿದ್ದರೂ ಹೇಳುವುದನ್ನು ಬಿಡುವುದಿಲ್ಲ. ಕೆಲವು ಬಾಸುಗಳ ಜಾಯಮಾನವೇ ಈ ರೀತಿಯದು.

ತಮ್ಮ ಮೇಲಿನವರ ಬಗೆಗೇ ಇಂಥಾ ಡೂಸುಗಳನ್ನು ಬಿಟ್ಟರೆ ಇನ್ನು ತಮ್ಮ ಕೈ ಕೆಳಗಿನ ಉದ್ಯೋಗಿಗಳ ಬಗ್ಗೆ ಏನು ಮಾತಾಡಬಹುದು? ಕೈಯಲ್ಲಿನ ಐದು ಬೆರಳುಗಳೂ ಒಂದೇ ಸಮ ಇರುವುದಿಲ್ಲ. ಹಾಗೇ ಎಲ್ಲ ಉದ್ಯೋಗಿಗಳು ಒಂದೇ ರೀತಿಯಲ್ಲಿರುವುದಿಲ್ಲ. ಅದರಲ್ಲಿಯೂ ಕೆಲವರು ಬಂಡಾಯ ಪ್ರವೃತ್ತಿಯವರಾಗಿರುತ್ತಾರೆ. ಅವರನ್ನಂತೂ ಕೆಲಸ ಕೇಳುವಂತೆಯೇ ಇರುವುದಿಲ್ಲ. ಕೆಲಸ ಕೇಳಿದರೆ ಕಾನೂನು ಕಟ್ಟಲೆಗಳನ್ನು ಹೇಳಿ ಬಾಸುಗಳಿಗೇ ಮಣ್ಣು ಮುಕ್ಕಿಸುವವರು ಕಡಿಮೆಯೇ? ಅಂಥವರ ಬಗೆಗೆ ಸಾಮಾನ್ಯವಾಗಿ ಬಾಸುಗಳು, ತಾನು ಅವನನ್ನು ಹೇಗೆ ಬಗ್ಗಿಸಿದೆ, ಹೇಗೆ ಮೆಮೋ ಇಷ್ಯೂ ಮಾಡಿದೆ, ಹೇಗೆ ಪ್ರಮೋಶನ್ನಿಗೆ ಕಲ್ಲು ಹಾಕಿದೆ, ಅವನ ಲಾಯರ್ ಪಾಯಿಂಟುಗಳನ್ನು ಹೇಗೆ ಟ್ಯಾಕಲ್ ಮಾಡಿದೆ, ಹೊಡೆಯಲು ಬಂದಾಗ ತಾನು ಹೇಗೆ ಹೆದರಿಸಿದೆ, ಇಲ್ಲಾ ಮಾರಾ ಮಾರಿಯಲ್ಲಿ ತಾನು ಹೇಗೆ ಅವನನ್ನು ಮಣ್ಣು ಮುಕ್ಕಿಸಿದೆ ಮುಂತಾಗಿ ಡೂಸುಗಳನ್ನು ಬಿಡುವುದು ಮಾಮೂಲು.

ತಲೆನೋವು ಕೊಡುವ ಉದ್ಯೋಗಿಗಳಲ್ಲಿ ಹೆಣ್ಣು - ಗಂಡೆಂಬ ಭೇದವಿಲ್ಲ. ಎಲ್ಲ ವರ್ಗಗಳಲ್ಲೂ ತರಲೆ ಉದ್ಯೋಗಿಗಳಿದ್ದೇ ಇರುತ್ತಾರೆ. ಸಾಮಾನ್ಯವಾಗಿ ಹೆಂಗಸರಲ್ಲಿ ಇಂತಾ ತರಲೆಗಳು ಕಮ್ಮಿ. ಹೆಚ್ಚೆಂದರೆ ಅವರು ಸ್ವತಃ ತಮ್ಮ ಡೂಸುಗಳಿಂದಲೇ ಬಾಸುಗಳನ್ನು ಕಂಗಾಲು ಮಾಡಿರುವ ಅಸಂಖ್ಯ ಘಟನೆಗಳನ್ನು ನಾನು ಕೇಳಿದ್ದೇನೆ ಮತ್ತು ಸ್ವತಃ ನೋಡಿದ್ದೇನೆ. ಸಾಮಾನ್ಯವಾಗಿ ತಮ್ಮ ಹೆಣ್ಣು ಸಹಾಯಕರಿಂದ ಬಾಸು ಬೇಸತ್ತು, ಆಕೆಯನ್ನು ಜಬರ್ದಸ್ತಾಗಿ ದಬಾಯಿಸಬೇಕೆನ್ನುವಾಗ, ತಮ್ಮ ಇಲ್ಲವೇ ತಮ್ಮ ಕುಟುಂಬದವರ ಆರೋಗ್ಯದ ಬಗೆಗೆ ಡೂಸು ಬಿಟ್ಟು ಬಾಸಿನ ಕನಿಕರ ಗಿಟ್ಟಿಸಿ ಪರ್ಮಿಷನ್ನಿನೊಂದಿಗೆ ಮನೆಗೆ ತೆರಳಿರುವ ತರಳೆಯರ ವಿಷಯಗಳು ಸಾಮಾನ್ಯವೇ! ಇಲ್ಲಿ ಬಾಸುಗಳಿಗೆ ಡೂಸು ಬಿಡುವ ಅವಕಾಶವೇ ಸಿಗುವುದಿಲ್ಲ. ಬರೀ ಕೇಳುವುದಷ್ಟೆ ಅವರ ಪಾಲಿಗುಳಿಯುವುದು.

ಉದ್ಯೋಗದಲ್ಲಿರುವವರಿಗೆ ಬಾಸುಗಳಿರುವುದೇನೊ ಸರಿ. 'ಗೃಹಿಣೀ ಗೃಹಮುಚ್ಯತೇ' ಎಂದು ನಂಬಿ ಮನೆಯಲ್ಲಿರುವ ಗೃಹಿಣಿಯರಿಗೆ ಯಾರು ಬಾಸು? ಉತ್ತರ ಸುಲಭವಲ್ಲವೆ..? ಇನ್ಯಾರಿದ್ದಾರು? ಸ್ವತಃ ಆಕೆಯ ಪತಿಯೇ ಆಕೆಗೆ ಬಾಸು! ಇದನ್ನು ಕೆಲವರು ಅಲ್ಲಗಳೆಯಬಹುದು! ಯಾಕೆಂದರೆ ಯಾವ ಗಂಡನೂ ಹೆಂಡತಿಗೆ ಬಾಸಾಗಲಾರ! ನಿಜವಾಗಿಯೂ ಹೆಂಡತಿಯೇ ಗಂಡನಿಗೆ ಬಾಸು ಎಂದು ವಾದಿಸುವವರಿಗೆ ಕಮ್ಮಿಯೇನಿಲ್ಲ. ಕೆಲವರು ಅಲಂಕಾರಕ್ಕಾಗಿ ಮನೆಯಲ್ಲಿ ಹಾಕಿರುತ್ತಾರಲ್ಲ, 'ನಾನು ಈ ಮನೆಯ ಯಜಮಾನ! ಹಾಗೆನ್ನಲು ನನ್ನ ಮಡದಿ ಅನುಮತಿ ಇತ್ತಿರುವಳು', ಎಂದು! (ಅದೂ ಸಾಮಾನ್ಯವಾಗಿ ಇಂಗ್ಲಿಷಿನಲ್ಲಿ).

ಇನ್ನು ಬಾಸಾಗಿರುವ ಪತಿ, ಮಡದಿಯ ಮುಂದೆ ಬಿಡುವ ಡೂಸುಗಳ ಬಗ್ಗೆ ಹೇಳಬೇಕೆಂದರೆ ಸಾವಿರಾರು ಪುಟಗಳ ಬೃಹತ್ ಕಾದಂಬರಿಯೇ ಆದೀತು! ಅದೇನು ವೈವಿಧ್ಯ? ಅದೇನು ವೈಖರಿ! ಎಂಥ ಸೃಜನಶೀಲ ಡೂಸುಗಳು! ಆಫೀಸಿನ ಹೆಣ್ಣು ಸಹೋದ್ಯೋಗಿಯನ್ನು ಕಾಫಿಗೊಯ್ದು ಸಿನಿಮಾ ತೋರಿಸಿ ಮನೆಗೆ ಮರಳಿದಾಗ, ಹೆಂಡತಿಯ ಗಲ್ಲ ಹಿಡಿದು 'ಚಿನ್ನಾ, ನಿನಗೊಂದು ಸರ ಕೊಡಿಸಬೇಕೆಂದು ಒಂದು ಪಾರ್ಟ್ ಟೈಂ ಕೆಲಸ ಕೇಳಲು ಹೋಗಿದ್ದೆ' ಎಂಬ ಹಸಿಹಸಿ ಡೂಸು ಕೇಳಿದ್ದೀರಾ? 'ಯಾರ್ರೀ.. ಅವಳು ನೀವು ಸ್ಕೂಟರಿನಲ್ಲಿ ಕೂರಿಸಿಕೊಂಡು ಹೋಗುತ್ತಿದ್ದವಳು?' ಎಂದು ಮಡದಿ ಹರಿ ಹಾಯ್ದಾಗ, 'ಅಯ್ಯೋ, ಆಕೇನಾ.. ನನ್ನ ಕೊಲೀಗ್ ಚಿನ್ನಾ .. ಅವಳ ಮನೆಯಿಂದ ಫೋನು ಬಂದಿತ್ತು, ಅವಳ ಮಗು ಮೆಟ್ಟಿಲ ಮೇಲಿಂದ ಬಿದ್ದಿತಂತೆ, ಅದಕ್ಕೇ ಅರ್ಜೆಂಟಾಗಿ ಮನೆಗೆ ಕರ್ಕೊಂಡು ಹೋಗ್ತಾ ಇದ್ದೆ. ನನ್ನ ಸ್ಕೂಟರಿನ ಹಿಂದಿನ ಸೀಟಿನಲ್ಲಿ ಕೂರುವ ಅಧಿಕಾರ ನಿನಗೆ ಬಿಟ್ಟು ಇನ್ನಾರಿಗಿದೆ' ಎಂಬ ಡೂಸಿನಿಂದ ಮಡದಿಯ ಅಟ್ಯಾಕನ್ನು [illegible] ನೀವು ಕಂಡಿಲ್ಲವೆ?

ವಿದೇಶಕ್ಕೆ ಹೋಗಿ ಬಂದ ಬಾಸುಗಳು ಅಲ್ಲಿ ತಾವು ಕಂಡ, ಕಾಣದ [illegible] ಕಲ್ಚರುಗಳ ಬಗೆಗೆ ಗಂಟೆಗಟ್ಟಲೆ ಡೂಸು ಬಿಡುತ್ತಾ ಎಲ್ಲರನ್ನೂ 'ಇಂಪ್ರೆಸ್' [illegible] ಶ್ರಮಿಸುವುದು ಸರ್ವೇ ಸಾಮಾನ್ಯ. ಈ ಬಾಸುಗಳಿಗೆ ಧೈರ್ಯವೇನೆಂದರೆ ತಮ್ಮ ಕೆಳಗಿನ ವಿದೇಶ ಕಂಡಿಲ್ಲದ ಹುಂಬರಿಗೆ ಅಲ್ಲಿನ ಬಗ್ಗೆ ಏನು ಬೇಕಾದರೂ ಹೇಳಿ ತಮ್ಮ ಹಿರಿಮೆಯನ್ನು ತೋರಿಸಿಕೊಳ್ಳಬಹುದು ಎಂದು, ಭಂಡ ಧೈರ್ಯ ಇಂಥಾ ಬಾಸುಗಳಿಗೆ ಮಾತ್ರ ಸಾಧ್ಯ. ಜೊತೆಗೆ ವಿದೇಶಕ್ಕೆ ಹೋಗಿ ಬಂದಿರುವುದರಿಂದ ತಾನು ಮೇಲು ಎಂಬ ಅಹಂ ಬೇರೆ ಸೇರಿ ಅವರ ಸ್ಥಿತಿ ಚಿಂತಾಜನಕವಾಗಿರುತ್ತದೆ. ನಾನು ಕಂಡ ಒಬ್ಬ ಮೇಲಧಿಕಾರಿಯಂತೂ ವಿದೇಶದಿಂದ ವಾಪಸ್ಸು ಬಂದು ಸುಮಾರು ಹತ್ತು ವರ್ಷವಾಗಿದ್ದರೂ ಸಹ ಅಲ್ಲಿನ ಬಗೆಗೇ ಮಾತಾಡುತ್ತಾ ಭ್ರಮಾಲೋಕದಲ್ಲಿಯೇ ವಿಹರಿಸುತ್ತಾ, ನೋಡುಗರ ಕಣ್ಣಿಗೆ ಮಾನಸಿಕ ವಿಕಲ್ಪಕ್ಕೊಳಗಾದ ವ್ಯಕ್ತಿಯಂತೆ ಕಾಣುತ್ತಿದ್ದಾರೆ. ಅಲ್ಲಿ ಕೆಲಸಗಾರರು ಎಷ್ಟು ಮುತುವರ್ಜಿಯಿಂದ ಕೆಲಸ ಮಾಡುತ್ತಾರೆ, ಸಮಯಕ್ಕೆ ಎಷ್ಟೊಂದು ಮಹತ್ವವನ್ನು ಕೊಡುತ್ತಾರೆ, ಕೆಲಸದಲ್ಲಿ ಎಂಥಾ 'ಕಮಿಟ್ಮೆಂಟ್' ಎಂದೆಲ್ಲಾ ಹೇಳುವ ಬಾಸುಗಳು, ಅಲ್ಲಿ ಬಾಸುಗಳು ಹೇಗಿರುತ್ತಾರೆ, ಮೇಲರಿಮೆಯಿಲ್ಲದೆ ಕೆಳಗಿನವರೊಂದಿಗೆ ಹೇಗೆ ಬೆರೆಯುತ್ತಾರೆ ಎಂದು ಹೇಳುವುದನ್ನು ಮಾತ್ರ ಮರೆಯುತ್ತಾರೆ ಎಂಬುದು ನಿಜಕ್ಕೂ ಸೋಜಿಗದ ವಿಷಯ.

ಇಷ್ಟೆಲ್ಲಾ ಹೇಳಿದ ಮೇಲೆ ಡೂಸು ಬಿಡುವುದರಲ್ಲಿ ಕೆಲವು ಪರಿಣಿತರ ಬಗೆಗೂ ಹೇಳದಿದ್ದರೆ ಚೆನ್ನಾಗಿರುತ್ತದೆಯೇ? ಕೆಲವರಿಗೆ ದೇವರು ಆಕರ್ಷಕವಾಗಿ ಮಾತನಾಡುವ ವರ ಕೊಟ್ಟಿರುತ್ತಾನೆ ಎನಿಸುತ್ತದೆ. ಈ ರೀತಿ ಮಾತನಾಡುವವರು ಬಾಸುಗಳಾಗಿ, ಡೂಸು ಭೂಪರಾದರೆ? ಅವರ ಮಾತನ್ನು ಕ್ಷಮಿಸಿ ಡೂಸುಗಳನ್ನು ಕೇಳುವಷ್ಟು ಕಾಲವೂ ಸತ್ಯ ಎನಿಸಿ ಬೆನ್ನು ತಿರುಗಿಸಿದ ತಕ್ಷಣವೇ 'ಎಂಥಾ ಡೂಸು' ಎನಿಸಿಬಿಡುವುದು! ಆದರೂ ಅಂಥವರ ಡೂಸುಗಳನ್ನು ಕೇಳಿಯೂ ತಡೆದುಕೊಳ್ಳಬಹುದು.

ಡೂಸುಗಳ ಬಗೆಗೆ ನನ್ನದೊಂದು ಅಹವಾಲು ಇದೆ. ಡೂಸುಗಳು ಬರೀ ಬಾಸುಗಳಿಗೆ ಮಾತ್ರ ಮೀಸಲಾಗಬಾರದು. ಸಮಾಜದ ಎಲ್ಲ ವರ್ಗದ, ಎಲ್ಲ ಸ್ತರಗಳ ಜನರೂ ಡೂಸು ಬಿಡುವುದನ್ನು ಕಲಿಯಬೇಕು. ಇದನ್ನು ಒಂದು ಸೃಜನಾತ್ಮಕವಾದ ಪ್ರತಿಭೆಯೆಂದು ಎಲ್ಲರೂ ಒಪ್ಪಿ ಈ ಡೂಸು ಕಲೆಗೆ ಪ್ರೋತ್ಸಾಹ ಕೊಡಬೇಕು. ಈ ಕೆಲಸವನ್ನು ಕಲೆ ಮತ್ತು ಸಂಸ್ಕೃತಿಗೆ ತಮ್ಮನ್ನು ತೊಡಗಿಸಿಕೊಂಡಿರುವ ಎಲ್ಲ ಸಂಘ-ಸಂಸ್ಥೆಗಳು ಸ್ವಯಂ ಪ್ರೇರಿತರಾಗಿ ಮಾಡಬೇಕು! ಬರೀ ಇಷ್ಟಾದರೆ ಸಾಲದು! ಸರ್ಕಾರ ಡೂಸರನ್ನು ಪ್ರೋತ್ಸಾಹಿಸಲೋಸುಗ ವರ್ಷಕ್ಕೆ ಕನಿಷ್ಠ ಹತ್ತು ಜನರಿಗೆ 'ಡೂಸಶ್ರೀ' ಪ್ರಶಸ್ತಿಯನ್ನು ಕೊಡಬೇಕು. ಇನ್ನು ಹೆಂಗಸರಿಗೂ ಈ ಕ್ಷೇತ್ರದಲ್ಲಿ ಪ್ರೋತ್ಸಾಹ ಆವಶ್ಯಕ. ಅವರಿಗಾಗಿ ಸಮಾಜ ಕಲ್ಯಾಣ ಇಲಾಖೆಯವರು ಅಲ್ಲಲ್ಲಿ ಶಿಬಿರಗಳನ್ನು ಹಮ್ಮಿಕೊಂಡು ಸೂಕ್ತ ತರಬೇತಿ ಮತ್ತು ಮಾರ್ಗದರ್ಶನ ನೀಡಬೇಕು. ಮತ್ತು ವರ್ಷದಲ್ಲಿ ಕನಿಷ್ಠ ಐದು ಜನ ಮಹಿಳೆಯರನ್ನು ಗುರುತಿಸಿ 'ಡೂಸಸ್ತ್ರೀ' ಪ್ರಶಸ್ತಿಯನ್ನು ನೀಡಬೇಕು. ಇಷ್ಟಾದರೆ ಈ ಕಲೆಗೆ ಪ್ರೋತ್ಸಾಹ ನೀಡಿದಂತಾಗುತ್ತದೆ ಎಂದು ನನ್ನ ನಂಬಿಕೆ.

ಎಸ್. [illegible]
[illegible].೫೧೭೭, 'ಶಿವಲತ', ಎಚ್.ಟಿ. ಜೋಡಿ ರಸ್ತೆ, [illegible]



# ಸಮಕಾಲೀನ ಕನ್ನಡ ಕಾವ್ಯದಲ್ಲಿ ಅಂಬೇಡ್ಕರ್

ಸಮಕಾಲೀನ ಕನ್ನಡ ಸಾಹಿತ್ಯದ ಸುಮಾರು ಮೂರು ತಲೆಮಾರುಗಳ ಕವಿಗಳು ತಂತಮ್ಮ ಕಾವ್ಯ ಶಿಲ್ಪದ ಮೂಲಕ ಅಂಬೇಡ್ಕರರನ್ನು ಕನ್ನಡ ಕಾವ್ಯದ ನಾಯಕನನ್ನಾಗಿ ಕಂಡರಿಸಿದ್ದಾರೆ. ಸ್ಥೂಲವಾಗಿ ಸುಮಾರು ಮೂರು ತಲೆಮಾರುಗಳಿಗೆ ಸೇರಿದ ಈವರೆಗಿನ ನೂರಾರು ಕನ್ನಡ ಕವಿತೆಗಳು ಅಂಬೇಡ್ಕರರನ್ನು ಅವಿಸ್ಮರಣೀಯವಾಗಿಸಿವೆ.

ಅಂಬೇಡ್ಕರರ ಬಗೆಗೆ ಕನ್ನಡ ಕಾವ್ಯದಲ್ಲಿ ಸೃಷ್ಟಿಯಾದ ಕಾವ್ಯಸಂಭ್ರಮದ ಹಿಂದೆ ಒಂದು ಅನುಪಮ ಸಂಗತಿಯಿದೆ: ಅಂಬೇಡ್ಕರರನ್ನು ಕುರಿತು ಕೇವಲ ದಲಿತವರ್ಗದ ಕವಿಗಳು ಮಾತ್ರ ಕಾವ್ಯ ರಚಿಸಲಿಲ್ಲ. ಬದಲಾಗಿ, ನಮ್ಮ ಜೀವನ ವ್ಯವಸ್ಥೆಯ ಎಲ್ಲ ವರ್ಗದ, ಎಲ್ಲ ಶ್ರೇಣಿಯ, ಎಲ್ಲ ನಂಬಿಕೆಯ ಮತ್ತು ಬಹುತೇಕ ಎಲ್ಲ ಸಂಸ್ಕೃತಿಯ ನೆಲೆಗಳಿಂದ ಬಂದಂಥ ಕವಿಗಳು ಅಂಬೇಡ್ಕರರನ್ನು ಕಾವ್ಯ ಮಾಡಿದ್ದಾರೆ. ಸಮಕಾಲೀನ ಕನ್ನಡ ಕವಿಗಳು ಅಂಬೇಡ್ಕರರ ಬಗೆಗೆ ತೋರಿದ ಈ ಸಂವೇದನಾ ಸಮುಚ್ಚಯದ ಹಿಂದೆ ಸಮುದಾಯ ಬದುಕಿನ ಭಾವನೆಗಳ ಬೀಜಸತ್ವವೂ ನಮ್ಮ ನಡುವೆ ಇದೆ. ಅಂಬೇಡ್ಕರರಲ್ಲಿ ಮಾನವ ಬದುಕಿನ ಯಾವುದೋ ಸುಲಭ ಗೋಚರವಲ್ಲದ ಸತ್ಯದ ಸಾಕ್ಷಾತ್ಕಾರದಿಂದ ಈ ಕವಿಗಳು ಪುಳಕಿತರೂ ಸಂಭ್ರಮಿತರೂ ಆಗದೇ ಹೋಗಿದ್ದಲ್ಲಿ, ಅವರನ್ನು ಕುರಿತ ಇಷ್ಟೊಂದು ಸಂಕೀರ್ಣ ಸಾಂಸ್ಕೃತಿಕ ಹಿನ್ನೆಲೆಯ ಕಾವ್ಯ ಕನ್ನಡದಲ್ಲಿ ಸೃಷ್ಟಿಯಾಗಲು ಸಾಧ್ಯವಿತ್ತೆ ಎಂಬ ಪ್ರಶ್ನೆ ಸಹಜವೇ ಸರಿ. ಮಾದಾರ ಚೆನ್ನಯ್ಯನನ್ನು ತನ್ನ ಕಾವ್ಯದ ನಾಯಕನನ್ನಾಗಿ ಮಾಡಿದ ಹರಿಹರನ ಭಕ್ತಿ ಕಾವ್ಯವಾಗಲಿ, ಒಬ್ಬ ಯಃಕಶ್ಚಿತ್ ಕಪ್ಪು ಮಹಿಳೆಯನ್ನು ತನ್ನ ಕಾವ್ಯದ ನಾಯಕಿಯನ್ನಾಗಿ ಮಾಡಿದ ಶೇಕ್ಸ್‌ಪಿಯರನ ಪ್ರೇಮ ಕಾವ್ಯವಾಗಲಿ, ಸಾಮಾಜಿಕ ಅರಿವಿನ ಸಂಕೇತವಾದ ಅಂಬೇಡ್ಕರರನ್ನು ತಮ್ಮ ಕಾವ್ಯದ ನಾಯಕನನ್ನಾಗಿ ಮಾಡಿದ ಅಡಿಗರು ಮತ್ತು ಕಂಬಾರರ ಜ್ಞಾನ ಪ್ರಧಾನ ಕಾವ್ಯವಾಗಲಿ, ಮೂಲತಃ ಅವೆಲ್ಲಾ ಕಾವ್ಯದ ಸೃಷ್ಟಿಶೀಲ ಕ್ರಿಯೆಯೇ ಆಗಿದ್ದು, ಆಯಾ ಕಾಲಘಟ್ಟಗಳಲ್ಲಿ ಘಟಿಸಿದ ಮಾನವನ ಆತ್ಮದೊಳಗಿನ ಸಂಭ್ರಮ. ಹಾಗೆ ಅಕ್ಷರಗಳ ಮೇಲೆ ಹರಿದು, ಕನ್ನಡ ಕಾವ್ಯದ ಸಾಲುಗಳಾಗಿವೆ. ಅಂದರೆ, ಸತ್ಯದ, ಪ್ರೇಮದ, ಮಾನವೀಯತೆಯ ನೈಸರ್ಗಿಕ ಒತ್ತಡಗಳನ್ನು ನಮ್ಮ ಕವಿಗಳು ಎಂದೂ ತಿರಸ್ಕರಿಸಿದವರಲ್ಲವೆಂಬುದು ಸಮಕಾಲೀನವಾಗಿಯೂ ನಿರ್ವಿವಾದವಾಗಿ ಸತ್ಯವಾಗಿದೆ. ಹಾಗಲ್ಲದೆ ಹೋಗಿದ್ದಲ್ಲಿ, ಅಡಿಗರಾಗಲಿ, ಸುಮತೀಂದ್ರ ನಾಡಿಗರಾಗಲಿ ಕೇವಲ ಆದಿಶಂಕರನನ್ನು ಮಾತ್ರ ತಮ್ಮ ಕಾವ್ಯನಾಯಕ ಎನ್ನಬೇಕಿತ್ತು. ಬುದ್ಧನೂ ಅಲ್ಲದ, ಬಸವನೂ ಅಲ್ಲದ, ಯಃಕಶ್ಚಿತ್ ಒಬ್ಬ ಅಸ್ಪೃಶ್ಯನಾದ ಅಂಬೇಡ್ಕರರು. ಡಾ|| ಸಿದ್ಧಲಿಂಗಯ್ಯನವರಿಗಿಂತಲೂ ಚಂದ್ರಶೇಖರ ಪಾಟೀಲರಲ್ಲಾಗಲಿ, ಕಂಬಾರರಲ್ಲಾಗಲಿ ಶಕ್ತಿಯುತವಾದ ಕಾವ್ಯವೇ ಆದದ್ದು, ನಮ್ಮ ಭಾಷೆಯ ಬಗೆಗಾಗಲಿ, ಕನ್ನಡ ಕವಿಕಾವ್ಯ ಪರಂಪರೆಯ ಬಗೆಗಾಗಲಿ ಆಚಂದ್ರಾರ್ಕ ಅಭಿಮಾನವನ್ನು ಮೂಡಿಸುತ್ತದೆ. ವಿಮರ್ಶೆಯ ಸಂದರ್ಭದಲ್ಲಿ ಅಡಿಗರು, ನಾಡಿಗರು, ಚಂಪಾ ಅಥವಾ ಕಂಬಾರ ಮುಂತಾದವರ ಸಾಹಿತ್ಯ ತಾಳುವ ಧೋರಣೆಯ ಬಗೆಗೆ ಏನೆಲ್ಲ ಮತ್ತು ಎಷ್ಟೆಲ್ಲ ಪ್ರಶ್ನೆಗಳು ಅಥವಾ ಆಕ್ಷೇಪಗಳನ್ನು ಎತ್ತಬಹುದಾದರೂ, ಮೂಲದಲ್ಲಿ ಇವರೆಲ್ಲ ಕನ್ನಡ ನಾಡಿನ ಆದರಾಭಿಮಾನಗಳ ಕವಿಗಳು ಎನಿಸುತ್ತಾರೆ; ಮಾನವ ಪ್ರೀತಿಯಂಥ ಸಾರ್ವಕಾಲಿಕ ಸತ್ಯವನ್ನು ಕನ್ನಡದಲ್ಲಿ ಎತ್ತಿಹಿಡಿದಿರುವವರು ಈ ಕವಿಗಳು. ಬಸವಣ್ಣನನ್ನೂ ಮೊದಲುಗೊಂಡು ಎಲ್ಲರನ್ನೂ, ಎಲ್ಲವನ್ನೂ, ತಮ್ಮ ವ್ಯಂಗ್ಯದ ರಂಗದ ಮೇಲೆ ನಿಲ್ಲಿಸಿ, ಡಂಗೂರ ಬಾರಿಸಿ ಬಿಡುವ ಚಂದ್ರಶೇಖರ ಪಾಟೀಲರು ಅಂಬೇಡ್ಕರರನ್ನು ಕಾವ್ಯ ಮಾಡುವಾಗಿನ ಅವರ ಗಾಂಭೀರ್ಯ ಆಶ್ಚರ್ಯವೆನಿಸಿಬಿಡುತ್ತದೆ. ವ್ಯಂಗ್ಯವೇ ಸ್ಥಾಯೀಭಾವವಾದ ಈ ಕವಿಗೆ ಅಂಬೇಡ್ಕರರಂಥ ಒಬ್ಬ ಬೆಲೆಯಿಲ್ಲದ ಮಾನವನನ್ನು ಕಾವ್ಯ ಮಾಡುವಾಗ ಈ ಗಾಂಭೀರ್ಯದ ವೈಶಿಷ್ಟ್ಯ ಹೇಗೆ ಸಾಧ್ಯ ಎಂದೆನಿಸುತ್ತದೆ.

ಈ ಶತಮಾನದಾರಂಭದ ಅಗ್ರಗಣ್ಯ ಕನ್ನಡ ಕವಿಗಳನ್ನು ಬಹುವಿಧವಾಗಿ ಕಾಡಿದ ಹಾಗೂ ತೀವ್ರವಾಗಿ ಸೆಳೆದುಕೊಂಡ ಗಾಂಧೀಜಿಯವರನ್ನು, ಸಮಕಾಲೀನ ದಲಿತ ಬಂಡಾಯ ಕಾವ್ಯದ ಸಂದರ್ಭದಲ್ಲೂ ಅಷ್ಟೇ ಗಂಭೀರವಾಗಿ ತೆಗೆದುಕೊಂಡದ್ದು ನಮ್ಮ ಕಾವ್ಯ ಪರಂಪರೆ ಸಾರುವ ಜೀವನ ಧ್ಯೇಯದ ಶಾಶ್ವತ ಸಂಕೇತವಾಗಿದೆ. ಕೊನೆಯ ಪಕ್ಷ, ನವ್ಯ ಕಾವ್ಯ ಗಾಂಧೀಜಿಯವರ ಬಗೆಗೆ ತುಂಬಾ ಅರ್ಥವತ್ತಾಗಿಯೇ ಪ್ರತಿಕ್ರಿಯಿಸಿರುವುದನ್ನು ಸ್ವತಃ ಅಡಿಗರಲ್ಲೇ ಕಾಣಬಹುದಾಗಿದೆ. ಆರ್ಥಿಕ ಮತ್ತು ವಾಣಿಜ್ಯ ಲೋಕದ ಉದಾರೀಕರಣ ನೀತಿಯ ವೇಗದಲ್ಲಿ, ಗಾಂಧೀಜಿಯವರ ಚಿಂತನೆ ಅಪ್ರಸ್ತುತ ಎಂಬ ಮಾತು ಮೇಲಿಂದ ಮೇಲೆ ಕೇಳಿಬರುತ್ತಿರುವಾಗ ನಕಾರಾತ್ಮಕ ಧೋರಣೆಯೇ ಅಂತಿಮ ಎಂದು ತೀರ್ಮಾನಿಸುವುದು ಸಾಧ್ಯವೋ ಅಲ್ಲವೋ ಆ ವಿಷಯ ಬೇರೆ. ಅದೇ ಗಾಂಧಿಯ ಬಗೆಗೆ ಕನ್ನಡ ಕಾವ್ಯ ತಾಳಿರುವ ಧೋರಣೆಯೇ ಬೇರೆ. ಆದರೆ ಅದೇ ಗಾಂಧಿಯುಗದವರೇ ಆದ ಅಂಬೇಡ್ಕರರ ಬಗೆಗೆ ನವೋದಯ ಕಾವ್ಯ ಪ್ರತಿಕ್ರಿಯಿಸಿರುವಂತಹ ಒಂದೇ ಒಂದು ನಿದರ್ಶನ ಕೂಡ ಎಲ್ಲೂ ಇದ್ದಂತಿಲ್ಲ.

ಯಥಾಪ್ರಕಾರ ಲೋಡೆಡ್ ಅರ್ಥಗಳನ್ನೂ ನುಡಿಚಿತ್ರಗಳನ್ನೂ ತೆಕ್ಕೆ ತೆಕ್ಕೆಯಾಗಿ ಹಿಡಿದು ನುಗ್ಗುವ ಅಡಿಗರಿಗೇ ಸಹಜವಾದ ಮತ್ತು ರಬ್ಬುರಬ್ಬಾದ ಅರ್ಥಪೂರ್ಣ ಸಾಲುಗಳನ್ನು ಅಡಿಗರ "ಅಂಬೇಡ್ಕರ್ ಭೀಮರಾಯರಿಗೆ" ಎಂಬ ಕವಿತೆಯಲ್ಲಿ ಕಾಣಬಹುದಾಗಿದೆ.

*...... ಹೆಣಗುತ್ತ ಬಂದಿರಿ ಬಾಳಿ*
*ನುದ್ದಕ್ಕೂ ವಸ್ತುಸ್ಥಿತಿಗೆ ತತ್ವ ಸಾಂಗತ್ಯ*
*...... ಈಸುವುದು ಸಾಧ್ಯವಾದರೆ, ಇದ್ದು*
*ಜಯಿಸುವುದು, ಮುಳುಗಿ ಸಾಯುವುದಲ್ಲ*
*ಕಲ್ಮುಳ್ಳುಗಳ ರಕ್ತ ಬಸಿಯುವಿಕ್ಕಟ್ಟಲ್ಲಿ*
*ಸ್ವಂತ ಕಾಲಿಂದಲೇ*
*ನಡೆದು ಹತ್ತಿದಿರಿ ಮುಟ್ಟಿದಿರಿ ಮಾನವತ್ವದ ಪರಾಕಾಷ್ಠೆ.*

ಈ ಸಾಲುಗಳಲ್ಲಿ ಅಂಬೇಡ್ಕರರ ಜೀವಪ್ರೀತಿಯನ್ನೂ ಛಲಬಿಡದೆ ಬದುಕಿದ ಅವರ ಸಂಕಲ್ಪ ಬಲದ ಸ್ವರೂಪವನ್ನೂ, "ಈಸುವುದು, ಸಾಧ್ಯವಾದರೆ ಇದ್ದು, ಜಯಿಸುವುದು, ಮುಳುಗಿ ಸಾಯುವುದಲ್ಲ," ಎಂಬ ಎರಡು ಸಾಲುಗಳು ತುಂಬಾ ಅರ್ಥವತ್ತಾಗಿ ಕಟ್ಟಿಕೊಡುತ್ತಾರೆ.

*"ಹಿಂದುತ್ವದೊಳಗಿರುವ ಸಿಂಧುತ್ವ ಬಂಧುತ್ವ ಸಮತತ್ವಗಳ ರಾಗ ಮಾಲಿಕೆಯನ್ನೆಬ್ಬಿಸಲು ದುಡಿದು, ದಣಿದು*
*ಬೌದ್ಧಕ್ಕೆ ಸೋತದ್ದು ಸೋಜಿಗವಲ್ಲ, ಬುದ್ಧಿ ಯೋಗಿಯೇ."*

ಸುಲಭಗಮ್ಯವಲ್ಲದ ಈ ಸಾಲುಗಳಲ್ಲಿ ಅರ್ಥಗಳನ್ನು ಶೋಧಿಸಿ ತೆಗೆಯುವುದರಲ್ಲೇ ಅಡಿಗರ ಕಾವ್ಯದ ಸೊಗಸಿರುವುದು. ಹಿಂದೂ ಧರ್ಮವನ್ನೂ ಅದರ ಪುರೋಹಿತಶಾಹಿ ಧೋರಣೆಯನ್ನೂ ಅದರ ಪ್ರತಿಗಾಮಿತ್ವ ಮತ್ತು ಜೀವವಿರೋಧಿ ತತ್ವವನ್ನು, ಅದರ ಅಂಗುಲ ಅಂಗುಲವನ್ನೂ ಅಂಬೇಡ್ಕರರು ವಿವೇಕಾನಂದರಿಗಿಂತಲೂ ತೀವ್ರತರವಾಗಿ ಪ್ರಶ್ನಿಸುತ್ತಾ ನಡೆದರು. ಅಂಬೇಡ್ಕರರ ಆ ಪ್ರಶ್ನಿಸುವ ಅವಿಶ್ರಾಂತ ಪ್ರಕ್ರಿಯೆಯಲ್ಲಿ ಹಿಂದೂ ಧರ್ಮವು ತನ್ನ ಉಳಿವಿನ ನೆಲೆಗಳನ್ನು ತಾನೇ ತಾನಾಗಿ ಕಂಡುಕೊಳ್ಳತೊಡಗಿತೆಂಬುದನ್ನು ಮರೆಯುವಂತಿಲ್ಲ. ಈ ಸತ್ಯ ಸಂಗತಿಯನ್ನು ಕಾವ್ಯ ಮಾಡುವ ಸಂದರ್ಭದಲ್ಲಿ, ಅಡಿಗರದು "ಬಿಜೆಪಿ ಹಿಂದುತ್ವ" ಎಂದು ಯಾರಾದರೂ ಟೀಕಿಸಿದರೂ ಅಡಿಗರಿಗೆ ಚಿಂತೆಯಿಲ್ಲ. ಅಂತಹ ವಿದಲ ವಿಕಲ್ಪಗಳ ಅರ್ಥದ ನೆಲೆಯಲ್ಲೇ ಅಡಿಗರು "ಹಿಂದುತ್ವ" ಎಂಬ ಪದವನ್ನು ಬಳಸುತ್ತಾರೆ. ಅದೇ ಸಂದರ್ಭದಲ್ಲಿ ಅಂಬೇಡ್ಕರರು ಅಡಿಗರು 'ಬುದ್ಧಿಯೋಗಿ' ಎಂದದ್ದಾಗಲಿ "ಬೌದ್ಧಕ್ಕೆ ಸೋತದ್ದು ಸೋಜಿಗವಲ್ಲ" ಎಂದದ್ದಾಗಲಿ, ಅದು ಅಡಿಗರಿಗೇ ಸಹಜವಾದ ಮೆಟಫಿಸಿಕಲ್ ಕಾವ್ಯದ ರೀತಿಯಾಗಿದೆ. ಅಂತೂ ಅಡಿಗರು ತಮ್ಮ ಕವಿತೆಯಲ್ಲಿ ಅಂಬೇಡ್ಕರರ ಸೈದ್ಧಾಂತಿಕ ವ್ಯಕ್ತಿತ್ವವನ್ನು ಅರ್ಥವತ್ತಾಗಿ ಕಡೆದಿದ್ದಾರೆ. ಅದರ ಸುತ್ತಲೂ ಇದ್ದಂತಹ ತತ್ಕಾಲೀನ ಪ್ರತಿಕೂಲ ಪರಿಸ್ಥಿತಿಗಳನ್ನೂ, ಅವುಗಳೊಡನೆ ಅವರು ಸೆಣಸಿದ ಅನಿವಾರ್ಯ ಸಂಘರ್ಷದ ಚಿತ್ರವನ್ನು ಅಡಿಗರು ತಮ್ಮ ಕಾವ್ಯದಲ್ಲಿ ಪಡೆಯುತ್ತಾರೆ. ಅದೇ ಅಂಬೇಡ್ಕರರ ಸೈದ್ಧಾಂತಿಕ ವ್ಯಕ್ತಿತ್ವವನ್ನು ಸುಮತೀಂದ್ರ ನಾಡಿಗರು ಇನ್ನೊಂದು ಚಿತ್ರದಲ್ಲಿ ಬಿಡಿಸುತ್ತಾರೆ :

ಡಾ|| ಮ. ನ. ಜವರಯ್ಯ

*''ಅಸ್ಪೃಶ್ಯತೆಯ ನೋವು ಎದೆಯ ಕೊರೆಯುತ್ತಿದ್ದರು*
*ದೇಶದ ಒಳಿತನ್ನು ನೀನು ಚಿಂತಿಸಿದ್ದು ಹಾಗೆ''*
*''ಯಾವುದೊಂದು ಜಾತಿಮತದ ಸ್ವತ್ತು ಪ್ರತಿಭೆಯಲ್ಲ*
*ಬುದ್ಧಿಮತ್ತೆ ಯಾವುದೇ ಜಾತಿ ಮೀಸಲಲ್ಲ*
*ಇಂಥ ಸತ್ಯ ಮತ್ತೆ ಮತ್ತೆ ನಮಗೆ ತೋರಿದೆ*
*ಭೀಮರಾಯ ನಿನ್ನಂಥವರು ಬೇಕು ನಮ್ಮ ನಾಡಿಗೆ''*

ಅಂಬೇಡ್ಕರರ ಯುಗದ ದೇಶದ ವಾಸ್ತವಿಕ ಪರಿಸ್ಥಿತಿಗಳು ಮತ್ತು ಆ ಪರಿಸ್ಥಿತಿಗಳಿಗೆ ತುಂಬ ಪ್ರಜ್ಞಾಪೂರ್ವಕವಾಗಿಯೇ ಪ್ರತಿಕ್ರಿಯಿಸಿದ ಅಂಬೇಡ್ಕರರ ಮೂಲಚಿಂತನೆಯ ಒದಿನ ವಿವರಗಳು ನಾಡಿಗರ ಕವಿತೆಯ ಈ ಸಾಲುಗಳಲ್ಲಿ ಅನುರಣಗೊಳ್ಳುತ್ತವೆ. ಇಲ್ಲಿ ಅನುರಣನ ಎಂಬ ಪದವನ್ನೇ ಏಕೆ ಬಳಸಿದೆ ಅಂದರೆ, ಪ್ರತಿಭೆ ಎಂಬುದು ಯಾವುದೇ ಒಂದು ಜಾತಿಯ ಸ್ವತ್ತಲ್ಲ ಎಂಬ ನಾಡಿಗರ ಮಾತು ಸಮಕಾಲೀನವಾದುದಲ್ಲ; ಬದಲಾಗಿ, ಅದು ಅಂಬೇಡ್ಕರ್ ಕಾಲದ ತುಂಬಾ ಜನಪ್ರಿಯವೂ, ಆ ಕಾಲದಲ್ಲಿ ಕೆಳವರ್ಗಗಳಿಂದ ಹೊರಬಂದ ತುಂಬಾ ಚರ್ಚಾಸ್ಪದವೂ ಆದ ಮಾತು. ಈ ಮಾತನ್ನು ಆ ಕಾಲದ ಕಾಂಗ್ರೆಸ್‌ನ ಮಡಿವಂತರು ಇಷ್ಟವಿಲ್ಲದಿದ್ದರೂ ಕೇಳಲೇಬೇಕಾಗಿದ್ದುದು ಅನಿವಾರ್ಯವಾಗಿತ್ತು. ಕಾರಣ, ಅದೊಂದು ವೈಜ್ಞಾನಿಕ ಸತ್ಯವಾಗಿತ್ತು. ಆದರೆ, ಹಿಂದೂ ಧರ್ಮದ ಬಗೆಗೆ ಅಂಬೇಡ್ಕರರು ಎಷ್ಟೇ ಕ್ರಾಂತಿಕಾರಿ ಯಾಗಿದ್ದರೂ ಅವರ ವ್ಯಕ್ತಿತ್ವ ಕರುಣೆಯಿಂದ ತುಂಬಿತ್ತು ಎಂಬ ಸತ್ಯವನ್ನು ''ಆಗ ಕರಗಿತು ನಿನ್ನ ತಥಾಗತನ ಕರುಣೆ'' ಎಂಬ ಸಾಲಿನಲ್ಲಿ ನಾಡಿಗರು ತುಂಬಾ ಅರ್ಥವತ್ತಾಗಿಯೇ ಧ್ವನಿಸಿದ್ದಾರೆ. ಸುಮತೀಂದ್ರ ನಾಡಿಗರು ಬಿಡಿಸಿರುವ ಇದೇ ಚಿತ್ರವನ್ನು ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯನವರ ಈ ಸಾಲುಗಳಲ್ಲೂ ಕಾಣಬಹುದಾಗಿದೆ.

*''ದೇಶದ ಬೆಳವಣಿಗೆಯ ಕನಸು ಕಾಣುತ್ತ*
*ಕೀಳರಿಮೆಗೆಲ್ಲ ಬಯಸಿದ ಧೀರ*
*ಬುದ್ಧರಕ್ಷಣೆ ಹೋಗಿ ಕಾವಿಗಿಳಿದರೂ*
*ಬೊಗಸೆದೊಗಸೆಗಳಲ್ಲಿ ತುಂಬಿ ಎರಚಿದ*
*ಕನಸು-ಕಣಸುಗಳು''*

ಪ್ರಾಯಶಃ, ಅಂಬೇಡ್ಕರರ ಬಗೆಗೆ ಕನ್ನಡದ ಈ ಹಿರಿಯ ಕವಿಗಳ ಕಾವ್ಯಭಾಗಗಳು ಅರುಣ್ ಶೌರಿಯಂಥವರ ಅಜ್ಞಾನವನ್ನು ತಿದ್ದಲು ಶಕ್ತವಾಗಿ ರುವುದನ್ನು ಪ್ರೊ|| ಜಿ. ಎಸ್. ಸಿದ್ಧಲಿಂಗಯ್ಯನವರ ಕವಿತೆಯ ಸಾಲುಗಳು ಚೆನ್ನಾಗಿಯೇ ಹೇಳುತ್ತವೆ :

*''ಮೆಟ್ಟುವ ಟಾರನ್ನೊಡೆದು ತಲೆಯೆತ್ತುವ*
*ಗರಿಕೆಯಾಕ್ರೋಶದ ಜೀವಿಲೆಗೂ ಮಿಗಿಲು*
*ಮೆಟ್ಟುವ ಚಪ್ಪಡಿಯನ್ನೊಡೆದು*
*ತಲೆ ಎತ್ತಿ*
*ದಿಕ್ಕುದಿಕ್ಕಿಗೂ ಹಬ್ಬುವ ಆಲ*
*ಎಷ್ಟು ಹಕ್ಕಿಗೆ ಆಸರೆ*
*ಎಷ್ಟೊಂದು ಜನಕ್ಕೆ ನೆಳಲು''*

ರಾಷ್ಟ್ರದ ಅಖಂಡತೆ ಎಂದರೆ ಕೇವಲ ಒಂದು ಭೂಭಾಗವಲ್ಲ. ಆ ಭೂಭಾಗದ ಅಖಂಡ ಜನಾಂಗದ ಪರಿಗಣನೆ ಮುಖ್ಯ. ತದನಂತರವೇ ಒಂದು ಅಖಂಡ ರಾಷ್ಟ್ರ ಎಂದೆನಿಸಲು ಸಾಧ್ಯವೆಂಬ ಅಂಬೇಡ್ಕರರ ರಾಷ್ಟ್ರೀಯ ವಾದವನ್ನು, ಆ ವಾದದ ಹಿಂದಿನ ಅವರ ತತ್ವವನ್ನೂ ವ್ಯಕ್ತಿತ್ವವನ್ನೂ ಆ ಕಾಲದಲ್ಲಿ ಮೆಟ್ಟಿದವರೆ ಬಹಳ ಮಂದಿ. ಅಂತಹ ಮೆಟ್ಟುಪಿಕೆಯನ್ನು ಸೀಳಿಕೊಂಡು ಮೇಲೆದ್ದು ತಮ್ಮ ರಾಷ್ಟ್ರೀಯವಾದವನ್ನು ತಮ್ಮದೇ ಆದ [illegible] ಎದೆಗೆಡದೆ ಎತ್ತಿ ಹಿಡಿದವರು ಅಂಬೇಡ್ಕರರು. ಇಂತಹ ಚರಿತ್ರೆಯನ್ನು ಇಲ್ಲಿನ ''ಮೆಟ್ಟುವ ಟಾರನ್ನೊಡೆದು ತಲೆಯೆತ್ತುವ ಗರಿಕೆ'' ಮತ್ತು ''ಮೆಟ್ಟುವ ಚಪ್ಪಡಿಯ ನ್ನೊಡೆದು ತಲೆ ಎತ್ತಿ ದಿಕ್ಕುದಿಕ್ಕಿಗೂ ಹಬ್ಬುವ ಆಲ, ಎಷ್ಟು ಹಕ್ಕಿಗೆ ಆಸರೆ, ಎಷ್ಟೊಂದು ಜನಕ್ಕೆ ನೆಳಲು'' ಎಂಬ ಸಾಲುಗಳು ನಮ್ಮೆದುರು ನಡೆಸಿಕೊಂಡು ನಡೆಯುತ್ತವೆ. ಮತ್ತೊಂದೆಡೆ ಸುಮತೀಂದ್ರ ನಾಡಿಗರು ಅಂಬೇಡ್ಕರರು ವೈದಿಕ ಶಾಸ್ತ್ರಾದಿಗಳ ಬಗೆಗೆ ತಳೆದ ಧೋರಣೆಯನ್ನು ಕುರಿತು:

*''ಗೊಡ್ಡು ಶಾಸ್ತ್ರಪುರಾಣಗಳ ಅಮಲಿನಲ್ಲಿ ಮೈಮರೆಯಲು*
*ಸೋದರಿಕೆಯ ದಾಯಾದಿತ್ವ ಅಳಿಸಿ ಹಾಕತು.''*

''ಪುರೋಹಿತಶಾಹಿ ಮೌಲ್ಯವ್ಯವಸ್ಥೆಯ ಪ್ರಸ್ಥಾನ

ಗಳಾದ ವೇದ, ಶಾಸ್ತ್ರ ಪುರಾಣಗಳು ಭರತಖಂಡವನ್ನು ಆಳಲಿಕ್ಕೆ ಸಾಧ್ಯವಿಲ್ಲ'' ಎಂಬುದಾಗಿ ಅಂಬೇಡ್ಕರರು ಅಂದು ಉದ್ಘೋಷಿಸಿದರು. ಇಲ್ಲಿನ ತುಂಬಾ ಕುತೂಹಲದ ಸಂಗತಿ ಎಂದರೆ, ಅದೇ ವೈದಿಕ ಧರ್ಮದ ವೇದಶಾಸ್ತ್ರ ಪುರಾಣಾದಿಗಳನ್ನು ಬಸವಣ್ಣ ಮತ್ತು ಅಲ್ಲಮರು ಪ್ರಶ್ನಿಸಿದ್ದಕ್ಕೂ, ಜ್ಯೋತಿಬಾ ಫುಲೆ ಮತ್ತು ಅಂಬೇಡ್ಕರರು ಪ್ರಶ್ನಿಸಿದ್ದಕ್ಕೂ ಮೂಲಭೂತ ನೆಲೆಯಲ್ಲಿ ಯಾವುದೇ ವ್ಯತ್ಯಾಸವಿಲ್ಲದಿರುವುದನ್ನು ಗಮನಿಸಬೇಕು. ಒಂದು ಅವಿನಾಶಿ ಸತ್ಯದ ಸ್ಥಾಯೀ ಸ್ವರೂಪವನ್ನೂ ಅದರ ಶಾಶ್ವತತೆ ಯುಗಯುಗಾಂತರಗಳಾಚೆಗೂ ನಡೆದು ಸಾಗುತ್ತಿರುವುದನ್ನು, ಅಂಬೇಡ್ಕರರ ಈ ಚಿಂತನೆಯಲ್ಲಿ ಎಂತೋ, ಅಂತೆಯೇ, ನಾಡಿಗರ ಕವಿತೆಯ ಸಾಲುಗಳಲ್ಲೂ, ಆ ಸತ್ಯದ ನಡೆ ಹಾಗೇ ನಡೆದಿದೆ.

-೨-

ಜನಪದ ಸೊಗಡಿನ ಕವಿ ಚಂದ್ರಶೇಖರ ಕಂಬಾರರನ್ನು, ಲಂಡನ್‌ನ ಸೈಯಿಂಟ್ ಜೇಮ್ಸ್ ಪ್ಯಾಲೇಸ್‌ನ ಸಭಾಂಗಣದಲ್ಲಿ ನಿಲ್ಲಿಸಿ ಪದ್ಯ ಓದಿಸಿದರೂ ಅಲ್ಲೆಲ್ಲೋ ಅವರಿಗೇ ವಿಶಿಷ್ಟವಾದ ದೇಸೀಯ ಧಾಟಿಯಲ್ಲಿ ಮಾತನಾಡುತ್ತಿರುವ ತಾಜಾ ಜನಪದ ಅರ್ಥಗಳು, ಸಾಲುಸಾಲುಗಳಲ್ಲೂ ಪುಟದೇಳುವ ಜನಪದ ಗಾನದ




ಏರಿಳಿತಗಳು ಅವರು ಪದ್ಯ ಓದಿ ನಿಲ್ಲಿಸಿದ ನಂತರವೂ ಕೆಲಕ್ಷಣ ಕೇಳುಗರ ಮನದೊಳಗೆ ಹರಿದಾಡಬಹುದು. ದೇಸೀ ಘಳಕುಗಳಿಂದ ಝುಗಝುಗಿಸುವ ಅಂತಹ ಅಪ್ರತಿಮ ಜನಪದ ಕವಿ ಕಂಬಾರರಲ್ಲಿ ಪಾಶ್ಚಾತ್ಯ ಪೌರ್ವಾತ್ಯ ಚೇತನೆಗಳಿಂದ ಒಂದು ವಿಶಾಲವಾದ ವ್ಯಕ್ತಿತ್ವವಾಗಿ ಮೂಡಿ ನಿಂತ ಅಂಬೇಡ್ಕರರು ಒಬ್ಬ ಥೇಟ್ ಜನಪದ ಕಾವ್ಯದ ನಾಯಕ ದೇವತೆಯಂತೆ ನಮಿಸಿಸಿಕೊಳ್ಳುತ್ತಾರೆ. ಅಂಬೇಡ್ಕರರು ಏಕೆ ಗಮನಾರ್ಹರು, ನಾಡ ಜೀವನದಲ್ಲಿ ಏಕೆ ಸದಾ ಅವರು ಸುಸ್ಮೃತಿ ಸಿದ್ಧಪುರುಷರು ಎಂಬುದನ್ನು ಕಡೆಯಲು ಕವಿ ಕಂಬಾರರು, ಇಡೀ ಕವಿತೆಯ ಪದಪುಂಜಗಳಲ್ಲಿ ಕೆಲವು ಅನನ್ಯಾರ್ಥಗಳ ಪ್ರತಿಮೆಗಳನ್ನೇ ಮೂಡಿಸುತ್ತಾರೆ :

*''ಮುಚ್ಚುಮರೆಗಳನು ಬಿಚ್ಚಿ ಚರಿತ್ರೆ*
*ಕುಹಕ ತೋರಿದವರು*
*ಕತ್ತಲನು ಹುರಿಮಾಡಿ ಹಿಂಡಿ*
*ಬೆಳ್ದಿಂಗಳ ತೆಗೆದವರು.''*

ಕಂಬಾರರ ಕಾವ್ಯದ ಸಾಲುಗಳಲ್ಲಿ ಅಮಾವಾಸ್ಯೆ ಮತ್ತು ಹುಣ್ಣಿಮೆಗಳಂಥ ಜನಜನಿತ ಜನಪದ ಪ್ರತಿಮೆಗಳು ತ್ರಾಸವಿಲ್ಲದೆ ಮೂಡಿ ನಿಲ್ಲುತ್ತವೆ. ಕವಿಯ ಅನುಮತಿ ಬೇಡದ ಅರ್ಥವನ್ನವು ನೀಡುತ್ತವೆ. ಕತ್ತಲೆ ಮತ್ತು ಬೆಳಕುಗಳ ಪ್ರಕೃತಿ ವ್ಯಾಪಾರ, ಮಾನವ ತಡೆದು ನಿಲ್ಲಿಸಲಾಗದ ಋತುಚಕ್ರ ಚಲನೆ, ಮಾನವಲೋಕ ತಪ್ಪಿಸಿಕೊಳ್ಳಲ ಸಾಧ್ಯವಾದ ಅದರ ಪರಿಣಾಮ, ಪರಿವರ್ತನೆ ವಿಷಯದಲ್ಲಿ ಎಂದೂ ರಾಜಿಗೊಪ್ಪದೆ, ವಿರಾಜಮಾನವಾಗಿ ತನ್ನ ತಾನೇ, ತನ್ನದೇ ರಾಜಮಾರ್ಗದಲ್ಲಿ ಸಾಗುವ, ಕತ್ತಲು ಮತ್ತು ಬೆಳಕಿನಂಥ ಪ್ರಾಕೃತಿಕ ಸಿದ್ಧಾಂತದಲ್ಲಿ ಅಂಬೇಡ್ಕರರನ್ನು ಕಂಡ ಕವಿ ಕಂಬಾರರ ಕಾವ್ಯಕ್ರಿಯೆ, ಭರತಖಂಡದ ಸಾಂಸ್ಕೃತಿಕ ಪರಂಪರೆಯನ್ನೇ ಪ್ರಶ್ನಿಸತೊಡಗುತ್ತದೆ. ಮೂಲತಃ ಹಾಗೆ ಪ್ರಶ್ನಿಸಿದ ಅಂಬೇಡ್ಕರರನ್ನು ವಿದ್ರೋಹಿ ಎಂತಲೋ, ರಾಷ್ಟ್ರದ್ರೋಹಿ ಎಂತಲೋ ಕರೆದು ಹೀಯಾಳಿಸಿದರೂ, ನಿರಪರಾಧಿಯನ್ನು ಎಳೆತಂದು, ರಾಷ್ಟ್ರದ್ರೋಹದ ಕಂಬದಡಿ ಕಟ್ಟಿಹಾಕಿದರೂ, ಅಂಬೇಡ್ಕರರಿಗೆ ಚಿಂತೆಯಾಗಲಿಲ್ಲ. ಹಾಗೆ ಕಟ್ಟಿದರೂ ಅವರ ಮಾನವ ದೇಹವನ್ನು ದುರುದ್ದೇಶದಿಂದ ಕಟ್ಟಲಾಯಿತೆ ವಿನಃ, ಅಂಬೇಡ್ಕರರು ಎತ್ತಿದ, ಕತ್ತಲೆ ಕಳೆದ ಬಳಿಕ ಬೆಳಕು ಬರಲೇಬೇಕೆಂಬ, ಅಥವಾ ಬರದಿರಲು ಹೇಗೆ ಸಾಧ್ಯವೆಂಬ ಅವರ ಪ್ರಶ್ನೆಯನ್ನು ಕಟ್ಟಿಹಾಕಲು ಎಂದಿಗೂ ಯಾರಿಂದಲೂ ಸಾಧ್ಯವಾಗಲೇ ಇಲ್ಲವೆನ್ನುವ ಜ್ವಲಂತ ಸತ್ಯ ಕಂಬಾರರ ಕವಿತೆಯಲ್ಲಿ ಪ್ರಜ್ವಲಿಸುತ್ತದೆ. ಕವಿತೆಯ ಓದುವಿಕೆಯನ್ನೇ ಹುರಿ ಮಾಡಿ, ಹದವಾಗಿ ಅದನ್ನು ಹಿಂಡಿ ರಸ ತೆಗೆಯುವಂತೆ ''ಕತ್ತಲನು ಹುರಿಮಾಡಿ ಹಿಂಡಿ ಬೆಳ್ದಿಂಗಳು ತೆಗೆದ'' ಅಂಬೇಡ್ಕರರು ಕಂಬಾರರಲ್ಲಿ ಅಷ್ಟೇ ದೇಸೀ ಕಾವ್ಯದ ನಾಯಕರಾಗುತ್ತಾರೆ. ಶತಶತಮಾನಗಳ ಮುಚ್ಚು ಮತ್ತು ಮರೆತನದ ಹಿಂದಿನ ವಂಚನೆ, ವಿವಂಚನೆ, ನಯವಂಚನೆ ಮತ್ತು ಗರ್ಭಗುಡಿಯ ಅಂತಹುದೇ ತೆರೆಮರೆಯ ಹಿಂದಿನ ಕುಟಿಲಗಳನ್ನೂ, ಅಳುಕದೆಂದು ಮತ್ತು ಅಂಜಿಸದೆಂದು ಮರೆಮಾಚಿಟ್ಟಿದ್ದ ಆ ಕುಟಿಲ ಕೋಟೆಯ ಮೂಲಸೆಲೆಯನ್ನು ಛಿದ್ರಗೊಳಿಸಿದ ಅಂಬೇಡ್ಕರರ ಬುದ್ಧನೀತಿಯನ್ನು

ಕಂಬಾರರು ಪ್ರಬುದ್ಧ ಕವಿತೆಯನ್ನಾಗಿ ಮಾಡುತ್ತಾರೆ. ''ಮುಚ್ಚು ಮರೆಗಳನು ಬಿಚ್ಚಿ ಚರಿತ್ರೆ ಕುಹಕ ತೋರಿದವರು'' ಅಂಬೇಡ್ಕರರು. ಆದ್ದರಿಂದಲೇ ಕವಿ ಕಂಬಾರರು ತಮ್ಮ ಕಾವ್ಯನಾಯಕನಾದ ಅಂಬೇಡ್ಕರರನ್ನು ಜನಸಮುದಾಯದತ್ತ ಕೊಂಡೊಯ್ದು ತಮ್ಮ ಕಾವ್ಯಶ್ರದ್ಧೆಯನ್ನು ಸಾರ್ವತ್ರೀಕರಣಗೊಳಿಸುತ್ತಾರೆ :

*ನಮಿಸಿರಿ ಇಗೊ ಅಂಬೇಡ್ಕರರಿವರು*
*ಶರಣು ಹೇಳಿರಯ್ಯ !*
*ಬೊಗಸೆ ತುಂಬಾ ಮೀಸಲದ ಭಕ್ತಿಯಲಿ*
*ಇವರ ನೆನೆಯಿರಯ್ಯ.*

ಮುಂದಿನ ಸಾಲುಗಳನ್ನು ಗಮನಿಸಿ:

''ಹೂವಿನ ಹಾಗೆಯೇ ಬೇರಿಗೂ ಬೇರೆಯ
ನಿಜವಿದೆಯೆಂದವರು
ರಸಸಿದ್ಧಿಯ ನಾಗಾರ್ಜುನ ಮರೆತಾ
ಬೇರನು ಕಂಡವರು.''

ಇಲ್ಲಿ ರೂಪಕಗಳ ಸಾಲುಸಾಲುಗಳನ್ನೇ ಮೂಡಿಸುತ್ತ ಹೋಗುವ ಕವಿ ಕಂಬಾರರ ರೂಪಕಗಳ ಹಿಂದಿನ ಔಚಿತ್ಯಪ್ರಜ್ಞೆ ಪ್ರತ್ಯೇಕವಾಗಿಯೇ ಮೆಚ್ಚಿಸಿಕೊಳ್ಳುತ್ತದೆ. ಹಾಗಿಲ್ಲವಾಗಿದ್ದರೆ, ಅಂಬೇಡ್ಕರರು ಪ್ರಶ್ನಿಸಿದ ವೈದಿಕ ಧರ್ಮದ ಶ್ರೇಣೀಕೃತ ವ್ಯವಸ್ಥೆಯನ್ನು ವ್ಯಂಜಿಸುವ, ಹೂವಿನಿಂದ ಬೇರಿನವರೆಗಿನ ಎಂಬಂತಹ ಪ್ರಾಕೃತಿಕ ನಿಯಮ, ಕಂಬಾರರ ಪದ್ಯದಲ್ಲಿ ಪ್ರತಿಮೆಯಾಗುತ್ತಿರಲಿಲ್ಲ; ಹೂವಿನ ಸೌಂದರ್ಯ ಥಳಥಳಿಸುವ ಹೊರರೂಪ ಮತ್ತು ನೆಲದಡಿಯಲ್ಲಿ ಹುದುಗಿರುವ ಬೇರು – ಇವೆರಡರ ಅವಿನಾಸಂಬಂಧವನ್ನು ರೂಪಕಗೊಳಿಸಿ, ಆ ರೂಪಕದ ಅಂತರ್ಯದಿಂದ ಅಂಬೇಡ್ಕರರ ಸಮಾನತೆಯ ತತ್ವವನ್ನು ಹೊರಡಿಸಿದ ಕಂಬಾರರ ಕಾವ್ಯದಲ್ಲಿ ಅಂಬೇಡ್ಕರರು ಬಹುಕಾಲ ನಿಲ್ಲುವ ನಾಯಕರಾಗುತ್ತಾರೆ. ಅಂಬೇಡ್ಕರರು ಜೀವನದುದ್ದಕ್ಕೂ ಪ್ರತಿಪಾದಿಸಿದ ''ಸಹಜ ನ್ಯಾಯ'' ಎಂಬ ನ್ಯಾಯತತ್ವವನ್ನು ಕಂಬಾರರು ಪ್ರಕೃತಿ ಪ್ರತಿಮಾ ವಿಧಾನದಲ್ಲಿ, ಅದನ್ನು ಕಾವ್ಯ ಕಲೆಯಲ್ಲಿ ಅಭಿವ್ಯಕ್ತಿಸಿದ್ದು, ನಾಗಾರ್ಜುನನೇ ಮರೆತಿದ್ದ ''ರಸಸಿದ್ಧಿಯ ನಾಗಾರ್ಜುನ ಮರೆತಾ ಬೇರನು ಕಂಡವರು'' ಎಂಬುದಾಗಿ, ಅಂಬೇಡ್ಕರರು ಲೋಕದ ದಿವ್ಯ ಸಾಕ್ಷಿಯ ಸಮಕ್ಷಮದಲ್ಲಿ ಮಥಿಸಿದ ನ್ಯಾಯವಿತರಣದ ಸಿದ್ಧಿಸ್ತರವನ್ನು ತುಂಬಾ ಶಕ್ತಿಯುತವಾಗಿ ಧ್ವನಿಸುತ್ತಾರೆ.

ಅಸ್ಪೃಶ್ಯತೆ ಮತ್ತು ಜಾತಿ ನೀತಿಗಳಿಂದ ನಾಳಿನ ನಾಡಿನ ಗತಿಯೇನೆಂಬ ಧಗಧಗಿಸುವ ಚಿಂತೆಯಲ್ಲಿ ಅಂಬೇಡ್ಕರ್ ಕನಲಿದರು. ತತ್ಪರಿಣಾಮವಾಗಿ ಫುಲ್‌ಸೂಟ್‌ನ ಹಿಂದಿನ ಅಂತರಾಳದಿಂದ, ಭವಿತವ್ಯದ ನಾಡನ್ನು ಎಚ್ಚರಿಸುವ, ನೆಲ ಮತ್ತು ಜೀವಗಳನ್ನು ಕಾಪಾಡುವ, ಪರಮೋಚ್ಚ ಕರ್ತವ್ಯಕ್ಕೆ ಸಜ್ಜಾಗುವಂತೆ, ನಾಡಿನ ಜನರಿಂದ ನ್ಯಾಯಸಂಹಿತೆಯ ಹೆಸರಿನಲ್ಲಿ, ನಾಡಿಗೆ ನುಡಿಪ್ರಮಾಣ ನೀಡುವಂತಹ ಕನಸುಗಳನ್ನು, ಆ ಫುಲ್‌ಸೂಟ್‌ನ ಹಿಂದಿನಿಂದ ಅವರು ಹೊರಡಿಸಿದ ಪರಿಯನ್ನು ಧ್ವನಿಪೂರ್ಣವಾಗಿ ಹೊರಡಿಸುವ ಚಂದ್ರಶೇಖರ ಪಾಟೀಲರ ಪದ್ಯ ಗಂಭೀರವಾಗಿ ನುಡಿಯುತ್ತದೆ ಮತ್ತು ನಡೆಯುತ್ತದೆ :

*''ಅಡಿಯಿಂದ ಮುಡಿವರೆಗ ಫುಲ್‌ಸೂಟ್‌ನ*

*ಗಾಂಭೀರ್ಯ*
*ತಲೆತುಂಬ ನಾಳಿನ ಕನಸುಗಳು*
*ಚಾಳೀಸು ಹಿಂದಿನ ಕಣ್ಣಲಿ ನೀಲಾಂಜನ ಜ್ಯೋತಿ*
*ಕಡಲಾಳದಲ್ಲಿ ಧಗಧಗ ಬೆಂಕಿ.''*

ಚಂದ್ರಶೇಖರ ಕಂಬಾರರ ಕವಿತೆಯ ''ರಸಸಿದ್ಧಿಯ ನಾಗಾರ್ಜುನ'' ಎಂಬ ನಾಮವಿಶೇಷಣದ ನುಡಿಪುಂಜ ಮತ್ತು ಚಂದ್ರಶೇಖರ ಪಾಟೀಲರ ಕವಿತೆಯ ''ಕಣ್ಣಲ್ಲಿ ನೀಲಾಂಜನ ಜ್ಯೋತಿ'' ಎರಡೂ ವಿಶೇಷ ಧ್ಯಾನಾರ್ಹವಾದವು. ಈ ಎರಡು ನುಡಿಪುಂಜಗಳು ನಿರಾಯಾಸವಾಗಿ ಕಟ್ಟಿಕೊಡುವ ಪ್ರಾಚೀನ ಬುದ್ಧಭಾರತದ ಬೌದ್ಧಿಕವಾದದ ಅರ್ಥಪರಂಪರೆಯ ಅರ್ಥಗ್ರಹಣ ಇಲ್ಲಿ ಬಹಳ ಮುಖ್ಯ.

ಮತ್ತೊಂದೆಡೆ ಅಂಬೇಡ್ಕರರ ವ್ಯಕ್ತಿತ್ವವನ್ನು ಭೂಮ್ಯಾಕಾಶಗಳಿಗೂ ಮಾನವ ಜೀವ-ಜೀವನದ ಈ ಲೋಕದ ಮೇಲೆ, ಅವುಗಳ ಪ್ರಭಾವ ಮತ್ತು ಪರಿಣಾಮಗಳಿಗೂ ಹೋಲಿಸುವುದನ್ನು ಕನ್ನಡ ಕಾವ್ಯದ ಉದ್ದಕ್ಕೂ ಕಾಣಬಹುದಾಗಿದೆ. ಚೆನ್ನಣ್ಣ ವಾಲೀಕಾರರು ''ಕಪ್ಪು ಜನತೆಯ ಸೂರ್ಯನಿಗೆ'' ಎಂಬ ತಮ್ಮ ಕವಿತೆಯಲ್ಲಿ ಹೇಳುತ್ತಾರೆ :

*''ಮುಂಗಾರ್ಮಳೆಯ ಮೊದಲ ಹನಿಯಾಗಿ ನೀ ಬಂದಾಗೀ ನೆಲದಲಿ*
*ಭೂಮಿ ಆಕಾಶ ಮಿಂಚು ಹೊಡೆದಾಗ ಸಂಚಾರವಾತ್ನಮ್ಮ ಎದೆಯಲಿ*
*ಬೆಳೆಯು ಬರೊಮೊದಲ್ ಬಿಟ್ಟುಹೋದಾಗ ಕಬಿಬಿಚ್ಚಾಯ್ತುಯ್ತು ನಮಗಿಲಿ*
*ಕಳ್ಳ ಕಾಕರಿಗೆ ಒಳ್ಳೆದಾಯ್ತುಯ್ತು ಲೂಟಿ ಮಾಡ್ಲಿಕ್ಕೆ ಹಗಲಿಲಿ.''*

ನೆಲದ ಜೀವ ಕಾಪಾಡಲು ಮುಗಿಲಲ್ಲಿ ನಡೆಯುವ ದೂರಗಾಮಿ ಪರಿಣಾಮದ ಪ್ರಾಕೃತಿಕ ವ್ಯಾಪಾರ ಸತ್ಯಗಳ ನಡುವೆ, ಧರೆಯ ಮೇಲೆ ಸಧ್ಯ ಅಗೋಚರದ ಅಂಬೇಡ್ಕರರನ್ನು ಕಾವ್ಯದಲ್ಲಿ ಸಗೋಚರ ಮಾಡಿ ಸಾಕ್ಷಾತ್ಕರಿಸಿಕೊಳ್ಳಲೆತ್ನಿಸುವ ಇಂಥ ಸಾಲುಗಳನ್ನು ಸಮಕಾಲೀನ ಕನ್ನಡ ಕಾವ್ಯದಲ್ಲಿ ಇನ್ನೂ ಅದೆಷ್ಟೋ ಕಾಣಬಹುದಾಗಿದೆ. ನಾನು ಬರೆದ ''ಡಾ|| ಅಂಬೇಡ್ಕರ್'' ಕವಿತೆಯ ಕೆಲವು ಸಾಲುಗಳು :

*''ಬದುಕೆಲ್ಲ ಮಡಿದು ಸುಖವೆಲ್ಲ ಸುರಿದು ಆಕಾಶಗೈದ ಬಾಬಾ ಸಾಹೇಬ*
*ಚಂದ್ರ ಚುಕ್ಕೆಗಳು ಕಣ್ತೆರೆವ ಮುನ್ನ ಬಯಲಾದೆಯಲ್ಲೋ ಬಾಬಾಸಾಹೇಬ*
*ಬಾನಲ್ಲಿ ತೇಲಿ ಹೊಳೆಹೊಳೆಯುತ್ತಿಪ್ಪ ನಕ್ಷತ್ರ ಕೋಟಿಯಂತೆ*
*ನಿನ್ನೆದೆಯ ಗಗನದಲಿ ಹೊಳೆದಂಥ ತತ್ವ ಅಮರಕ್ಕೆ ಸಾಟಿಯಂತೆ.''*

ಅದೇ ರೀತಿಯ ಪ್ರಾಕೃತಿಕ ಪ್ರತಿಮಾವಿಧಾನವನ್ನು ಸಿದ್ಧಲಿಂಗಯ್ಯನವರ ''ಅಂಬೇಡ್ಕರ್'' ಕವಿತೆಯಲ್ಲೂ ಕಾಣಬಹುದಾಗಿದೆ :

*''ಮಹಾರಾಷ್ಟ್ರದ ಮಣ್ಣಿನಲ್ಲಿ*
*ಮೂಡಿಬಂದ ಗುಡುಗು ಸಿಡಿಲ್*
*ಮಳೆಯನೇಕೆ ತಾರಲಿಲ್ಲ*
*ಮಿಂಚು ಮಾಯ ಆಷ್ಟೆಯ ?''*

ಜಂಬಣ್ಣ ಅಮರಚಿಂತರು ತಮ್ಮ ''ಮೂಕನಾಯಕನಿಗೆ'' ಕವಿತೆಯಲ್ಲಿ ಮೂಕ ಜನಾಂಗದ ಪರವಾಗಿ ಮಾತನಾಡುವ ನಾಯಕನಿಲ್ಲದ ಅಸಹಾಯಕ ಲೋಕದ ನಡುವೆ ಅಂಬೇಡ್ಕರರನ್ನು ಅರಸುತ್ತಾರೆ :

*''ಗುಡುಗಾಡೊ ಗುಡುಗಾಡೊ ನಾಯಕ ನೀ*
*ಗುಡುಗಾಡಲೊಲ್ಲೇಕೊ ನಾಯಕ ?*
*ಗುಡುಗು ಗುಡುಗಿ ಒಮ್ಮೆ ಮಿಂಚಾಗಿ ಬಾ*
*ಕತ್ತಲಿನ ಎದೆಯ ಸೀಳಾಕ.''*

ಅಂಬೇಡ್ಕರರ ಅಗಾಧ ವ್ಯಕ್ತಿತ್ವದ ವಿಭಿನ್ನ ಮುಖಗಳು ಕನ್ನಡ ಕಾವ್ಯದಲ್ಲಿ ಅಭಿವ್ಯಕ್ತಿ ಪಡೆದಿರುವುದನ್ನು ನೋಡಬಹುದು: ಸಾಮಾಜಿಕ ನ್ಯಾಯ, ಅನ್ಯಾಯದ ವಿರುದ್ಧದ ಪ್ರತಿಭಟನೆ, ಪ್ರಜಾತಂತ್ರ ವ್ಯವಸ್ಥೆಗೆ ಜನರನ್ನು ಸದಾ ಸನ್ನದ್ಧ ಸ್ಥಿತಿಯಲ್ಲಿರುವಂತೆ ನೋಡಿಕೊಳ್ಳುವ ಜನತಂತ್ರ ಮತ್ತು ಜನಪರ ಚಳವಳಿಯ ಅಕ್ಷಯಸ್ಫೂರ್ತಿ, ಅಧ್ಯಾತ್ಮ, ಮಾನವನ ಸಂಸ್ಕೃತಿ, ನಂಬಿಕೆ, ಯಾವುದೇ ನಾಡಿಗೆ ಆತ್ಮ ಪ್ರೇರಣೆಯಂಥ ನ್ಯಾಯಸಂಹಿತೆ ಅಥವಾ ಸಂವಿಧಾನ, ಈ ಮುಂತಾದ ಹಲವಾರು ಸಾರ್ವತ್ರಿಕ ಮಾತ್ರವಲ್ಲದೆ, ಕೆಲವೊಮ್ಮೆ ಸಾರ್ವಕಾಲಿಕವೂ ಎನಿಸಬಹುದಾದ ಸತ್ಯಗಳನ್ನೇ ತಮ್ಮ ವ್ಯಕ್ತಿತ್ವವನ್ನಾಗಿ ಮಾಡಿಕೊಂಡಿರುವ ಅಂಬೇಡ್ಕರರ ನಭೋಮಂಡಲ ಸದೃಶವಾದ ವ್ಯಕ್ತಿತ್ವವನ್ನು ವಿಭಿನ್ನ ರೀತಿಗಳಲ್ಲಿ ಕನ್ನಡ ಕವಿಗಳು ರೂಪಿಸಿದ್ದಾರೆ. ಅವುಗಳಲ್ಲಿ ಅಂಬೇಡ್ಕರರ ವ್ಯಕ್ತಿತ್ವವನ್ನು ನಮ್ಮ ನೆಲದಿಂದ ಸರ್ವಸಾಗರದಾಚೆಗೆ ವಿಸ್ತರಿಸಿದ್ದು ಅವರು ಬೌದ್ಧ ಭಿಕ್ಕುವಾದ ಸಂಗತಿ. ಆದರೆ ಅಂಬೇಡ್ಕರರ ವ್ಯಕ್ತಿತ್ವದ ಈ ಆಧ್ಯಾತ್ಮದ ಆಯಾಮವನ್ನು ಡಾ|| ಸಿದ್ಧಲಿಂಗಯ್ಯನವರು ಗ್ರಹಿಸಿರುವುದು ಸಮರ್ಥನೀಯ ಎನಿಸುವಂತಿಲ್ಲ :

''ಕಪ್ಪುಕ್ಕಿನ ಕೋಳಗಳನು
ಕಡಿದು ಎಸೆದ ವಜ್ರವೆ
ಬಂಗಾರದ ಕೋಳವೊಕ್ಕ
ಮಹಾ ಬೌದ್ಧ ಭಿಕ್ಕುವೆ.''

''ಕಪ್ಪುಕ್ಕಿನ ಕೋಳಗಳನು ಕಡಿದು ಎಸೆದ ವಜ್ರವೆ'' ಎಂಬ ಮೊದಲೆರಡು ಸಾಲುಗಳಿಗೆ ಸ್ವತಃ ಅಂಬೇಡ್ಕರರಲ್ಲೂ, ಅಂಬೇಡ್ಕರರನ್ನು ಕುರಿತ ನಾಡಿನ ಇತಿಹಾಸದಲ್ಲೂ ಸಾಕಷ್ಟು ಪುರಾವೆಗಳಿವೆ. ಆದರೆ ಅಂಬೇಡ್ಕರರು ಬೌದ್ಧರಾಗುವ ಮೂಲಕ ಬಂಗಾರದ ಕೋಳದೊಳಗೆ ಸಿಲುಕಿದರು ಎಂಬ ಧೋರಣೆಗೆ ಬುದ್ಧನನ್ನು ಕುರಿತ ಲೋಕದ ಚರಿತ್ರೆಯಲ್ಲಿ ಆಧಾರವಿಲ್ಲ. ಬದಲಾಗಿ ಎಡ್ವಿನ್ ಆರ್ನಾಲ್ಡ್ ಹೇಳುವಂತೆ ''ನಮ್ಮ ಮಾನವ ಮಹಾವೃಕ್ಷದಲ್ಲಿ ಅರಳಿದ ಸಾರ್ವಕಾಲಿಕ ಪುಷ್ಪವು ಈ ಬುದ್ಧ. ಈ ಪುಷ್ಪವು ಸದಾ ಬೀರುವ ಜ್ಞಾನದ ಮತ್ತು ಪ್ರೇಮದ ಪರಿಮಳ ಸಾರ್ವಕಾಲಿಕವಾದುದು.'' ವಿಜ್ಞಾನ ಪ್ರಪಂಚದ ಮಹಾನ್ ಪ್ರವರ್ತಕನೂ ಅಧ್ಯಾತ್ಮಿಯೂ ಆದ ಆಲ್ಬರ್ಟ್ ಐನ್‌ಸ್ಟೈನ್ ''ಆಧುನಿಕ ವಿಜ್ಞಾನದ ತಳಹದಿಯ ಮೇಲೆ ನಿಲ್ಲುವ ಧರ್ಮ ಲೋಕದಲ್ಲಿ ಯಾವುದಾದರೂ ಇದ್ದರೆ, ಅದು ಬುದ್ಧನ ಧರ್ಮ ಮಾತ್ರ'' ಎಂದಿದ್ದಾರೆ. ನೋಡಿ. (*Buddhism in the eyes of Intellectuals, Sri Dhammananda.*) ಸ್ವತಃ ಅಂಬೇಡ್ಕರರು ಬುದ್ಧನ ಬಗೆಗೆ




'ಬೇಕಾದವ್ರು ಬರ್ತಾರೆ ಬಿಡಿ!'




'ವಿಚಾರಗವಟ್ಟ ಅವೇ!'

''ಬುದ್ಧಧಮ್ಮ ಒಂದು ನಿರಂತರವಾದ ಪ್ರಜಾಸತ್ತಾತ್ಮಕ ಆಂದೋಲನ. ಲೋಕದಲ್ಲಿ ಇಂದು ಪ್ರಜಾಸತ್ತಾತ್ಮಕ ವ್ಯವಸ್ಥೆ ನೆಲೆಗೊಂಡಿದ್ದರೆ, ಅದು ಬುದ್ಧಧಮ್ಮದ ಆಧಾರದ ಮೇಲೆ ಮಾತ್ರ'' ಎಂದು ಬರೆದಿದ್ದಾರೆ. ಅಡಿಗರಿಂದ ಆರಂಭಿಸಿ ಅನಂತರದ ನೂರಾರು ಮಂದಿ ಕನ್ನಡ ಕವಿಗಳು ಅಂಬೇಡ್ಕರರ ವ್ಯಕ್ತಿತ್ವದ ಈ ಆಯಾಮವನ್ನು ತುಂಬ ಯಥಾರ್ಥವಾಗಿಯೇ ಕಾವ್ಯ ಮಾಡಿರುವುದು ಸಮಕಾಲೀನ ಕನ್ನಡ ಕಾವ್ಯದ ಇನ್ನೂ ನೂರಾರು [illegible] ಕಾಣಬರುತ್ತದೆ.

ಪ್ರೊ|| ಮ. ನ. [illegible]
ಕನ್ನಡ [illegible], ಮೈಸೂರು [illegible]
[illegible], ಮೈಸೂರು [illegible]

# ಭಾರತದಲ್ಲಿ ಪ್ರಾಚೀನ ಕೃಷಿ

ಭರತಖಂಡದಲ್ಲಿ ಅತಿ ಪ್ರಾಚೀನ ಕಾಲದಿಂದಲೂ ಕೃಷಿಯ ವಿಚಾರವಾಗಿ ಉಲ್ಲೇಖಗಳು ಇದ್ದದ್ದು ತಿಳಿದುಬರುತ್ತದೆ. ಆಯುರ್ವೇದದ ನಿರೂಪಕರಾದ ಚರಕ ಮತ್ತು ಸುಶ್ರುತರು ಔಷಧಿಗಳಿಗೆ ಉಪಯೋಗಿಸುವ ಸಸ್ಯಗಳನ್ನು ಬೆಳೆಸುವ ವಿಧಾನಗಳ ಬಗ್ಗೆ ಸೂಕ್ಷ್ಮ ಪರಿಚಯವನ್ನು ಕೊಟ್ಟಿದ್ದಾರೆ. ಆಯುರ್ವೇದೀಯ ಔಷಧಿಗಳ ಗಿಡಗಳನ್ನು ಬೆಳೆಯಲು ಯಾವ ತರಹದ ಮಣ್ಣು ಯೋಗ್ಯ, ಯಾವ ತರಹದ ಹವಾಮಾನ ಅನುಕೂಲಕರ, ಯಾವ ಹಂಗಾಮುಗಳಲ್ಲಿ ಈ ಸಸ್ಯಗಳನ್ನು ನೆಡಬೇಕು, ಇವೇ ಮುಂತಾದ ವಿಷಯಗಳ ಬಗ್ಗೆ ವಿಸ್ತಾರವಾಗಿ ಮಾಹಿತಿಯನ್ನು ಕೊಟ್ಟಿದ್ದಾರೆ. ಆ ಕಾಲದ ಋಷಿ- ಮುನಿಗಳು ಅರಣ್ಯಗಳಲ್ಲಿ ತಮ್ಮ ವಾಸಸ್ಥಾನಗಳನ್ನು ಕಟ್ಟಿಕೊಳ್ಳುತ್ತಿದ್ದರು ಹಾಗೂ ಅಲ್ಲಿಯವರೊಡನೆ ಬೆರೆಯುತ್ತಿದ್ದರು. ತಮ್ಮ ಜೀವನದ ನಿತ್ಯ ಉಪಯೋಗಕ್ಕಾಗಿ ಪತ್ರಿ, ಪುಷ್ಪ, ಗೆಡ್ಡೆ-ಗೆಣಸು ಹಾಗೂ ಹಣ್ಣು-ಹಂಪಲುಗಳನ್ನು ಕೊಡುವ ಗಿಡ-ಮರಗಳನ್ನು ಬೆಳೆಸುವುದು ಅವರಿಗೆ ಅನಿವಾರ್ಯವಾಯಿತು. ಅವರಿಗೂ ಈ ಗಿಡ ಮರಗಳನ್ನು ಬೆಳೆಯುವ ಅನುಭವ ಇದ್ದಿತು. ಅವರಿಗೆ ಸತ್ವಯುತ ಮತ್ತು ಸೌಮ್ಯ ಆಹಾರ ಸೇವನೆಗಾಗಿ ಹಾಗೂ ಅತಿಥಿಗಳ ಸತ್ಕಾರಕ್ಕಾಗಿ ಹಾಲು, ಮೊಸರು, ಬೆಣ್ಣೆ, ತುಪ್ಪ, ಮಜ್ಜಿಗೆ ಇವುಗಳ ಆವಶ್ಯಕತೆ ಇತ್ತು. ಇದಕ್ಕಾಗಿ ಅವರು ಹಸು ಮುಂತಾದ ಪ್ರಾಣಿಗಳ ಸಾಕಾಣಿಕೆಯನ್ನು ರೂಢಿಯಲ್ಲಿ ತಂದರು. ಆ ಕಾಲದಿಂದಲೇ ಭಾರತದಲ್ಲಿ ಬೇಸಾಯ ಮತ್ತು ಪಶು-ಸಂಗೋಪನೆಗಳು ಬೆಳೆಯತೊಡಗಿದವು. ನಮ್ಮ ಹೊಸ ವೈಜ್ಞಾನಿಕ ಕೃಷಿ ಪದ್ಧತಿ ಮತ್ತು ಪಶು-ಸಂಗೋಪನೆಗಳು ಪ್ರಾಚೀನ ಪದ್ಧತಿಗಳ ಮೇಲೆ ಅವಲಂಬಿಸಿವೆ ಎಂದರೆ ತಪ್ಪಾಗದು. ಕುವೆಂಪು ಅವರು ತಮ್ಮ ಅಮೂಲ್ಯ ಅನುಭವದಿಂದ ''ನೇಗಿಲ ಕುಳದೊಳ ಗಡಗಿದೆ ಕರ್ಮ, ನೇಗಿಲ ಮೇಲೆಯೆ ನಿಂತಿದೆ ಧರ್ಮ'' ಎಂದು ಹೇಳಿರುವುದು ಉಚಿತವಾಗಿದೆ.

ಅತಿ ಪ್ರಾಚೀನ ಕಾಲದನಂತರ ರೂಢಿಯಲ್ಲಿದ್ದ ಕೃಷಿ ಪದ್ಧತಿಗಳು ಮುಖ್ಯವಾಗಿ ಖಗೋಲಶಾಸ್ತ್ರವನ್ನು ಅವಲಂಬಿಸಿದ್ದಿತು. ಈ ಶಾಸ್ತ್ರವು ಕೃಷಿ ಹಂಗಾಮುಗಳನ್ನು ಗುರುತಿಸುವುದು, ಯಾವ ತಿಥಿ, ನಕ್ಷತ್ರಗಳಲ್ಲಿ ಯಾವ ಬೆಳೆಗಳನ್ನು ಬಿತ್ತನೆ ಮಾಡಬೇಕು, ಯಾವ ಕಾಲಕ್ಕೆ ಒಕ್ಕಣೆ ಮಾಡಬೇಕು ಎಂಬುದನ್ನು ಸವಿಸ್ತಾರವಾಗಿ ತಿಳಿಸುತ್ತದೆ.

ಆಧುನಿಕ ಕೃಷಿ ವಿಜ್ಞಾನಿಗಳು ಕೃಷಿ ಹಂಗಾಮುಗಳ ಮಹತ್ವದ ಬಗ್ಗೆ, ಬಿತ್ತನೆ ಹಾಗೂ ಕಟಾವು ಮಾಡುವ ಬಗ್ಗೆ, ಮತ್ತು ಒಕ್ಕಣೆ ಮಾಡುವ ಕಾಲಗಳ ಬಗ್ಗೆ ಪ್ರಯೋಗ ಮಾಡಿ ನೋಡಿದರೆ ಪ್ರಾಚೀನ ಕಾಲದಲ್ಲಿ ರೂಢಿಯಲ್ಲಿದ್ದ ಕೃಷಿ ಪದ್ಧತಿಗಳು ವೈಜ್ಞಾನಿಕ ಆಧಾರದ ಮೇಲೆಯೇ ಇದ್ದವೆಂದು ಅರ್ಥವಾಗುತ್ತದೆ. ಈ ಅನುಭವಗಳನ್ನು ಕೆಲವು ಗಾದೆಯ ಮಾತುಗಳಿಂದ ಕೂಡ ತಿಳಿದುಕೊಳ್ಳ ಬಹುದು. ಉದಾಹರಣೆಗೆ ''ಭರಣಿ ಬಂಗಾರದ ಕರಣಿ.'' ಇದರ ಅರ್ಥ ಭರಣಿ ಮಳೆಯು ಚೆನ್ನಾಗಿ ಆದರೆ ಆ ವರ್ಷ ಬೆಳೆಯು ಚೆನ್ನಾಗಿ ಬರುತ್ತದೆ ಎಂದು. ಏಕೆಂದರೆ ಭರಣಿ ಮಳೆ ಆದಾಗ ಕಾದ ಮಣ್ಣು ತಂಪಾಗಿ ಭೂಮಿಯು ತಳ ಹಸಿ ಹೊಂದುತ್ತದೆ. ಮುಂಗಾರಿ ಬಿತ್ತನೆಗೆ ಭೂಮಿಯನ್ನು ಉಳುಮೆಯಿಂದ ಸಿದ್ಧಮಾಡಲು ಒಳ್ಳೆಯ ಅವಕಾಶ ಸಿಗುತ್ತದೆ. ''ರೋಹಿಣಿ ಮಳೆಯಾದರೆ ಓಣಿಯಲ್ಲಾ ಜೋಳ.'' ಇದರ ಅರ್ಥ ರೋಹಿಣಿ ಮಳೆಗೆ ತಳ ಹಸಿಯಾಗಿ ಉಳಿಮೆ ಮಾಡಲು ಹಾಗೂ ಬಿತ್ತನೆ ಮಾಡಲು ಒಳ್ಳೆಯ ಅವಕಾಶ ಎಂದು. ಈ ಮಳೆಗೆ ಬಿತ್ತನೆ ಮಾಡಿದ ಬೆಳೆಗಳಿಗೆ ಕೀಟ-ಪಿಡುಗುಗಳು ಕಡಿಮೆ ಎಂಬುದು ಅನುಭವಸಿದ್ಧ ಮಾತು. ಎರೆ ಜಮೀನುಗಳಲ್ಲಿ ರೋಹಿಣಿ ಮಳೆಗೆ ಬಿತ್ತಿದ ಬೆಳೆಗಳು ಹಿಂಗಾರಿ ಹಂಗಾಮು ಆರಂಭವಾಗುವ ಮೊದಲೇ ಕಟಾವಿಗೆ ಬರುವುವು. ಇದರಿಂದ ಹಿಂಗಾರಿ ಹಂಗಾಮಿನಲ್ಲಿ ಎರಡನೆಯ ಬೆಳೆಯನ್ನು ತೆಗೆದುಕೊಳ್ಳಲು ಬಹಳ ಅನುಕೂಲ.

ಕೌಟಿಲ್ಯನ ಅರ್ಥಶಾಸ್ತ್ರದ ಆಧಾರದ ಮೇಲೆ ಹಿಂದಿನ ಆಡಳಿತಗಾರರು ಕೃಷಿ ಮತ್ತು ಪಶುಸಂಗೋಪನೆಗೆ ಪ್ರಥಮ ಆದ್ಯತೆಯನ್ನು ಕೊಡುತ್ತಿದ್ದರು. ಇವುಗಳ ಆಧಾರದ ಮೇಲೆಯೇ ಫಲವತ್ತತೆಯ ವರ್ಗೀಕರಣ ಮತ್ತು ಕಂದಾಯ ವಸೂಲಿಯ ನೀತಿ ಇವುಗಳನ್ನು ಅನುಸರಿಸುತ್ತಿದ್ದರು. ಹಾಗೆ ನೋಡಿದರೆ ಆಧುನಿಕ ಕೃಷಿಯ ಬೆಳವಣಿಗೆಯು ಹಳೆಯ ಬೇರಿಗೆ ಹೊಸ ಚಿಗುರು ಇದ್ದಂತೆ.

ಕಶ್ಯಪ ಮಹರ್ಷಿಗಳು ''ಕೃಷಿ ಪ್ರವೀಣ'' ಎಂಬ ಗ್ರಂಥದಲ್ಲಿ (ಸಂಸ್ಕೃತ ಹಸ್ತಪ್ರತಿ) ಬೆಳೆಗಳಿಗೆ ಯೋಗ್ಯ ಭೂಮಿಯನ್ನು ವಿಂಗಡಿಸಿರುವುದು ಕಂಡುಬರುತ್ತದೆ. ಆಧುನಿಕ ಕಾಲದ ಮಣ್ಣು ಪರೀಕ್ಷೆಯಂತೆ ಪ್ರಾಚೀನ ಕಾಲದಲ್ಲಿ ಸಹ ಮಣ್ಣಿನ ಪರೀಕ್ಷೆಯು ಮಣ್ಣಿನ ಬಣ್ಣ, ವಾಸನೆ, ರುಚಿ, ರಚನೆ, ಮತ್ತು ತೂಕ ಇವುಗಳ ಆಧಾರದ ಮೇಲೆ ನಡೆಯುತ್ತಿತ್ತು. ನೀರು ಬಸಿದು ಹೋಗುವ ಗುಣವುಳ್ಳ ಮಣ್ಣಿಗೆ ಆ ಕಾಲದಲ್ಲೂ ಪ್ರಾಮುಖ್ಯತೆ ನೀಡಲಾಗಿತ್ತು. ಸೂಕ್ಷ್ಮ ಮೃದು ಹುಡಿ ಮಣ್ಣುಳ್ಳ ಭೂಮಿಯು ಉತ್ತಮವಾದದ್ದೆಂದು ಪ್ರಾಚೀನ ಕೃಷಿ ಶಾಸ್ತ್ರವು ಹೇಳುತ್ತದೆ. ಮಣ್ಣಿನ ಪರೀಕ್ಷೆಗೆ ಹಾಗೂ ವರ್ಗೀಕರಣಕ್ಕೆ ಒಳಪಡುವ ಬಣ್ಣ, ವಾಸನೆ, ... ಕಪ್ಪು, ಬಿಳಿ, ಕೆಂಪು ಮತ್ತು ಹಳದಿ ಬಣ್ಣದ ಮಣ್ಣುಗಳು, ಕ್ರಮವಾಗಿ ಸಿಹಿ, ಹುಳಿ, ಉಪ್ಪು, ಕಹಿ, ಖಾರ ಹಾಗೂ ಒಗರು ರುಚಿವುಳ್ಳದ್ದಾಗಿರುತ್ತವೆಂದು ಪ್ರಾಚೀನ ಗ್ರಂಥಗಳಲ್ಲಿ ಹೇಳಲಾಗಿದೆ.

ಇಪ್ಪತ್ತನೆಯ ಶತಮಾನದ ಪೂರ್ವದಲ್ಲಿ ಭಾರತದಲ್ಲಿ ರಾಸಾಯನಿಕ ಗೊಬ್ಬರಗಳಾಗಲಿ, ರಾಸಾಯನಿಕ ಪಿಡುಗು ನಾಶಕಗಳಾಗಲಿ ಇರಲಿಲ್ಲವೆಂಬುದು ಖಚಿತ. ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸಲು ಹಸುಕರುಗಳ ಸೆಗಣಿ ಗೊಬ್ಬರ ಮತ್ತು ಅವುಗಳ ಮೂತ್ರ, ಹಾಗೂ ಕುರಿ, ಮೇಕೆಗಳ ಹಿಕ್ಕೆ ಮತ್ತು ಮೂತ್ರಗಳನ್ನು, ಹಸುರೆಲೆ ಗೊಬ್ಬರಗಳನ್ನು ಬಳಸುತ್ತಿದ್ದರು. ಆ ಕಾಲದ ರೈತರಿಗೆ ಈ ಗೊಬ್ಬರಗಳನ್ನು ಹಾಕದೆ ಉತ್ತಮ ಕೃಷಿ ಉತ್ಪನ್ನ ದೊರೆಯಲಾರದೆಂಬ ದೃಢ ನಂಬಿಕೆ ಇತ್ತು. ಅಲ್ಲದೆ ಕೋಳಿ, ಕುದುರೆ, ಆನೆ, ಹಂದಿ ಮುಂತಾದ ಪ್ರಾಣಿಗಳ ಮಲವನ್ನು ಗೊಬ್ಬರವನ್ನಾಗಿ ಬಳಸುತ್ತಿದ್ದರು. ಅದರಿಂದ ಮಣ್ಣಿನಲ್ಲಿ ಫಲವತ್ತತೆಯು ಹೆಚ್ಚಾಗುವುದಲ್ಲದೆ ಮಣ್ಣಿನ ರಚನೆ ಹಾಗೂ ನೇಗಿ ಸುಧಾರಿಸುತ್ತಿದ್ದವು. ಬೆಳೆಗಳಿಗೆ ಉಪಯೋಗವಾಗ ತಕ್ಕಂತಹ ಚಟುವಟಿಕೆಯನ್ನು ನಡೆಸುವ ಅಣು ಜೀವಿಗಳ ಸಂಖ್ಯೆಯು ಹೆಚ್ಚಾಗಿ ಮಣ್ಣಿನ ಫಲವತ್ತತೆಯನ್ನು ಉಳಿಸಿಕೊಳ್ಳಲಾಗುತ್ತಿತ್ತು. ಇದಲ್ಲದೆ ಮಣ್ಣಿನಲ್ಲಿಯ ತೇವಾಂಶವನ್ನು ಹಿಡಿದಿಟ್ಟುಕೊಳ್ಳುವ ಶಕ್ತಿಯು ಹೆಚ್ಚಾಗುತ್ತಿತ್ತು. ಮಣ್ಣಿನ ಫಲವತ್ತತೆಯನ್ನು ಹೆಚ್ಚಿಸಲು ಪ್ರಾಣಿಗಳ ರಕ್ತವನ್ನು ಮತ್ತು ಪ್ರಾಣಿಗಳ ಎಲುಬಿನ ಪುಡಿಯನ್ನು ಉಪಯೋಗಿಸುತ್ತಿದ್ದರು. ಇದೇ ಸಾವಯವ ಕೃಷಿ ಪದ್ಧತಿಯ ಮೂಲವೆಂದು ಹೇಳಬಹುದು.

ಒಣ ಬೇಸಾಯದಲ್ಲಿ ಅಲ್ಪ ಮಳೆಯು ಬಿದ್ದರೂ ಒಡ್ಡು ಮುಂತಾದವುಗಳನ್ನು ಹಾಕಿ ಜಮೀನನ್ನು ಸಮನಾಗಿ ಮಾಡಿ ಬಿದ್ದ ಮಳೆಯ ಒಂದು ಹನಿಯಾಗಲಿ, ಅದರ ಜೊತೆಗೆ ಮಣ್ಣಿನ ಕಣವಾಗಲಿ ಹೊರಗೆ ಹೋಗದಂತೆ ಜಮೀನುಗಳನ್ನು ಅಂಗೈಯಂತೆ ಸಮನಾಗಿ ಇಡುತ್ತಿದ್ದರು. ಇದರಿಂದ ಸಾಕಷ್ಟು ತೇವಾಂಶವು ಭೂಮಿಯಲ್ಲಿರುತ್ತಿತ್ತು. ಜೊತೆಗೆ ಕಳೆ ತೆಗೆಯುವ ಪದ್ಧತಿಯೂ ಜಾರಿಯಲ್ಲಿತ್ತು.

ಆಗಿನ ಜನರು ಕೃಷಿಯಲ್ಲಿ ಶ್ರದ್ಧೆಯಿಟ್ಟು ಬೆವರು ಸುರಿಸಿ ಸತತ ಉದ್ಯೋಗ ಮಾಡಿ ಸೇವಾಭಾವನೆಯನ್ನು ಇಟ್ಟುಕೊಂಡು ಕೃಷಿ ಮಾಡುತ್ತಿದ್ದರು. ಅದಕ್ಕೆಂದೇ ರೈತನು ಜೀವರಾಶಿ ಉಳಿಸಲಿಕ್ಕೆ ಅನ್ನವನ್ನು ನೀಡುವನೆಂಬ ಗಾದೆಯ ಮಾತು ರೂಢಿಯಲ್ಲಿದೆ. ಕೃಷಿಗೆ ಮುಖ್ಯವಾಗಿ ಬೇಕಾದುದು ಬೆವರು ಸುರಿಸಿ ದುಡಿಯುವ ಜನ. ಭರತ ಖಂಡದಲ್ಲಿ ಇತ್ತೀಚೆಗೆ ಮಾನವ ಸಂಪನ್ಮೂಲ ಮಿತಿಮೀರಿ ಬೆಳೆದಿದೆ. ಇವರೆಲ್ಲರೂ ಸತ್ಯ ಶುದ್ಧ ಕಾಯಕವೆಂದು ಕೃಷಿಯಲ್ಲಿ ಶ್ರಮವಹಿಸಿ ಬೆವರು ಸುರಿಸಿ ದುಡಿದರೆ ನಮ್ಮ ಭಾರತ ದೇಶವು ಜಗತ್ತಿನಲ್ಲಿಯೇ ಪ್ರಥಮ ಮುಂದುವರಿದ ರಾಷ್ಟ್ರವಾಗಬಹುದು.

ಎಸ್. ಎಸ್. ಕಟ್ಟಿಹಳ್ಳಿ ಮಠ

### ಸೊಸೆ ಹೇಳಿದ್ದು

*ಗಂಡು ಮಗು ಹಡೆಯೆಂದು ಆಡಿಗಡಿಗು ಅತ್ತೆ*
*ಕಾಡುತಿರೆ ಈ ರೀತಿ ಉತ್ತರವ ಕೊಟ್ಟೆ*
*ನಾ ಏನಿಯ ಪೀಠವೆ ಮಕ್ಕಳಿಗೆ ಕೇಳಿ*
*ನಿಮ್ಮ ಮಗ ಲಿಂಗಿಗಳು ಅವರಿಗೇ ಹೇಳಿ.*

- ವಿಡಂಬಾರಿ

# ಎಂತಹ ಜನರಿವರು

ಎಂತಹ ಜನರಿವರು
ಕಾಡೊಳಗಿದ್ದ ಕರಡಿಯ ಹಿಡಿದು
ಊರಿಗೆ ತಂದಿಹರು
ಕರಡಿಯ ಕುಣಿಸಿ
ಜನರನು ನಗಿಸಿ ಕಾಸನು ಬೇಡುವರು

ಎಂತಹ ಜನರಿವರು
ಟೊಂಗೆಯೊಳಗಿದ್ದ ಮಂಗನ ಹಿಡಿದು
ಊರಿಗೆ ತಂದಿಹರು
ನಾನಾ ವಿಧದ
ಆಟವನಾಡಿಸಿ ಕಾಸನು ಕಸಿಯುವರು

ಎಂತಹ ಜನರಿವರು
ಹುತ್ತದೊಳಿದ್ದ ಹಾವನು ಹಿಡಿದು
ಹಲ್ಲನು ಕಿತ್ತಿಹರು
ಬುಟ್ಟಿಯೊಳಿಟ್ಟು ಜನರಿಗೆ ತೋರಿಸಿ
ಹೊಟ್ಟೆಯ ಹೊರೆಯುವರು



ಎಂತಹ ಜನರಿವರು
ಟಗರುಗಳೆರಡನು ಢಿಕ್ಕಿಯ ಹೊಡೆಸಿ
ನೋಡುತ ನಿಲ್ಲುವರು
ಮೋಜಿನ ಆಟಕೆ ಬಾಜಿಯ ಕಟ್ಟಿ
ಪ್ರಾಣಿಯ ಕೊಲ್ಲುವರು

ಎಂತಹ ಜನರಿವರು
ಯಾವುದೊ ಮರದ ಪೊಟರೆಯೊಳಿದ್ದ
ಗಿಳಿಯನು ಹಿಡಿದಿಹರು
ಗೂಡೊಳಗಿಟ್ಟು ಶಾಸ್ತ್ರವ ಹೇಳಿಸಿ
ಕಾಸನು ಕೇಳುವರು

ಆನೆ, ಕುದುರೆ, ಒಂಟೆ, ಕತ್ತೆ
ಮಾಡಿವೆ ಇವರಿಗೆ ಸೇವೆ
ಇವುಗಳಿಗಾಗಿ ಮಾಡಿದುದೇನು
ಕೇಳುವ ನಮಗೆ ನಾವೇ?

ಬಿ. ತಿಪ್ಪೇರುದ್ರಪ್ಪ
ರಾಜ್ಯಶಾಸ್ತ್ರ ಉಪನ್ಯಾಸಕ, ಹರಪನ ಹಳ್ಳಿ

## ಹೊಸತು-ಪದ-ಹೊಸೆತ

| | | | | | | | | |
|---|---|---|---|---|---|---|---|---|
| | | 1 | | 2 | | 3 | | |
| | 4 | | | | | | | 5 |
| 6 | | | | | | 7 | 8 | |
| | | | 9 | | 10 | | | |
| 11 | | | | | 12 | | | 13 |
| | | | 13ಎ | | | | | |
| 14 | | | | | | 15 | | |
| | | | 16 | | 17 | | 18 | |
| | 19 | | | | | | | |

**ಅಡ್ಡ**

೩. ಜಗತ್ತಿನ ಅತ್ಯಂತ ಶ್ರೇಷ್ಠ ನಟಿಯಾಗಿದ್ದ ಈಕೆಯ ಹೆಸರಲ್ಲೇ ಸುಗಂಧದ್ರವ್ಯ, ಸಿಗರೇಟು, ಮಿಠಾಯಿ, ಕನ್ನಡಕಗಳೂ ಪ್ರಚಲಿತವಾದವು.

೪. ಚೆನ್ನಮಲ್ಲಿಕಾರ್ಜುನನೇ ತನ್ನ ಪತಿಯೆಂದು ಭಾವಿಸಿದ್ದ ವಚನ ಸಾಹಿತ್ಯದ ಶಿವಭಕ್ತೆ.

೬. ಹದಿಬದೆಯ ಧರ್ಮವನ್ನು ನೆನಪಿಗೆ ತರುವ ಸಂಜೆಯವಳು!

೭. ಗಂಗೆ, ಯಮುನೆ, ಸರಸ್ವತಿಯ ಕೂಡಸ್ನಾನದಲ್ಲಿ ಸಿಗುವ ಕಾದಂಬರಿಗಾರ್ತಿ!

೯. ಭಗೀರಥ ಪ್ರಯತ್ನ ಮಾಡಿ ಗಂಗಾನದಿಗೆ ಹೆಸರುಕೊಡಿ

೧೧. ಗೋವಿಂದ ಪೈ ಅವರ 'ಪಾರ್ತಿಸುಬ್ಬ'ದಲ್ಲಿಯ 'ದೇಸಿಯ ಕಣ್ಣು' ಬಯಲಾಟವೇ?

೧೨. ಕಾವ್ಯಗಳಲ್ಲೇ ರಮ್ಯವಾದುದು ನಾಟಕ; ನಾಟಕಗಳಲ್ಲೇ ರಮ್ಯವಾದ ಇದರಲ್ಲಿ ಕಾಳಿದಾಸನು ಪಾತ್ರಧಾರಿಯ ಬೆರಳಲ್ಲಿ ಉಂಗುರವಿಲ್ಲದಂತೆ ಚಿತ್ರಿಸಿದ್ದಾನೆ.

೧೪. ಗೌಡನಂತಿರುವ ಗ್ರಾಮೋದ್ಯೋಗಿ.

೧೫. ಹೊಂದಲಾರದೆ ದುರ್ಗಮವಾಗಿರುವುದರಲ್ಲಿ ಸ್ತ್ರೀಪುರುಷರು ಸುತ್ತುಗಟ್ಟಿ ಕುಣಿಯುವ ವಿನೋದವಿದೆ

೧೬. ತಾಳುವೆನು ಯಾತನೆಯ, ಬಾಳುವೆನು ನಿನಗಾಗಿ, ಕಾಲಬಂದರೂ ನಾನು ಹೆದರೆನು, ಸಿದ್ಧರಾಮ! ಎಂದ ಲಿಗಾಡೆ ಕವಯಿತ್ರಿ.

೧೯. ಕಲಶದಲ್ಲಿ ನೀರು - ಬೆಂಗಳೂರು ಪ್ರಸಿದ್ಧ ಉತ್ಸವ.

**ಲಂಬ**

೧. ತಾಯಿಯ ತಂಗಿಯೋ ಇಲ್ಲಾ ಅಪ್ಪನ ತಮ್ಮನ ಹೆಂಡತಿಯೋ?

೨. ಆಶ್ಚರ್ಯ ಸೂಚಕ ಅವ್ಯಯ.

೩. 'ಸತಿ'ಯ ಮುಂದೆ 'ಸತ್ಯವಾನನ' ಹಿಂದೆ ಕಾಣಬರುವ ಎಂ. ಆರ್. ಶ್ರೀಯವರ ಮೊದಲ ಕಾದಂಬರಿ

೪. ಬೆಂದ ಅಕ್ಕಿ ಪ್ರಾಣಕ್ಕೆ ಅಗತ್ಯ.

೫. ಸುಪ್ರಸಿದ್ಧ ಕಾದಂಬರಿಗಾರ್ತಿ.

೬. ಕಡೆಂಗೋಡ್ಲು ಶಂಕರ ಭಟ್ಟರ 'ನಲ್ಮೆ' ಕಥನ ಕವನದಲ್ಲಿ (ಸಂಕಲನ) ಕಾಣಬರುವ ಒಂದು ಖಂಡಕಾವ್ಯ.

೭. ಉಪನಿಷತ್ತು.

೮. ನಾಡಿನ ಪ್ರಜೆಯ ಗ್ರಾಮ್ಯ ಪ್ರಪಂಚ.

೧೦. ಕರ್ನಾಟಕಕ್ಕಿದ್ದ ಅಗಲ-ವಿಸ್ತಾರ!

೧೧. 'ನಾನೂ ಕತ್ತಿ ಹಿರೀತೇನೆ, ಕುದುರೆ ಸವಾರಿ ಮಾಡ್ತೇನೆ, ರಾಣಿ ಆಗ್ತೇನೆ' ಎಂದು ಬಾಲಕಿಯಾಗಿದ್ದಾಗಲೇ ಹೇಳಿ ಝಾನ್ಸಿಯಲ್ಲಿ ಮೆರೆದ ವನಿತೆ.

೧೩. ಕಾವ್ಯ ಕರ್ತೃವನ್ನು ಆವರಿಸು.

೧೭. ಕೊಡಬೇಕಾದ ವರದಕ್ಷಿಣೆ.

೧೮. 'ಮಾಂಗಲ್ಯಸೂತ್ರ,' ಕ್ಕಾಗಿ ಅವಸರವೇಕೆ? ನಿಧಾನಿಸಿ!

ಜಿ. ಮಲ್ಲಿಕಾರ್ಜುನ
ಘಂಟಾಚಾರ್ಯರು, ಸಿರಿಗೆರೆ-೫೭೭೫೪೧, ಚಿತ್ರದುರ್ಗ ಜಿಲ್ಲೆ

## 'ಕೃಷಿ ಸಾಹಿತ್ಯಶ್ರೀ' ಪ್ರಶಸ್ತಿ



ಧಾರವಾಡದ ಕೃಷಿ ವಿಶ್ವವಿದ್ಯಾಲಯದ ಕನ್ನಡ ಸಂಘ ಐದು ವರ್ಷಗಳಿಗೊಮ್ಮೆ ನೀಡುವ 'ಕೃಷಿ-ಸಾಹಿತ್ಯಶ್ರೀ' ಪ್ರಶಸ್ತಿಯನ್ನು ನವಕರ್ನಾಟಕ ಪ್ರಕಟಣೆಯಾದ 'ಬಳ್ಳಿ ತರಕಾರಿಗಳು' ಕೃತಿಯ ಲೇಖಕರಾದ ಡಾ॥ ಪಿ. ನಾರಾಯಣಸ್ವಾಮಿ ಮತ್ತು ಡಾ॥ ಎಲ್. ವಸಂತ ಪಡೆದಿದ್ದಾರೆ. ಇವರಿಗೆ ನಮ್ಮ ಅಭಿನಂದನೆಗಳು.

## ಅನುವಾದಕ್ಕಾಗಿ ಪುರಸ್ಕಾರ




ನವಕರ್ನಾಟಕ ಪ್ರಕಟಿಸಿರುವ ಡಾ॥ ದೇವಿಪ್ರಸಾದ್ ಚಟ್ಟೋಪಾಧ್ಯಾಯ ಅವರ 'ಇದು ಮುಗಿಯದ ಕಥೆ'ಯನ್ನು ಬಂಗಾಳಿಯಿಂದ ಅನುವಾದಿಸಿರುವ ಶ್ರೀ ಜಿ. ಕುಮಾರಪ್ಪ ಅವರು ಉತ್ತಮ ಅನುವಾದಕ್ಕಾಗಿ ಕರ್ನಾಟಕ ಸಾಹಿತ್ಯ ಅಕಾಡೆಮಿಯ ಪುರಸ್ಕಾರ ಗಳಿಸಿದ್ದಾರೆ. ಶ್ರೀಯುತರಿಗೆ ನವಕರ್ನಾಟಕದ ಅಭಿನಂದನೆಗಳು ಸಲ್ಲುತ್ತವೆ.

## ಸಂವಿಧಾನ ಮರುಪರಿಶೀಲನೆ - ವಿವಾದಗೋಷ್ಠಿ




ಮಂಗಳೂರಿನ ಅಖಿಲ ಭಾರತ ಯುವಜನ ಒಕ್ಕೂಟ ಮತ್ತು ಜನಜಾಗೃತಿ ವೇದಿಕೆ-ಇವುಗಳ ಆಶ್ರಯದಲ್ಲಿ ಫೆಬ್ರವರಿ ೨೭ರಂದು, 'ಸಂವಿಧಾನ-ಮರುಪರಿಶೀಲನೆ- ವಿಚಾರ ವಿನಿಮಯ'- ವಿವಾದ ಗೋಷ್ಠಿ ನಡೆಯಿತು. ಅದರಲ್ಲಿ ಕೇರಳ, ಗೌಹಾತಿ ಮತ್ತು ಮಧ್ಯಪ್ರದೇಶಗಳ ಉಚ್ಚನ್ಯಾಯಾಲಯಗಳ ನಿವೃತ್ತ ನ್ಯಾಯಾಧೀಶ ಯು. ಎಲ್. ಭಟ್ ಮತ್ತು ಬೆಂಗಳೂರಿನ ನ್ಯಾಯವಾದಿ ಎಂ. ಸಿ. ನರಸಿಂಹನ್, ಹಿರಿಯ ಕಮ್ಯುನಿಸ್ಟ್ ಧುರೀಣ ಬಿ. ವಿ. ಕಕ್ಕಿಲ್ಲಾಯ, ಕೇರಳದ ಮಾಜಿ ಮಂತ್ರಿ, ಡಾ॥ ಸುಬ್ಬರಾವ್, ಎಂ. ಸಿ. ವೆಂಕಟರಾಮು, ಎಸ್. ಸುರೇಂದ್ರ ಮತ್ತಿತರರು ಭಾಗವಹಿಸಿದ್ದರು.

ಮಾನ್ಯ ಯು. ಎಲ್. ಭಟ್ ಅವರು ಮಾತನಾಡುತ್ತ ಸಂವಿಧಾನವನ್ನು ಜನತೆಯ ಒಳಿತಿಗಾಗಿ ಮರುಪರಿಶೀಲನೆ ಮಾಡುವಂತಿದ್ದರೆ ಅದನ್ನು ಸ್ವಾಗತಿಸೋಣ. ಜನರ ಮಧ್ಯೆ ವ್ಯವಹರಿಸುವ ಪ್ರತಿನಿಧಿಗಳಿಲ್ಲದೆ ನಿವೃತ್ತ ನ್ಯಾಯಾಧೀಶರು ಮಾಡುವ ಪರಿಶೀಲನೆ ಜನಪರವಾಗಿರಲು ಸಾಧ್ಯವಿಲ್ಲ ಎಂದರು. ಆದುದರಿಂದ ಸರಕಾರ ಅನುಸರಿಸುತ್ತಿರುವ ವಿಧಾನ ಸರಿಯಾದುದಲ್ಲ ಎಂದರು.

## ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕ ಬಿಡುಗಡೆ



ನವಕರ್ನಾಟಕ ಪ್ರಕಾಶನ ಪ್ರಕಟಿಸಿರುವ ಲಾರ್ಡ್ ಬೇಡನ್ ಪೊವೆಲ್‌ರವರ ಕೃತಿ 'ಬಾಲಕರಿಗಾಗಿ ಸ್ಕೌಟಿಂಗ್' ಕೃತಿಯನ್ನು ಕರ್ನಾಟಕದ ರಾಜ್ಯಪಾಲೆಯಾದ ಮಾನ್ಯ ವಿ. ಎಸ್. ರಮಾದೇವಿಯವರು ಫೆಬ್ರವರಿ ೨೬ರಂದು ಬಿಡುಗಡೆ ಮಾಡಿದರು. ಪ್ರಥಮ ಬಾರಿಗೆ ಕನ್ನಡದಲ್ಲಿ ಪ್ರಕಟವಾಗಿರುವ ಇದನ್ನು ರಾ. ಚಂದ್ರಶೇಖರನ್ ಅನುವಾದಿಸಿದ್ದಾರೆ. ಇದು ನವಕರ್ನಾಟಕ ಮತ್ತು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಕರ್ನಾಟಕ ರಾಜ್ಯ ಸಂಸ್ಥೆಯ ಸಹಯೋಗದ ಪ್ರಕಟಣೆ.

## ಪ್ರಕೃತಿ ಪ್ರಶಸ್ತಿ



ನಮ್ಮ [illegible] ಲೇಖಕರಾದ ಡಾ॥ [illegible] ಮತ್ತು ನಮ್ಮ [illegible] ಇವರಿಗೆ ನಮ್ಮ ಅಭಿನಂದನೆಗಳು.

# ಗ್ರಹಗಳ ಓಟದ ಸ್ಪರ್ಧೆಯ ಮುಕ್ತಾಯ

ಶುಭ್ರವಾದ ನೀಲಿ ಆಕಾಶ ಕ್ರಮೇಣ ಬೂದು ಬಣ್ಣಕ್ಕೆ ತಿರುಗುತ್ತಿರುವುದನ್ನು ಈ ತಿಂಗಳಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಇದಕ್ಕೆ ಕಾರಣಕರ್ತೃ ನಮ್ಮ ವಾತಾವರಣವೇ. ಧೂಳು ಹೆಚ್ಚಿದಂತೆ ವಾತಾವರಣದ ಪಾರದರ್ಶಕತೆ ಕಡಿಮೆಯಾಗುತ್ತದೆ. ಕ್ಷೀಣ ನಕ್ಷತ್ರಗಳು ಕಾಣದಾಗುತ್ತವೆ. ಪ್ರಕಾಶಮಾನವಾದ ನಕ್ಷತ್ರಪುಂಜಗಳು ದಿಗಂತದಂಚಿಗೆ ಸರಿದಿರುವುದನ್ನು ಕಂಡಾಗ, ಪ್ರಕೃತಿಯ ಈ ನಿರ್ಧಾರದಲ್ಲಿ ಅವೂ ಸಹಭಾಗಿಗಳೋ ಎನ್ನಿಸುತ್ತದೆ.

ನೆತ್ತಿಯ ಮೇಲೆ ವಿರಾಜಿಸುತ್ತಿರುವ ಕ್ಷೀಣ ನಕ್ಷತ್ರಪುಂಜ ಕಟಕ (ಕರ್ಕಾಟಕ, ಕರ್ಕ). ಈ ಹೆಸರೇಕೆ? ಗ್ರೀಕ್ ಪುರಾಣದ ಪ್ರಕಾರ ಒರೈಯನ್‌ನನ್ನು ಎದುರಿಸಲು ಈ ಏಡಿಯನ್ನು ಕಳಿಸಲಾಯಿತಂತೆ. ಆದರೆ ಏಟು ತಿಂದು, ಸೋತು ಸುಣ್ಣವಾದ ಇದು ಬರಿಗೈಯಿಂದ ಮರಳಿತಂತೆ. ದೈವಸೃಷ್ಟಿಯಾದ್ದರಿಂದ ಆಕಾಶದಲ್ಲಿ ಸ್ಥಾನವಂತೂ ಸಿಕ್ಕಿತು. ಆದರೆ ಮಂಕಾಗಿ ಉಳಿದ ಇದು ಒರೈಯನ್‌ನನ್ನು ಹಿಂಬಾಲಿಸುತ್ತಿದೆಯಂತೆ. ಕಥೆ ಏನೇ ಆದರೂ, ಇದನ್ನು ಗುರುತಿಸಲು ಒರೈಯನ್ ಸಹಾಯ ಬೇಕೇಬೇಕು. ಇದರಲ್ಲಿಯ ನಕ್ಷತ್ರ ಸಮೂಹ ಪ್ರೆಸಿಪಿ ಈ ತಿಂಗಳಲ್ಲಿ ಬಹುಶಃ ಬರಿಗಣ್ಣಿಗೆ ಕಾಣಲಾರದು.

ಒರೈಯನ್ ಮತ್ತದರ ಸುತ್ತಲಿನ ಪ್ರಕಾಶಮಾನ ಪುಂಜಗಳು ಪಶ್ಚಿಮಕ್ಕೆ ಸರಿದಿದ್ದರೆ ಪೂರ್ವದಲ್ಲಿ ಸಿಂಹ ವಿರಾಜಮಾನವಾಗಿರುತ್ತದೆ. ದಕ್ಷಿಣದಲ್ಲಿ ಅಗಸ್ತ್ಯ (ಕನೋಪಸ್) ವಿದಾಯ ಹೇಳುತ್ತಿದ್ದರೆ ಈಶಾನ್ಯದಲ್ಲಿ ಸಪ್ತರ್ಷಿಗಳು ಉದಯಿಸುತ್ತಿರುತ್ತಾರೆ.

ಈ ತಿಂಗಳ ವಿಶೇಷವೆಂದರೆ ಗ್ರಹಗಳ ಓಟದ ಸ್ಪರ್ಧೆಯ ಮುಕ್ತಾಯ. ಇದು ಒಂದು ''ಹೀಟ್'' ಅಷ್ಟೇ. ಸಂಜೆ ಗುರು, ಶನಿ ಮತ್ತು ಮಂಗಳಗಳ ನಡುವೆ ಸ್ಪರ್ಧೆ. ಪಶ್ಚಿಮದ ಅಂಚಿನಲ್ಲಿ ಗೆರೆಯಂತೆ ಕಾಣುವ ಇವು ಹೊಂಬಣ್ಣದ ಹಿನ್ನೆಲೆಯಲ್ಲೂ ಕಾಣುವಷ್ಟು ಪ್ರಕಾಶಮಾನವಾಗಿರುತ್ತವೆ. ತೀರಾ ಮುಂದಿದ್ದ ಕೆಂಪುಗ್ರಹ ಮಂಗಳವನ್ನು ದಿನಕ್ರಮೇಣ ಗುರು (ಮೂರರಲ್ಲಿ ಪ್ರಕಾಶಮಾನವಾದದ್ದು) ಹಿಂದೆ ಹಾಕುವ ಸನ್ನಾಹ ನಡೆಯುತ್ತದೆ. ಹತ್ತನೆಯ ತಾರೀಖಿನ ಹೊತ್ತಿಗೆ ಗುರು ಯಶಸ್ವಿಯಾಗುತ್ತದೆ. ಆಗೊಂದು ಪುಟ್ಟ ತ್ರಿಕೋಣ ಮೂಡುವುದು. ಛಾಯಾಚಿತ್ರಗ್ರಾಹಕರಿಗೆ ಇದೊಂದು ಅಪೂರ್ವ ಅವಕಾಶ. ತಿಂಗಳ ಕೊನೆಗೆ ಮೂರು ಗ್ರಹಗಳೂ ಸೂರ್ಯನೊಡನೆಯೇ ಮುಳುಗಿ ಹೋದಾಗ ಸ್ಪರ್ಧೆ ಮುಕ್ತಾಯ.

ಸ್ಪರ್ಧೆಯ ಇನ್ನೊಂದು ''ಹೀಟ್'' ಬೆಳಗಿನ ಝಾವ - ಬುಧ ಮತ್ತು ಶುಕ್ರಗಳ ನಡುವೆ. ಪ್ರಕಾಶಮಾನವಾದ ಶುಕ್ರನಿಗಿಂತ ಮೇಲೆ ಕಾಣುವ ಬುಧ ದಿನೇ ದಿನೇ ತನ್ನ ಸ್ಥಾನ ಬದಲಿಸುತ್ತದೆ. ಇಪ್ಪತ್ತೆಂಟರಂದು ಮುಂಜಾವಿನ ಹೊಂಬಣ್ಣದ ಬೆಳಕಿನಲ್ಲಿ ಸ್ಪರ್ಧೆಯ ಫಲಿತಾಂಶ ತಿಳಿಯುವುದು. ಬುಧ ಶುಕ್ರರ ನಡುವೆ ಕನಿಷ್ಠ ಕೋನ ಕೇವಲ ೦.೩ ಡಿಗ್ರಿಗಳಷ್ಟು. ವಿಜಯಿ ಶುಕ್ರ ಮರುದಿನದಿಂದ ಮೇಲೆ ಉಳಿಯುವುದನ್ನು ನೋಡಲು ಸೂರ್ಯೋದಯವೇ ಅಡ್ಡಿಯಾಗುವುದರಿಂದ ಈ ಸ್ಪರ್ಧೆಯೂ ಇಲ್ಲಿಗೇ ಮುಕ್ತಾಯ.

ಹೀಗೆ ಗ್ರಹಗಳನ್ನು ಸಂಜೆಯಲ್ಲಿ ನೋಡಬಹುದಾದ ಅವಕಾಶ ಸದ್ಯಕ್ಕಂತೂ ಇಲ್ಲ. ''ಇದೇ ಕೊನೆಯದು'' ಎಂದು ಬರೆಯಲಾರೆ. ಏಕೆಂದರೆ ''ಕೊನೆಯ'' ಎಂಬ ಪದ ಪ್ರಳಯ, ಇತ್ಯಾದಿ ಊಹಾಪೋಹಗಳಿಗೆ ಒತ್ತುಕೊಡಬಹುದು. ಸೂರ್ಯೋದಯದ ನಂತರವೇ ಹಾಸಿಗೆ ಬಿಟ್ಟೇಳುವ (ಸೂರ್ಯವಂಶಿಗಳು ಎಂದು ಇವರನ್ನು ಕರೆಯಬಹುದೇನೋ?) ಆಕಾಶ ವೀಕ್ಷಕರಿಗೆ ಸದ್ಯಕ್ಕೆ ಇದೊಂದೇ ಅವಕಾಶ. ನವೆಂಬರ್ ಹೊತ್ತಿಗೆ ಪುನಃ ಗುರು, ಶನಿ ಸಂಜೆಗೆ ಹಿಂದಿರುಗುತ್ತವೆ.




ಗ್ರಹಗಳ ಸಹಾಯದಿಂದ ರಾಶಿಗಳನ್ನು ಗುರುತಿಸಲು ಸಾಧ್ಯವೇ ? ಇದು ಒಬ್ಬ ಆಸಕ್ತರ ಪ್ರಶ್ನೆ. ಆದರೆ ನಿಧಾನವಾಗಿ ಸ್ಥಳ ಬದಲಿಸುವ ಗುರು, ಶನಿ ಇವು ಈಗಿರುವಂತೆ (ಮೇಷರಾಶಿ) ಕ್ಷೀಣ ನಕ್ಷತ್ರಪುಂಜದಲ್ಲಿದ್ದರೆ, ಹಿನ್ನೆಲೆಯ ನಕ್ಷತ್ರಗಳನ್ನು ಪ್ರತ್ಯೇಕಿಸಿ, ಅದರಲ್ಲಿ ಟಗರನ್ನು ಊಹಿಸುವುದು ಸಾಧ್ಯವಾಗದು. ವೇಗವಾಗಿ ಚಲಿಸುವ ಬುಧ, ಶುಕ್ರ ಇವುಗಳ ಹಿನ್ನೆಲೆಯಲ್ಲಿ ಯಾವಾಗಲೂ ಸಂಧ್ಯಾ ಪ್ರಕಾಶದ ಹೊಂಬಣ್ಣ ಇರುವುದರಿಂದ ಕ್ಷೀಣ ನಕ್ಷತ್ರಗಳು ಕಾಣದಾಗುತ್ತವೆ. ಆದ್ದರಿಂದ ಚಂದ್ರನನ್ನು ಹಿಂಬಾಲಿಸುವುದೇ ಸರಿಯಾದ ಉಪಾಯ.

ಚಂದ್ರ ಈ ತಿಂಗಳಲ್ಲಿ ಛಾಯಾಗ್ರಾಹಕರಿಗೆ ಒಳ್ಳೆಯ ಸಂದರ್ಭಗಳನ್ನು ಒದಗಿಸಿಕೊಡುತ್ತಾನೆ. ೬ರಂದು ಸಂಜೆ ಗ್ರಹಗಳ ಗುಂಪನ್ನು ದಾಟುವ ಬಾಲಚಂದ್ರ; ಅದಕ್ಕೆ ಮುನ್ನ ೨-೩ರಂದು ಬುಧ ಶುಕ್ರಗಳನ್ನು ಗುರುತಿಸಲೂ ಸಹಾಯಮಾಡುತ್ತಾನೆ. ೨೬ರಂದು ರಾತ್ರಿ ನೆಪ್ಚೂನ್‌ನನ್ನು ಚಂದ್ರನ ಸಮೀಪವೇ ಗುರುತಿಸಬಹುದು. ಅಂಟಾರ್ಟಿಕದಿಂದ ನೆಪ್ಚೂನ್ ಮರೆಯಾಗುವುದನ್ನು ನೋಡಬಹುದು. ೨೭ರಂದು ಯುರೇನಸ್ ಪಕ್ಕದಲ್ಲಿ ಚಂದ್ರ ಕಾಣುತ್ತದೆ.

ಸಂಜೆ ಪೂರ್ವ ದಿಗಂತದಂಚಿನಲ್ಲಿ ಹೊಳೆಯುವ ಏಕಾಂಗಿ ನಕ್ಷತ್ರವನ್ನು ಗಮನಿಸಿ. ೧೮ರಂದು (೨೩ಗಂ. ೧೯ ನಿಮಿಷಕ್ಕೆ) ಹುಣ್ಣಿಮೆಯಂದು ಚಂದ್ರ ಈ ನಕ್ಷತ್ರದ ಪಕ್ಕ ವಿರಾಜಿಸುತ್ತಾನೆ. ಬೆಂಗಳೂರಿನ ಕರಗ ನಡೆಯುವ ಆ ದಿನದ ಹೆಸರು ಚಿತ್ರಾ ಪೌರ್ಣಮಿ. ಕಾರಣ ಸರಳ. ಆ ನಕ್ಷತ್ರವೇ ಚಿತ್ರಾ - ಅಷ್ಟೇ ಅಲ್ಲ, ಈ ತಿಂಗಳ ಹೆಸರು ಚೈತ್ರ ಎಂದಿರುವುದೂ ಇದೇ ಕಾರಣದಿಂದ.

ಡಾ|| ಬಿ. ಎಸ್. ಶೈಲಜಾ
ಜವಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್
ಶ್ರೀ ಟಿ ಚೌಡಯ್ಯ ರಸ್ತೆ, ಬೆಂಗಳೂರು

**ಏಪ್ರಿಲ್‌ನಲ್ಲಿ ಗ್ರಹಗಳ ಓಟದ ಸ್ಪರ್ಧೆ - ಸಂಜೆ ಕಾಣುವುದು ಹೀಗೆ**

| ಏಪ್ರಿಲ್ 2 | ಏಪ್ರಿಲ್ 6 | ಏಪ್ರಿಲ್ 10 |
|---|---|---|
| • ಶನಿ<br>• ಗುರು<br>• ಮಂಗಳ<br>ಪಶ್ಚಿಮ | • ಶನಿ<br>ಚಂದ್ರ • ಗುರು • ಮಂಗಳ<br>ಪಶ್ಚಿಮ | • ಶನಿ<br>• ಮಂಗಳ<br>• ಗುರು<br>ಪಶ್ಚಿಮ |

# ಮಧ್ಯಮ ವರ್ಗದ ದುಡಿಯುವ ಮಹಿಳೆ

ಕೆ. ಎಸ್. ರೋಹಿಣಿ

*"ನಾವು ಮುಂಜಾನೆಯ ಸೂರ್ಯ ಕಿರಣಗಳಲ್ಲಿ ಮೀಯಬೇಕಿದೆ,*
*ನಾವು ಸುಗಂಧ ಚೆಲ್ಲುವ ಹೂಗಳನ್ನು ಮುದ್ದಿಸಬೇಕಿದೆ,*
*ನಾವು ದುಡಿದು ದಣಿದಿದ್ದೇವೆ ನಿರರ್ಥಕ."*

ಚಿಲಿಯ ಸಂವೇದನಾಶೀಲ ಕವಿ ಪಾಬ್ಲೋ ನೆರೂಡನ ಕಾವ್ಯದ ಮೇಲಿನಂತಹ ಸಾಲುಗಳು ಈ ಹೊತ್ತು ಯಾರ ಎದೆಗಳಲ್ಲಿ ಅನುರಣಿಸುತ್ತಿರಬಹುದೆಂದು ನಾವು ಊಹಿಸಿಕೊಳ್ಳಬಲ್ಲೆವು.

ಚಿಂದಿ ಆಯುವ ಮಕ್ಕಳಲ್ಲೇ ? ಮೈ ಮಾರಿ ಜೀವನ ಹೊರೆದುಕೊಳ್ಳಬೇಕಾಗಿರುವ ಅನಿವಾರ್ಯತೆ ಹೊತ್ತ ನಿರ್ಭಾಗ್ಯೆಯರಲ್ಲೇ ? ವಿವಿಧ ಬಗೆಯ ದೈಹಿಕ ಶ್ರಮಗಳಲ್ಲಿ ತೊಡಗಿ ತಮ್ಮ ಜೀವನ ಕಸುವು ಇಂಗಿಸಿಕೊಳ್ಳುತ್ತಿರುವ ಕಾರ್ಮಿಕರಲ್ಲೇ ?

ಇವರಂತಲ್ಲದ, ಇವರೊಡನೆ ಗುರುತಿಸಿಕೊಳ್ಳಲು ಹೇಸುವ, ಆದರೆ ಇವರೆಲ್ಲರ ಜೀವನಾನಿವಾರ್ಯತೆಯ ಅಷ್ಟಿಷ್ಟು ಅಂಶಗಳ ಕಾರಣವಾಗಿಯೇ ದುಡಿಮೆಗೆ ತೊಡಗಿರುವ ಮತ್ತೊಂದು ವರ್ಗವಿದೆ:

ಅವರು ಅಕ್ಷರಸ್ಥ ಜನಸಮೂಹವಾಗಿರುವ ನಮ್ಮ ನಿಮ್ಮೊಡನಿದ್ದಾರೆ. ಅವರ ಗತ್ತು-ಗೈರತ್ತುಗಳಿಗೆ ನಾವು ದಂಗಾಗಿದ್ದೇವೆ. ಅವರ ಜೀವನ ಶೈಲಿಯನ್ನು ಮೆಚ್ಚಿದ್ದೇವೆ. ದಣಿವನ್ನು ಪ್ರದರ್ಶಿಸದ ಅವರ ಮುಖಾರವಿಂದಗಳಿಗೆ ಮಾರುಹೋಗಿದ್ದೇವೆ. ಅವರೊಳಗಿನ ಸಾಮರ್ಥ್ಯಕ್ಕೆ ಮನದೊಳಗೇ ಸಲಾಂ ಎಂದಿದ್ದೇವೆ. ಸ್ವತಃ ಈ ವರ್ಗವೇ ಸಮಾಜ ತನ್ನಿಂದ ನಿರೀಕ್ಷಿಸುತ್ತಿರುವ 'ಮೋಹಕತೆ'ಯನ್ನು ಪ್ರದರ್ಶಿಸುತ್ತಾ, ಆ ಮೋಹಕತೆಗೆ ತನ್ನೊಳಗೆ ತಾನೇ ಮರುಳಾಗುತ್ತಾ ತನ್ನ ವ್ಯಕ್ತಿತ್ವದ ಸಹಜ ಜೀವಂತಿಕೆಯನ್ನು ಕಳೆದುಕೊಳ್ಳುತ್ತಲಿದೆ. ಅವರ 'ಅಲಂಕೃತ' ಮನಸ್ಸುಗಳು ಈ ಮೇಲಿನ ಕಾವ್ಯದ ಸಾಲುಗಳಲ್ಲಿರುವ ಜೀವನೋನ್ಮುಖತೆಯನ್ನು ಅರಿಯುವಲ್ಲಿ ಸೋತು, ತಮ್ಮ ವ್ಯಕ್ತಿತ್ವವನ್ನು ಮತ್ತಷ್ಟು ಆರ್ದ್ರಗೊಳಿಸಿಕೊಳ್ಳಬಹುದಾದ ಅವಕಾಶದಿಂದ ವಂಚಿತವಾಗುತ್ತಿವೆ.

ಅವರು ನಿಮ್ಮ ಹೆಂಡತಿಯರೋ, ಮಕ್ಕಳೋ, ತಾಯಿಯೋ, ಸಹೋದರಿಯೋ, ಬಂಧುವೋ ಆಗಿದ್ದಾರೆ.

ಕೆಲವು ಕರ್ತವ್ಯಗಳನ್ನು ನಿರ್ವಹಿಸಲೇಬೇಕಾಗಿರುವ ಜವಾಬ್ದಾರಿಯುತ ಅಧಿಕಾರಿ ವರ್ಗವನ್ನು ಹೊರತುಪಡಿಸಿ– ಬ್ಯಾಂಕು, ವಿಮಾ ವಲಯ, ಅಂಚೆ ಕಚೇರಿ, ರಾಜ್ಯ ಮತ್ತು ಕೇಂದ್ರ ಸರಕಾರಿ ಕಚೇರಿಗಳಲ್ಲಿ, ಉದ್ದಿಮೆಗಳಲ್ಲಿ, ಖಾಸಗಿ ಕಂಪೆನಿಗಳಲ್ಲಿ ಗುಮಾಸ್ತರಾಗಿ, ಟೈಪಿಸ್ಟ್-ರಿಸೆಪ್ಷನಿಸ್ಟ್‌ಗಳಾಗಿ, ಸ್ಟೆನೋ, ಕಂಪ್ಯೂಟರ್ ಆಪರೇಟರ್ ಇತ್ಯಾದಿಗಳಾಗಿ ದುಡಿಯುತ್ತಿರುವ ಇವರುಗಳು ಸಮಾನತೆಯ ಪೋಸು ಕೊಡುವ ಉತ್ಸಾಹದಲ್ಲಿ ಶಕ್ತಿಮೀರಿ ಪ್ರದರ್ಶನಗೊಳ್ಳುತ್ತಾ ಒಳಗೊಳಗೇ ಟೊಳ್ಳಾಗುತ್ತಿದ್ದಾರೆ.

ಮೇಲು ಮಧ್ಯಮ ಮತ್ತು ಶ್ರೀಮಂತ ವರ್ಗಗಳ ಆಧುನಿಕ ಮತ್ತು ವೈಭವದ ಜೀವನಕ್ರಮಕ್ಕೆ ಮಾರುಹೋಗಿ, ಪ್ರತಿ ಹೆಜ್ಜೆಯನ್ನು ಸ್ಪರ್ಧೆಗಾಗಿಯೇ ಎಂಬಂತೆ ಇಡುತ್ತಾ, ಇಡಲು ಹೆಣಗುತ್ತಾ – ಆದರೆ ಅವರಿಗಿರುವ ಸಾಧ್ಯತೆ ಮತ್ತು ಇರದ ಅನಿವಾರ್ಯತೆ ಇತ್ಯಾದಿಗಳನ್ನು ಅರ್ಥಮಾಡಿಕೊಳ್ಳಲು ವಿಫಲರಾಗುತ್ತಾ ಛಿದ್ರಛಿದ್ರಗೊಳ್ಳುತ್ತಿದ್ದಾರೆ.

ಇವರ ಮುಂಜಾವು ಸೂರ್ಯನೇ ಸ್ವತಃ ಚಳಿ ಕಳೆದುಕೊಳ್ಳುವ ಮೊದಲಿನಿಂದ ಆರಂಭಗೊಳ್ಳುತ್ತದೆ. ಆದರೆ ಅವರ ಮನಸ್ಸಾಗಲಿ, ಪ್ರಜ್ಞೆಯಾಗಲೀ – ಉದಯ ರವಿಯ ಚೆಲುವನ್ನೋ, ಮುಂಬೆಳಗಿನ ಹಿತವಾದ ಹವೆಯನ್ನೋ, ಇಬ್ಬನಿಯ ಮೋಹಕ ಸೌಂದರ್ಯವನ್ನೋ ಗ್ರಹಿಸುವ ಆಸ್ವಾದಿಸುವ ಬಿಡುವನ್ನಿಟ್ಟುಕೊಂಡಿರುವುದಿಲ್ಲ.

ಗಡಿಯಾರದ ಮುಳ್ಳಿನೊಂದಿಗೆ ತುದಿಗಾಲಿನಲ್ಲೇ ಓಡಬೇಕಾಗಿರುವ ಆತಂಕವನ್ನು ಹೊತ್ತು ಇವರು ಪತಿರಾಯರು, ಅತ್ತೆ-ಮಾವ, ಮಕ್ಕಳು- ಎಲ್ಲರ ಅಗತ್ಯಕ್ಕಿಷ್ಟು ಒದಗಬೇಕು. ವಿಪರ್ಯಾಸವೆಂದರೆ ಅವಳ ಹೊರಗಿನ ದುಡಿಮೆ ಪೂರ್ತಿಯಾಗಿ ಕುಟುಂಬದ ಹಿತಕ್ಕಾಗಿಯೇ ಆಗಿದ್ದರೂ – ಅವಳ ಈ ಆತಂಕದ ಪಾಲನ್ನು ಮಾತ್ರ ಯಾರೂ ಭರಿಸಲು ಸಿದ್ಧರಾಗಿರುವುದಿಲ್ಲ.

ಅಂತಹದೊಂದು 'ನೆರವು' ಅವಳಲ್ಲಿ – ತಾನು 'ದುಡಿಯುತ್ತೇನೆ'ನ್ನುವ ಅಹಂನ್ನು ಉದ್ದೀಪನಗೊಳಿಸಬಹುದೆಂದು ಭಾವಿಸುತ್ತಾರೆ. ಇಂಡಿಯಾದ ಮಹಿಳೆಯ ಸಾಂಪ್ರದಾಯಿಕ ಕರ್ತವ್ಯಗಳನ್ನು ಅವಳು ಮರೆಯದಿರಲೆಂದು ಬಯಸುತ್ತಾರೆ. ಆ ಸ್ವಾಭಿಮಾನಿ ಮಹಿಳೆ ಮಾತ್ರ - ಇವರ್‍ಯಾರಿಂದಲೂ ಅಂತಹ ತುಟಿಯಂಚಿನ ನೆರವಿನ ನಿರೀಕ್ಷೆಯೂ ಇಲ್ಲದೆ, ನಿರ್ವಂಚನೆಯಿಂದ ದುಡಿಯುತ್ತಾಳೆ.



*ಈ ಕೆಲಸ ನಿಮಗೇ ಖಂಡಿತ. ಆದರೆ ಒಂದು ಷರತ್ತು: ಈ ಕಚೇರಿಯಲ್ಲಿ ನನಗೆ ಲೈಂಗಿಕ ಕಿರುಕುಳ ಕೊಡಲಾಗಿಲ್ಲ ಎಂದು ಒಂದು ಕಾಗದ ಈಗಲೇ ಬರೆದುಕೊಟ್ಟು ಬಿಡಿ.*

ಮನಸ್ಸಿನ ಆತಂಕವನ್ನು, ದೇಹದ ಶ್ರಮವನ್ನು ತುಟಿಕಚ್ಚಿ ಸಹಿಸಿಕೊಳ್ಳುತ್ತಾ ಕಚೇರಿಗೆ ಹೊರಡಲೇಬೇಕಾದ ಕೊನೆಯ ಸೆಕೆಂಡಿನವರೆಗೂ ಮನೆಯ ಕೆಲಸಗಳಿಗೆ, ಜವಾಬ್ದಾರಿಗಳಿಗೆ ನ್ಯಾಯ ಸಲ್ಲಿಸುತ್ತಾಳೆ. ಆದರೂ ಕೊನೆಯ ಗಳಿಗೆಯಲ್ಲಿ ಮಾಡಲಾಗದೆ ಉಳಿದ ಯಾವುದೋ ಕೆಲಸವೋ, ಮಾಡಿದರೂ ಅದು ಪೂರ್ತಿಯಾಗದ ಕೊರಗೋ, ಮತ್ತೊಂದೋ ಅವಳನ್ನು ನಿತ್ಯ ಕಾಡಿಯೇ ಕಾಡುತ್ತದೆ. ಯಾವುದೋ ಸಣ್ಣ ಕಟಕಿ, ಯಾರದೋ ಗೊಣಗು ಅವಳನ್ನು ತಾನು ಸಂಸಾರ ನಿರ್ವಹಿಸಲು ಅಸಮರ್ಥಳೇ ಎಂಬ ಅಂತರ್ಮುಖತೆಗೆ ತಳ್ಳಿಬಿಡುತ್ತದೆ.

ಸ್ನೋ, ಪೌಡರ್, ಲಿಪ್‌ಸ್ಟಿಕ್- ನೀಟಾಗಿ ಉಟ್ಟ ಸೀರೆ ಅಥವಾ ಡ್ರೆಸ್ ಅವಳು ಕೆಲಸದ ಹೊರೆಯೊಂದನ್ನು ನಿರ್ವಹಿಸಿಯೇ ಬಂದಿಲ್ಲವೆಂಬಂತಹ ಪ್ರದರ್ಶನವನ್ನು ಮಾಡಿದರೂ, ಕಣ್ಣುಗಳ ಆಳದಲ್ಲೆಲ್ಲೋ ವ್ಯಕ್ತವಾಗುವ ಈ ಅಸಹಾಯಕತೆ - ಅವಳು ಕಚೇರಿಯ ಆವರಣವನ್ನು ತಲುಪುವವರೆಗೂ ಅವಳ ಅರಿವಿನ ಪ್ರಪಂಚದಲ್ಲಾದರೂ ಉಳಿದೇ ಇರುತ್ತದೆ.

ಕಚೇರಿಯ ಆವರಣವನ್ನು ಪ್ರವೇಶಿಸಿದ್ದೇ ಅವಳ ವ್ಯಕ್ತಿತ್ವ ಮತ್ತೆ ಕ್ರಿಯಾಶೀಲವಾಗಿಬಿಡುತ್ತದೆ. ಮನೆಯ ಸುಖ-ದುಃಖಗಳನ್ನು, ಬೇಸರ-ನೋವುಗಳನ್ನು, ವೈಫಲ್ಯಗಳನ್ನು ಇನ್ನೂ ಹೊತ್ತು ಹೊರಟರೆ ತಾನಿಲ್ಲಿ ಸಫಲಳಾಗುವುದು ಸಾಧ್ಯವಿಲ್ಲವೆಂಬ ಅರಿವಿನಿಂದ ಎಲ್ಲಾ ತರಲೆಗಳನ್ನು ಕೊಡವಿಕೊಂಡುಬಿಡುತ್ತಾಳೆ. ಇದೀಗ ತಾನೇ ಅರಳಿನಿಂತ ಹೂವಿನ ಉತ್ಸಾಹವನ್ನು ತನ್ನ ಮುಖಾರವಿಂದದಲ್ಲಿ ಪ್ರದರ್ಶಿಸುತ್ತಾ, ಅಗಲವಾದ ಆತ್ಮವಿಶ್ವಾಸಿ ನಗೆಯೊಂದಿಗೆ ಇಲ್ಲಿಯೂ ಹೊಚ್ಚ ಹೊಸದಾಗಿ ಕಾರ್ಯಶೀಲಳಾಗುತ್ತಾಳೆ. ಇಲ್ಲಿಯ ಕೆಲಸವೂ ನಿರಾತಂಕವಾದುದೇನಲ್ಲ. ಕಾಫಿ, ಟೀ, ಸಿಗರೇಟು ಸೇವನೆಯ ನೆವದಲ್ಲಿ ಗಂಟೆಗಟ್ಟಲೆ ಕಚೇರಿಯಿಂದ ಹೊರಗಿರುವ ಗಂಡಸರಂತಲ್ಲದೆ, ಬೆಳಗ್ಗೆ ಹೋದಾಗಿನಿಂದ ಹಿಡಿದು ಸಂಜೆ ಮನೆಗೆ ಹೊರಡುವ ತನಕವೂ ಕುರ್ಚಿಗೆ ಕಟ್ಟಿದಂತೆ ಕೆಲಸ ಮಾಡುವ, ಅನಾವಶ್ಯಕ ರಾಜಕೀಯಗಳಲ್ಲಿ ತಲ್ಲೀನರಾಗದ, ತರ್ಕ ಹೂಡದ ಮಹಿಳೆಯರನ್ನು ಸಹಜವಾಗಿಯೇ ಕೆಲಸದ ಹೊರೆ ವಿಪರೀತವಾಗಿರುವ, ಪ್ರಾಮಾಣಿಕವಾಗಿ ದೈನಂದಿನ ಕೆಲಸಗಳು ನಡೆದುಕೊಂಡು ಹೋಗಬೇಕಾಗಿರುವ ವಿಭಾಗಗಳಲ್ಲಿ ತೊಡಗಿಸಿಕೊಳ್ಳಲಾಗುತ್ತದೆ. ಇದಕ್ಕೆ ಅಪವಾದಗಳಿಲ್ಲವೆಂದೇನೂ ಇಲ್ಲ.

ಹೊರಗಿನ ಜಗತ್ತಿನಲ್ಲಿ 'ಭಿನ್ನ ಐಡೆಂಟಿಟಿ'ಗಾಗಿ ಪರದಾಡುತ್ತಾ, ಇಂಡಿಯಾದ ರೂಢಿಗತ ಸಮಾಜ ವ್ಯವಸ್ಥೆಯಲ್ಲಿ 'ಹೊರಗಿನ ದುಡಿಮೆ=ಗಂಡು' ಎನ್ನುವ ಸಮೀಕರಣವನ್ನು ಸುಳ್ಳಾಗಿಸಲು ಹಟತೊಡುತ್ತಾ, ಇಲ್ಲಿಯೂ ತಾನು 'ಅನಿವಾರ್ಯ'ವೆನ್ನುವ ಭಾವ

(ಮುಂದಿನ ಪುಟ ನೋಡಿ)

## ಮಾರ್ಚ್ ತಿಂಗಳ ಪ್ರಶ್ನೆಗೆ ಉತ್ತರ

ಪ್ರಶ್ನೆಯಲ್ಲಿ ಕೊಟ್ಟಿರುವ ಒಂದು ಜೋಡಿ ಲೆಕ್ಕಗಳಲ್ಲಿ ವ್ಯಕ್ತವಾಗಿರುವ ನಾಲ್ಕು ವಿಶೇಷ ಲಕ್ಷಣಗಳನ್ನು ಹೊಂದಿರುವ ಇತರ ಮೂರು ಜೋಡಿ ಲೆಕ್ಕಗಳು ಕೆಳಕಂಡಂತಿವೆ.

| | | |
|---|---|---|
| (ಕ) | 174X32 / 5568 | 96X58 / 5568 |
| (ಖ) | 584X12 / 7008 | 96X73 / 7008 |
| (ಗ) | 532X14 / 7448 | 98X76 / 7448 |

ನಮಗೆ ತಿಳಿದಂತೆ ಇವಲ್ಲದೆ ಬೇರೆ ಯಾವುವೂ ಇಲ್ಲ. ಈ ಜೋಡಿಗಳನ್ನು ಕಂಡು ಹಿಡಿಯುವ ವಿಧಾನವೇನು? ತಾರ್ಕಿಕವಾಗಿ ಸಹಜವೂ ಸುಲಭವೂ ಆದ ಯಾವುದೇ ಮಾರ್ಗ ನಮಗೆ ಗೊತ್ತಿಲ್ಲ. ಸರಿಯಿರಬಹುದೇನೋ ಎಂದು ಮೇಲ್ನೋಟಕ್ಕೆ ಕಂಡ ಸಂಖ್ಯೆಗಳನ್ನು ಗುಣಿಸಿ ನಮಗೆ ಬೇಕಾದ ಜೋಡಿ ಸಿಕ್ಕಿದಾಗ ಅವುಗಳನ್ನು ಸಂಗ್ರಹಿಸಿ ಕೊಡಲಾಗಿದೆ. ಕಷ್ಟಕರವಾದ ಆದರೆ ಉತ್ತರವು ಖಂಡಿತವಾಗಿಯೂ ಲಭ್ಯವಾಗುವಂತಹ ಒಂದು ವಿಧಾನ ಎಂದರೆ: ಮೊದಲು ಒಂದರಿಂದ ಒಂಭತ್ತರವರೆಗಿನ ಅಂಕೆಗಳನ್ನು ಬಳಸಿ (ಅಂಕೆಗಳನ್ನು ಪುನರಾವರ್ತನೆ ಮಾಡದೆ) ಮಾಡಬಹುದಾದ ಮೂರಂಕಿಯ ಮತ್ತು ಎರಡಂಕಿಯ ಎಲ್ಲಾ ಸಂಖ್ಯೆಗಳನ್ನೂ ಪಟ್ಟಿಮಾಡುವುದು. ಎಲ್ಲಾ ಮೂರಂಕಿಯ ಸಂಖ್ಯೆಗಳನ್ನು ಎಲ್ಲಾ ಎರಡಂಕಿಯ ಸಂಖ್ಯೆಗಳೊಂದಿಗೆ ಗುಣಿಸಿ ಪಟ್ಟಿ ಮಾಡುವುದು. ಹಾಗೆಯೇ ಎಲ್ಲಾ ಎರಡಂಕಿಯ ಸಂಖ್ಯೆಯನ್ನು, ಎರಡಂಕಿಯ ಸಂಖ್ಯೆಗಳೊಂದಿಗೆ ಗುಣಿಸಿ ಪಟ್ಟಿ ಮಾಡುವುದು. ಈ ಪಟ್ಟಿಗಳಿಂದ ನಮಗೆ ಬೇಕಾದ ಲಕ್ಷಣಗಳನ್ನು ಹೊಂದಿರುವ ಲೆಕ್ಕಗಳನ್ನು ಹೆಕ್ಕಿ ತೆಗೆಯುವುದು!

ಈ ಕೆಲಸ ಮನುಷ್ಯಮಾತ್ರರು ಮಾಡುವಾಗ ಸಹನೆ ಕಳೆದುಕೊಳ್ಳುವುದರ ಜೊತೆಗೆ, ತಪ್ಪುಗಳೂ ಸಹಜವಾಗಿಯೇ ಉಂಟಾಗುತ್ತವೆ. ಆದರೆ ಗಣಕ ಯಂತ್ರದ ಸಹಾಯದಿಂದ ತಜ್ಞರು ಈ ಕೆಲಸವನ್ನು ಕ್ಷಣಮಾತ್ರದಲ್ಲಿ ಮಾಡಬಲ್ಲರು!

ಕಳೆದ ತಿಂಗಳ ಪ್ರಶ್ನೆಗೆ ಮೈಸೂರಿನಿಂದ ಎಂ. ಎಸ್. ಸೌಮ್ಯ ಎಂಬುವರು ಸರಿಯುತ್ತರಗಳನ್ನು ಕಳಿಸಿದ್ದಾರೆ. ಅವು ಹೀಗಿವೆ :

| | | | |
|---|---|---|---|
| 1. | 134 X29 / 3886 | 2. | 67X58 / 3886 |
| 1. | 146X29 / 4234 | 2. | 73X58 / 4234 |

ಕುಮಾರಿ ಸೌಮ್ಯ ಅವರಿಗೆ 'ಹೊಸತು' ಅಭಿನಂದನೆಗಳನ್ನು ತಿಳಿಸಲು ಹರ್ಷಿಸುತ್ತದೆ.

## ಈ ತಿಂಗಳ ಪ್ರಶ್ನೆ

ಹನ್ನೆರಡು ಚಿನ್ನದ ನಾಣ್ಯಗಳಿವೆ. [illegible] ಪ್ರತಿನಾಣ್ಯವೂ ಇನ್ನೊಂದರ ತದ್ರೂಪ. ಆದರೆ ಇವುಗಳಲ್ಲಿ ಹನ್ನೊಂದು ನಾಣ್ಯಗಳು ಪರಸ್ಪರ ಒಂದೇ ತೂಕ ಉಳ್ಳವುಗಳು. ಒಂದು ನಾಣ್ಯದ ತೂಕ ಮಾತ್ರ ಉಳಿದವುಗಳಿಗಿಂತ ಭಿನ್ನವಾದ ತೂಕ. ಈ ನಾಣ್ಯದ ತೂಕ ಉಳಿದವುಗಳಿಗಿಂತ ತೂಕದಲ್ಲಿ ಹೆಚ್ಚಿರುವುದೊ? ಕಡಿಮೆಯಿರುವುದೊ? ಎಂಬುದು ಗೊತ್ತಿಲ್ಲ. ಈ ವಿಭಿನ್ನವಾದ ನಾಣ್ಯವನ್ನು ಗುರುತಿಸಲು ಮತ್ತು ಉಳಿದ ನಾಣ್ಯಗಳಿಗಿಂತ ಅದು ಭಾರವೋ, ಹಗುರವೋ, ಎಂದು ನಿರ್ಧರಿಸಲು ಒಂದು ತಕ್ಕಡಿಯು ಮಾತ್ರ ಲಭ್ಯ (ತೂಕದ ಬೊಟ್ಟುಗಳಿಲ್ಲ). ನಾಣ್ಯವನ್ನು ತಕ್ಕಡಿಯ ತಟ್ಟೆಯಲ್ಲಿಟ್ಟು ಪರಸ್ಪರ ತೂಗುವ ಪ್ರಕ್ರಿಯೆಯಿಂದ ಅದು ಸಾಧ್ಯ. ಇದಕ್ಕೆ ಬೇಕಾಗುವ ತೂಗುವ ಪ್ರಕ್ರಿಯೆಗಳ ಕನಿಷ್ಠ ಸಂಖ್ಯೆ ಯಾವುದು? ಮತ್ತು ಈ ಪ್ರಕ್ರಿಯೆಯನ್ನು ನಡೆಸುವ ವಿಧಾನವೇನು?

*ಸೂಚನೆ*: ನಾಣ್ಯಗಳನ್ನು ತಕ್ಕಡಿಯ ತಟ್ಟೆಯಲ್ಲಿ ಅನುಕೂಲವೆನಿಸಿದಂತೆ ಇಟ್ಟು ಯಾವ ರಾಶಿಯ ಭಾರ ಇನ್ನೊಂದು ರಾಶಿಯ ಭಾರಕ್ಕಿಂತ ಹೆಚ್ಚು ಸಮ ಅಥವಾ ಕಡಿಮೆಯಿದೆ ಎಂದು ನಿರ್ಧರಿಸಿದಾಗಲೆಲ್ಲ ತೂಗುವ ಒಂದೊಂದು ಪ್ರಕ್ರಿಯೆ ಮುಗಿಯಿತೆಂದಿಟ್ಟುಕೊಳ್ಳಬೇಕು. ○○

*(ಹಿಂದಿನ ಪುಟದಿಂದ)*

ಮೂಡಿಸುವ ಪ್ರಯತ್ನದಲ್ಲಿ ತೊಡಗುತ್ತಾಳೆ. ಆದರೆ ಇಲ್ಲಿಯೂ ವಿಷಾದದ್ದೊಂದು ಕರಿಯ ಛಾಯೆ ಅವಳನ್ನು ಹಿಂಬಾಲಿಸಿರುತ್ತದೆ. ಎಷ್ಟು ಕೆಲಸ ಮಾಡಿದರೂ ತೃಪ್ತರಾಗದ ಬಾಸ್; ಅವಳ ನಿಸ್ಪೃಹ ದುಡಿಮೆಯನ್ನು ವ್ಯಂಗ್ಯಕ್ಕೊಳಗು ಮಾಡುವ ಸಹೋದ್ಯೋಗಿಗಳು.

ಮತ್ತೆ ಮನೆಯ ದಾರಿ.– ಎಲ್ಲೋ ಕೆಲವೊಮ್ಮೆ ಈ ತಾತ್ವಿಕತೆ ಅವಳ ಮುಂದೆ ಸುಳಿದುಬಿಡುತ್ತದೆ– ಯಾಕಾಗಿ ಈ ನಿಸ್ಸಾರ ಬದುಕು; ನಿರ್ಭರ ದುಡಿಮೆ? ಈ ಭಾವ ಕೆಲವು ಸೆಕೆಂಡುಗಳಷ್ಟು ಹೊತ್ತು ಮಾತ್ರ. ಅಷ್ಟರಲ್ಲಾಗಲೇ ಅವಳೊಳಗಿನ ತಾಯಿ ಹೃದಯ ಮಕ್ಕಳನ್ನು ನೆನೆಯುತ್ತಿರುತ್ತದೆ. ಮಗಳು ಬೆಳಿಗ್ಗೆ ತಾನೇ ಮುಂದಿರಿಸಿದ ಬ್ಯಾಗ್‌ನ ಬೇಡಿಕೆ; ಮಗನ ಟ್ಯೂಷನ್‌ನ ಯೋಚನೆ.

- ಸದ್ಯ ತಾನು ಇಷ್ಟಕ್ಕಾದರೂ ಒದಗುತ್ತಿರುವೆನಲ್ಲ ಎಂಬ ಸಮಾಧಾನ ತಂದುಕೊಳ್ಳಲೆತ್ನಿಸುತ್ತಾಳೆ.

ಹೀಗೆ ಯಾಂತ್ರೀಕೃತಗೊಂಡ ಬದುಕಿನಲ್ಲಿ- ಅವಳಿಗಿದ್ದ ಓದುವ, ಬರೆಯುವ, ನೃತ್ಯ-ಸಂಗೀತದ ಹವ್ಯಾಸಗಳೆಲ್ಲ ಬಾಲ್ಯದ ನೆನಪುಗಳಂತೆ, ತವರಿನ ನೆನಪುಗಳಂತೆ ಕೇವಲ ನೆನಪಾಗಿಯಷ್ಟೇ ಉಳಿದುಬಿಡುತ್ತವೆ.

ಕೆ. ಎಸ್. ರೋಹಿಣಿ
ನಂ.೮/೧, ಎರಡನೇ ಮಹಡಿ, ಮೊದಲನೇ ಮುಖ್ಯರಸ್ತೆ,
ವಿನಾಯಕ ನಗರ, ಮೈಸೂರು

## ಕಾಫಿ ಪುರಾಣಂ

### ಅನುಷ್ಠಾನ ವಿಧಿಃ

*ಅಸ್ಯ ಶ್ರೀ ಕಾಫೀದೇವತಾಮಹಾಮಂತ್ರಸ್ಯ*
*ಅಯ್ಯರ್ ಋಷಿಃ। ಕಾಫೀ ಕ್ಲಬ್ ಛಂದಃ ।*
*ಆಂಗ್ಲೇಯ ಭಾಷಾ ದೇವತಾ । ಕಾಂ ಬೀಜಂ ।*
*ಪೀಂ ಶಕ್ತಿಃ । ಶೀ ಕಾಯ ಪೌಡೀತಿ ಕೀಲಕಂ ।*
*ಸಕಲ ಧನಾಪಹರಣಾರ್ಥೇ ವಿನಿಯೋಗಃ ।*
*ಕೋ ಕೋ ಅಂಗುಷ್ಠಾಭ್ಯಾಂ ನಮಃ ।*
*ಟೀ ತರ್ಜನೀಭ್ಯಾಂ ನಮಃ ।*
*ಓವಲ್‌ಟೀನ್ ಮಧ್ಯಮಾಭ್ಯಾಂ ನಮಃ ।*
*ಸಾರಾ ಅನಾಮಿಕಾಭ್ಯಾಂ ನಮಃ ।*
*ಬ್ರಾಂದೀ ಕನಿಷ್ಠಿಕಾಭ್ಯಾಂ ನಮಃ ।*
*ವಿಸ್ಕಿ ಕರತಲಕರಪೃಷ್ಠಾಭ್ಯಾಂ ನಮಃ ।*
*ಉಕುಮಾ ಹೃದಯಾಯ ನಮಃ ।*
*ಇಡ್ಲೀ ಶಿರಸೇ ಸ್ವಾಹಾ ।*
*ಹೆಸರ ದೋಸೇ ಶಿಖಾಯೈವೌಷಟ್ ।*
*ಮೈಸೂರ್‌ಪಾಕ್ ಕವಚಾಯ ಹುಂ*
*ಲಡ್ಡು ಬೂಂದಿ ಪಕೋಡ ನೇತ್ರತ್ರಯಾಯ ವೌಷಟ್ ।*
*ಮಸಾಲವಡೆ ಅಸ್ತ್ರಾಯಫಟ್ ।*
*ಕಾಫೀ ಪ್ಲೇಟ್ ಮಧ್ಯೇ ದಿಗ್ಬಂಧಃ ।*

### ಧ್ಯಾನಂ

*ಜಾತಂ ಲಂಡ ಸುದಾಮ ದಿವ್ಯ ನಗರೇ*
*ಸ್ನೇಹಂ ಚ ಶ್ವೇತಾನನೈಃ ।*
*ಆನೀತಂ ಪರದೇಶವರ್ತಕ ಜನೈಃ*
*ವೀಥ್ಯಾಪಣೇ ವರ್ಧನಂ । ಚೂರ್ಣಂ*
*ಮ್ಲೇಚ್ಛವಧೂಟಿಕಾಕರ ತಲೈಃ ।*
*ಪಾಕಂ ಚ ಜ್ವಾಲಾಮುಖೇ । ಸಂಸೇ*
*ವ್ಯಂ ನವನಾಗರೀಕ ಸುಖಿನೈಃ*
*ವಂದೇ ಚ ಕಾಫೀ ಪ್ರಭುಮ್ ॥*

### ಮೂಲ ಮಂತ್ರಂ

*ಮಹಿಷೀಕ್ಷೀರಾಯ ವಿದ್ಮಹೇ ।*
*ಶರ್ಕರಗುಡಾಯಧೀಮಹಿ ।*
*ತನ್ನೋ ಕಾಫೀ ದೇವತಾ ಪ್ರಚೋದಯಾತ್ ।*

### ವಿಧಿಃ

*ತ್ರಿಕಾಲಮೇಕಕಾಲಂ ವಾ ಜಪೇದ್ವಿದ್ವಾನ್ ಸುನಿಶ್ಚಲಃ !*
*ಪೀತ್ವಾಪೇತ್ವಾಪುನಃ ಪೀತ್ವಾ । ಸ್ವರ್ಗಲೋಕಮವಾಪ್ನುಯಾತ್ ।*
*ಶ್ಲೋ ॥ ಕಾಫೀತೀರ್ಥಂ ಸಮಂ ತೀರ್ಥಂ*
*ಪ್ರಸಾದಮುಪಮಾಸಮಃ । ಅಯ್ಯ*
*ರ್‌ಸದೃಶ ದೇವೇಶಃ ನ ಭೂತೋ ನ ಭವಿಷ್ಯತಿ*
*ಇತಿ ಶ್ರೀ ಕಲಿಮಾಹಾತ್ಮ್ಯೇ ಕಾಫೀ ದೇವತಾ [illegible]*
*ನಾಮ ಪ್ರಥಮೋಮಂಗಲಃ ॥* ([illegible])

ನಾ. ಮ. ಬಸವರಾಜಯ್ಯ
ನಾಗರಹಾಳು ಅಂಚೆ. ಹಚ್ಚೊಳ್ಳಿ, ಬಳ್ಳಾರಿ - ೫೮೩ ೧೧೯


ದಲಿತರ
ಮೇಲೆ
ದೌರ್ಜನ್ಯ


ಚುನಾವಣೆಯಲ್ಲಿ ಬಹುಮತ ಬರದಿದ್ದರೂ ಸರಕಾರ ರಚಿಸಲು ಅವಕಾಶ ಇರಬೇಕು ಅಂತ ಸಂವಿಧಾನ ಬದಲಾಯಿಸಿದರೆ ಹೇಗೆ ?




ಬಂದ ವ್ಯಕ್ತಿ ಹೋದ ವ್ಯಕ್ತಿ




ಭ್ರಷ್ಟರ ವೆಬ್‌ಸೈಟ್!
ನಾವೆಲ್ಲಾ ಭ್ರಷ್ಟರು ಅನ್ನೋದು ಹೀಗೆ ಪತ್ರಿಕೆಗಳಲ್ಲಿ ಗೊತ್ತಾಗುತ್ತೆ ಅಂತ ಗೊತ್ತೇ ಇರಲಿಲ್ಲ

# ಬಹುಉಪಯೋಗಿ ಸಸ್ಯ ಸರ್ಪಗಂಧ



ಭಾರತದಲ್ಲಿ ಪೂರ್ವದಿಂದಲೂ ಸಸ್ಯಜನ್ಯವಾದ ಗಿಡ ಮೂಲಿಕೆಗಳಿಂದ ರೋಗಗಳನ್ನು ನಿವಾರಣೆ ಮಾಡುತ್ತಾ ಬಂದಿದ್ದಾರೆ. ಅಂತಹ ಸಸ್ಯಗಳಲ್ಲಿ ಸರ್ಪಗಂಧವೂ ಒಂದು. ಇದನ್ನು ಸಾಧಾರಣ ತಂಪು ಹವೆಯುಳ್ಳ, ಹೆಚ್ಚು ಮಳೆ ಬೀಳುವ ಹರಿದ್ವರ್ಣದ ಎಲ್ಲಾ ಕಾಡುಗಳಲ್ಲಿಯೂ, ಗುಡ್ಡಗಾಡಿನಲ್ಲಿಯೂ, ಕರ್ನಾಟಕದ ಮಲೆನಾಡು ಪ್ರದೇಶಗಳಾದ ದ. ಕನ್ನಡ, ಉ. ಕನ್ನಡ, ಶಿವಮೊಗ್ಗ, ಕೊಡಗು ಹಾಗೂ ಪಶ್ಚಿಮ ಘಟ್ಟಗಳಲ್ಲಿಯೂ ಹೆಚ್ಚಾಗಿ ಕಾಣಬಹುದು. ಇದು ಮನೆಯ ಅಂಗಳದಲ್ಲೂ ಹಿತ್ತಲಿನಲ್ಲೂ ಯಾವ ಖರ್ಚಿಲ್ಲದೆ ಬೆಳೆಯುತ್ತದೆ. ಇದು ಸುಮಾರು ೨ ರಿಂದ ೩ ಅಡಿ ಎತ್ತರ ಬೆಳೆಯಬಹುದು. ಇದರ ಎಲೆ ೪ ರಿಂದ ೬ ಅಂಗುಲ ಉದ್ದ, ಸುಮಾರು ಒಂದು ವರೆಯಿಂದ ೨ ಅಂಗುಲ ಅಗಲವಿದ್ದು ಹಸಿರು ಹೊಳಪಿನಿಂದಿರುತ್ತದೆ. ಹೂಗಳು ಗೊಂಚಲು ಗೊಂಚಲಾಗಿ ಬಿಡುತ್ತಿದ್ದು ಸುಮಾರು ಅರ್ಧ ಅಂಗುಲ ಉದ್ದವಿದ್ದು ಬಿಳಿಯ ಅಥವಾ ಗುಲಾಬಿ ವರ್ಣದಿಂದಿರುತ್ತವೆ. ಕಾಯಿಗಳು ನಾಟಿ ಬಟಾಣಿಯ ಗಾತ್ರದಲ್ಲಿದ್ದು ಪ್ರಾರಂಭದಲ್ಲಿ ಹಸಿರಾಗಿದ್ದು ಹಣ್ಣಾದಾಗ ಕಪ್ಪು ಬಣ್ಣಕ್ಕೆ ತಿರುಗುತ್ತವೆ. ಇದರ ಬೇರು ಸುಮಾರು ಒಂದೂವರೆ ಅಡಿ ಭೂಮಿಯೊಳಗೆ ಹೋಗುತ್ತದೆ. ಇದು ಬಹಳ ಮೃದುವಾಗಿದ್ದು ಕೈಯಿಂದ ಮುರಿಯಬಹುದಾಗಿದೆ. ಇದರ ಬೇರು ರುಚಿಯಲ್ಲಿ ಬಹಳ ಕಹಿಯಾಗಿರುತ್ತದೆ. ಇದು ''ಅಪೋಸೈನೇಸಿ'' ಸಸ್ಯಕುಟುಂಬಕ್ಕೆ ಸೇರಿದ್ದು ಇದರಲ್ಲಿ ಸಸ್ಯ ಶಾಸ್ತ್ರದ ಪ್ರಕಾರ ಐದು ಪ್ರಭೇದಗಳಿವೆ ಎಂದು ತಿಳಿದುಬಂದಿದೆ. ಕರ್ನಾಟಕದಲ್ಲಿ ರಾವಲ್ಫಿಯ ಸರ್ಪೆಂಟಿಯಾ ಮತ್ತು ರಾವಲ್ಫಿಯ ಕೆನೆಸೆನ್ಸ್ ಎಂಬ ಎರಡು ಮಾದರಿಗಳು ಕಂಡುಬರುತ್ತವೆ. ಆದರೆ ಎರಡರ ಔಷಧೀಯ ಗುಣಗಳೂ ಒಂದೇ ಆಗಿರುತ್ತದೆ. ಇದಕ್ಕೆ ಹದಿನಾರನೆ ಶತಮಾನದ ಜರ್ಮನಿಯ ರಾವುಲ್ಫ್ ಎಂಬ ವೈದ್ಯ ಹಾಗೂ ಸಸ್ಯ ಶಾಸ್ತ್ರಜ್ಞನ ಹೆಸರನ್ನು ಇಡಲಾಗಿದೆ. ಇದಕ್ಕೆ ಕನ್ನಡದಲ್ಲಿ ಸರ್ಪಗಂಧ, ಗರುಡಪಾತಾಳ ಎಂಬ ಹೆಸರಿದೆ. ಹಿಂದಿಯಲ್ಲಿ 'ಹುಚ್ಚರ ಔಷಧಿ' ಎಂಬ ಸ್ವಾರಸ್ಯಕರ ಹೆಸರು ಇದಕ್ಕಿದೆ.

ಆಂಗ್ಲ ಭಾಷೆಯಲ್ಲಿ ಅದನ್ನು 'ಸರ್ಪೆಂಟ್ ವುಡ್' ಎನ್ನುತ್ತಾರೆ. ಇದರ ಬೇರು ಸರ್ಪದ ಆಕಾರದಲ್ಲಿದ್ದು ಸರ್ಪದ ವಿಷ ಇಳಿಸುವುದರಿಂದ ಆಯುರ್ವೇದದ ಪ್ರಕಾರ ಇದನ್ನು ಸರ್ಪಗಂಧ ಎಂದು ಕರೆಯಲಾಗಿದೆ. ನಮ್ಮ ಭಾರತದಲ್ಲಿ ಸುಮಾರು ೩೦೦೦ ವರ್ಷಗಳಿಂದಲೂ ಔಷಧ ರೂಪವಾಗಿ ಉಪಯೋಗಿಸುತ್ತಿದ್ದುದಾಗಿ ಚರಕ ಸಂಹಿತೆ ನಮೂದಿಸಿದೆ. ಒಳ್ಳೆಯ ಔಷಧ ಗುಣವನ್ನು ಹೊಂದಿದ್ದರೂ ಸಹ ೧೯೪೪ರವರೆಗೆ ಇದರ ಬಗ್ಗೆ ಹೆಚ್ಚಿನ ಮಾಹಿತಿ ದೊರೆತಿರಲಿಲ್ಲ. ಸೇನ್ ಮತ್ತು ಬೋಸ್ ಎಂಬುವರು ೧೯೩೧ರಲ್ಲಿ ಇದನ್ನು ಉಪಯೋಗಿಸಿ ರಕ್ತದ ಒತ್ತಡದ ಉಪಶಾಮಕ ಕಂಡುಹಿಡಿದ ಮೇಲೆ ಪಾಶ್ಚಿಮಾತ್ಯ ದೇಶದವರು ಅದನ್ನು ಮೆಚ್ಚಿಕೊಂಡರು. ಇದು ಮಾನವನ ಅನೇಕ ಕಾಯಿಲೆಗಳಿಗೆ ಬಹಳ ಉತ್ತಮವಾದ ಒಂದು ಔಷಧ ಎಂದರೆ ಅತಿಶಯೋಕ್ತಿಯಲ್ಲ. ಈ ಬೇರಿನಲ್ಲಿ ೨೦ಕ್ಕೂ ಹೆಚ್ಚು ನಮೂನೆಯ ರಾಸಾಯನಿಕಗಳ ಕ್ಷಾರ (ಅಲ್ಕಲಾಯಿಡ್ಸ್) ಇರುವುದರಿಂದ ಅದು ಬೇರೆ ಬೇರೆ ರೋಗಗಳನ್ನು ನಿವಾರಣೆ ಮಾಡುವ ಗುಣವನ್ನು ಹೊಂದಿದೆ. ಪ್ರತಿಯೊಂದು ಕ್ಷಾರವೂ ತನ್ನದೇ ಆದ ಪರಿಣಾಮವನ್ನು ಉಂಟುಮಾಡುತ್ತದೆ. ರಕ್ತದ ಒತ್ತಡ ಕಡಿಮೆ ಮಾಡುತ್ತದೆ ಎಂದು ಸಾಮಾನ್ಯವಾಗಿ ಗೊತ್ತು. ಆದರೆ ಈ ಬೇರಿನಲ್ಲಿ ನಿದ್ದೆ ಬರಿಸುವ ಉಪಶಾಮಕ ಸ್ತಂಭನ ಗುಣ ಇರುವುದರಿಂದ ಅದು ಅಪಸ್ಮಾರ, ರಕ್ತದ ಒತ್ತಡ, ಉನ್ಮಾದ, ಚಿತ್ತಭ್ರಮೆ, ಹಾಗೆಯೇ ಕೋಪವನ್ನು [illegible] ಮಾಡುವ ಗುಣ ಹೊಂದಿದೆ. ಇದು ಕಹಿ [illegible] ಹೊಂದಿದ್ದು ಆಯುರ್ವೇದ ವೈದ್ಯಕೀಯ ದೃಷ್ಟಿಯಲ್ಲಿ ನಂಜು, ಕಜ್ಜಿತುರಿ, ಇಸಬು, ಸರ್ಪಸುತ್ತು ಮತ್ತು ಎಲ್ಲಾ ತರಹದ ಚರ್ಮ ರೋಗಗಳನ್ನು ನಿವಾರಿಸುವ ಶಕ್ತಿ ಇದಕ್ಕಿದೆ. ಬ್ಯಾಕ್ಟೀರಿಯಾ, ಬೂಸ್ಟು, ವಿಷ, ವೈರಸ್ ಮುಂತಾದ ರೋಗಗಳ ಮೇಲೆ ಅದು ಅತ್ಯುತ್ತಮ ಪರಿಣಾಮ ಬೀರುತ್ತದೆ. ಈ ಬೇರನ್ನು ನಿಂಬೆಹುಳಿ (ರಸ) ಅಥವಾ ಅಕ್ಕಚ್ಚು (ಅಕ್ಕಿ ತೊಳೆದ ನೀರು)ನಲ್ಲಿ ಗಂಧ ತೇಯ್ದು ಕೇವಲ ಕಡಲೆ ಕಾಳಿನಷ್ಟು ಮಾತ್ರ ಹೊಟ್ಟೆಗೆ ಕೊಡಬೇಕಲ್ಲದೆ, ಸರ್ಪಸುತ್ತಿನ ಮೇಲೆ ಹಚ್ಚುವುದರಿಂದ ಕಾಯಿಲೆಯ ನಿವಾರಣೆಯಾಗುತ್ತದೆ. ಹೊಟ್ಟೆಗೆ ಕೊಡಬೇಕಾದರೆ ಆಹಾರದ ನಂತರವೇ ಕೊಡಬೇಕು. ಮಾನಸಿಕ ಮತ್ತು ನರಮಂಡಲ ರೋಗಗಳನ್ನು ನಿವಾರಿಸುವ ಶಕ್ತಿ ಈ ಔಷಧಕ್ಕಿದೆ. ಹಾವಿನ ಕಡಿತ ಹಾಗೂ ಚೇಳು, ಬೆಕ್ಕು, ಇಲಿ, ವಿಷಜಂತುಗಳ ಕಡಿತಕ್ಕೂ ಇದನ್ನು ಕೊಡಬಹುದು. ಆದರೆ ಒಂದು ಎಚ್ಚರಿಕೆ. ಹಾವಿನ ಕಡಿತಕ್ಕೆ ಕೊಡುವಾಗ ಕಡಿಮೆ ರಕ್ತದೊತ್ತಡ ಇದ್ದವರಿಗೆ ಇದನ್ನು ಕೊಡುವುದು ಸೂಕ್ತವಲ್ಲ. ಕರುಳು ರಿಸರ್‌ಪೈನ್ ಎಂಬ ಕ್ಷಾರವನ್ನು ಹೀರಿಕೊಂಡು ಬೇಗ ಪರಿಣಾಮ ಬೀರುವುದರಿಂದ ಕೆಲವು ಕರುಳು ರೋಗಗಳು ಮತ್ತು ಜ್ವರಗಳಲ್ಲಿ ಗುಣ ಕಂಡುಬಂದಿದೆ. ಸರ್ಪಗಂಧವು ನಿರೋಧಕ, ನಿವಾರಕ ಮತ್ತು ನಂಜು ನಾಶಕವಾಗಿ ಕೆಲಸ ಮಾಡುತ್ತದೆ. ಅಂತೆಯೇ ಆಂಟಿ ಬಯಾಟಿಕ್ ಮತ್ತು ಸ್ಟೀರಾಯಿಡ್‌ಗಳಂತೆ ಸಹ ಕೆಲಸ ಮಾಡುತ್ತದೆ. ಆದರೆ ಇದು ಇತರೆ ಸ್ಟೀರಾಯಿಡ್ಸ್‌ಗಳಂತೆ ದುಷ್ಪರಿಣಾಮ ಬೀರುವುದಿಲ್ಲ. ಇದನ್ನು ಹೋಮಿಯೋಪತಿ ವೈದ್ಯಪದ್ಧತಿ ಪ್ರಕಾರ ಮದರ್ ಟಿಂಚರ್ ಮಾಡಿ ಬಳಸಿದಲ್ಲಿ ಶೀಘ್ರದಲ್ಲಿಯೇ ಹೆಚ್ಚಿನ ಪರಿಣಾಮ ಉಂಟುಮಾಡುತ್ತದೆ. ನಮ್ಮ ಗುರುಗಳಾದ ಕಾನಲೇ ಕೃಷ್ಣಮೂರ್ತಿಯವರು ಈ ಸರ್ಪಗಂಧ ಮೂಲಿಕೆಯನ್ನು ಉಪಯೋಗಿಸಿ ಅನೇಕ ರೋಗಗಳನ್ನೂ ಸರ್ಪಗಳು ಕಡಿದ ನೂರಾರು ಜನರನ್ನೂ ಚಿಕಿತ್ಸೆ ಮಾಡಿ ಗುಣಪಡಿಸಿದ್ದಾರೆ. ಇಂತಹ ಅಮೂಲ್ಯವಾದ ಸಸ್ಯಗಳು ಇಂದಿನ ಸಂದರ್ಭದಲ್ಲಿ ಒಂದು ಕಡೆ ಮರೆತು ಹೋಗುತ್ತಿದ್ದರೆ ಇನ್ನೊಂದು ಕಡೆ ನಶಿಸಿ ಹೋಗುತ್ತಾ ಇವೆ. ಇದಕ್ಕೆ ಮೂಲ ಕಾರಣ ಮಾನವನ [illegible] ದುರಾಸೆಯಿಂದ ಕಾಡನ್ನು ಹಾಳು ಮಾಡುತ್ತಿರುವುದು [illegible] ಅಲ್ಲಿ ನೈಸರ್ಗಿಕವಾಗಿ ಬೆಳೆಯುವ ಗಿಡಮೂಲಿಕೆಗಳು ನಾಶವಾಗುತ್ತಿವೆ. [illegible]

ಡಾ॥ ರಾಮದಾಸ್ (ಆಯು)
[illegible] ಮುಖ್ಯರಸ್ತೆ ಶ್ರೀನಗರ ಬೆಂಗಳೂರು-[illegible]

## ಪ್ರಶ್ನೋತ್ತರ




ಯಾಕೆ ನಮ್ಮಲ್ಲಿ
ಇಷ್ಟೊಂದು ಪಕ್ಷಾಂತರ ?
ಯಾಕೆಂದರೆ ನಮ್ಮಲ್ಲಿ
ಪಕ್ಷಗಳೇ ಲಕ್ಷಾಂತರ



ಮಂಜುನಾಥ್ ಗೀತಾ
ಇ/ಮ ಲೇ। ಹೆಗ್ಗೂರಯ್ಯನ ಸಿದ್ದ ಶೆಟ್ಟ ತೆಂಕಣ ಬೀದಿ,
ತಗಡೂರು, ನಂಜನಗೂಡು ತಾ॥ ಮೈಸೂರು ಜಿಲ್ಲೆ
ಪಿನ್ -೫೭೧ ೧೧೯

# ಅಪಾಯಕಾರಿ ವಿಷದ ವಿಸರ್ಜನೆ

ವೈ. ಜಿ. ಮುರಳಿಧರ

ಔದ್ಯೋಗಿಕವಾಗಿ ಮುಂದುವರಿದ ದೇಶಗಳು ತಮ್ಮಲ್ಲಿ ಉತ್ಪತ್ತಿಯಾಗುವ ವಿಷಪೂರಿತ, ಅಪಾಯಕಾರಿ ಕಸ, ಕಾರ್ಖಾನೆಗಳಿಂದ ಹೊರಬರುವ ಅವಶೇಷ, ಹಾನಿಕರ ಕ್ರಿಮಿನಾಶಕ, ಪ್ಲಾಸ್ಟಿಕ್ ಮತ್ತಿತರ ಬೇಡದ ವಸ್ತುಗಳನ್ನು ವಿಸರ್ಜಿಸಲು ತೃತೀಯ ಜಗತ್ತಿನ ದೇಶಗಳನ್ನು ತಿಪ್ಪೆಗುಂಡಿಯನ್ನಾಗಿ ಬಳಸಿಕೊಳ್ಳುತ್ತಿರುವುದು ಖಚಿತವಾಗಿದೆ. ಈ ಬಗ್ಗೆ ಪ್ರಕಟವಾಗಿರುವ ವರದಿಗಳು ಇದನ್ನು ಪುಷ್ಟೀಕರಿಸುತ್ತವೆ.

ಭಾರತವೂ ಸೇರಿದಂತೆ ಆಫ್ರಿಕಾ, ಉರುಗ್ವೆ, ಬ್ರೆಸಿಲ್, ಅರ್ಜೆಂಟೈನಾ, ಮಲೇಶಿಯ ಮುಂತಾದ ದೇಶಗಳು ಈ ವ್ಯವಹಾರಕ್ಕೆ ಬಲಿಯಾಗಿವೆ. ಈ ಅನೈತಿಕ ವ್ಯವಹಾರ ಬಹಳ ಹಿಂದಿನಿಂದ ನಡೆದುಬಂದಿದ್ದರೂ, ಅದು ಬೆಳಕಿಗೆ ಬಂದದ್ದು ಇಪ್ಪತ್ತು ವರ್ಷಗಳ ಹಿಂದೆ. ಆಫ್ರಿಕಾದ ಕೆಲವು ಕಡೆಗಳಲ್ಲಿ ಅಪಾಯಕಾರಿ ಕಸ ಹಾಗೂ ಅವಶೇಷಗಳನ್ನು ವಿಸರ್ಜಿಸಿದ ವರದಿಯನ್ನು ಅಲ್ಲಿನ ಪತ್ರಿಕೆಗಳು ೧೯೮೮ರಲ್ಲಿ ಪ್ರಕಟಿಸಿದವು. ಆಗ ಈ ವಿಷಯ ಅಂತರರಾಷ್ಟ್ರೀಯ ಗಮನ ಸೆಳೆಯಿತು.

ಒಂದೆರಡು ವರ್ಷಗಳ ಹಿಂದೆ 'ಕಿಯಾನ್ ಸೀ' ಎಂಬ ಹಡಗು ವಿಷಪೂರಿತ ಅವಶೇಷಗಳನ್ನು ಹೊತ್ತು ಫಿಲಡೆಲ್ಫಿಯಾದಿಂದ ಹೊರಟಿತು. ಸುಮಾರು ೨೭ ತಿಂಗಳು ದೇಶದಿಂದ ದೇಶಕ್ಕೆ ಸುತ್ತಾಡಿದರೂ ಯಾವುದೇ ದೇಶದವರು ಇದನ್ನು ಇಳಿಸಿಕೊಳ್ಳಲಿಲ್ಲ. ಪನಾಮಾ ದೇಶವು ಈ ಕಸವನ್ನು ತನ್ನ ಊರಿನ ಒಂದು ರಸ್ತೆ ನಿರ್ಮಾಣದ ಕೆಲಸಕ್ಕೆ ಉಪಯೋಗಿಸಿಕೊಳ್ಳಲು ಒಪ್ಪಿತ್ತು. ಆದರೆ ಇದು ವಿಷಪೂರಿತ, ಅಪಾಯಕಾರಿ ಬೂದಿ ಎಂದು ತಿಳಿದಾಗ ಅದನ್ನು ನಿರಾಕರಿಸಿತು.

ಯಾವ ದೇಶವೂ ಈ ಹಡಗಿನಲ್ಲಿದ್ದ 'ಸರಕನ್ನು' ಒಪ್ಪಿಕೊಳ್ಳದ ಕಾರಣ, ಹಡಗಿನ ಹೆಸರನ್ನು ಎರಡು ಬಾರಿ ಬದಲಾಯಿಸಲಾಯಿತು. ಆದರೆ ಆ ಹೊತ್ತಿಗೆ ಹಡಗಿನಲ್ಲಿದ್ದ ಸರಕಿನ ವಿವರ ಬಹಿರಂಗವಾಗಿತ್ತು. ಇಷ್ಟಾದರೂ ಹಡಗು ದಿಢೀರೆಂದು ಸಿಂಗಪೂರ್‌ನಲ್ಲಿ ಕಾಣಿಸಿಕೊಂಡು ಇದ್ದ ಕಸವನ್ನು ವಿಸರ್ಜಿಸಿತು. ಮುಂದೆ ಏನಾಯಿತು ಎಂದು ಯಾರಿಗೂ ತಿಳಿದಿಲ್ಲ. ಈ ರೀತಿ ಪ್ರಕರಣಗಳು ಆಗಾಗ ಬೆಳಕಿಗೆ ಬರುತ್ತಲೇ ಇವೆ.

ಒಂದು ಅಧ್ಯಯನದ ಪ್ರಕಾರ ಜರ್ಮನಿಯು ವಿಶ್ವದಲ್ಲೇ ಅತ್ಯಂತ ಹೆಚ್ಚು ಅಪಾಯಕಾರಿ ಅವಶೇಷವನ್ನು ರವಾನಿಸುತ್ತಿರುವ ದೇಶ. ಅದು ೧೯೯೨ರಲ್ಲಿ ಸುಮಾರು ಐದು ಲಕ್ಷ ಟನ್ ಬೇಡದ [illegible]ವನ್ನು ಭಾರತಕ್ಕೆ ಕಳುಹಿಸಿದೆ. ಮತ್ತೊಂದು ವರದಿಯ ಪ್ರಕಾರ ಭಾರತವು ೧೯೯೨ರಲ್ಲಿ ೪೦೦೦ ಟನ್ ಪ್ಲಾಸ್ಟಿಕ್ ಕಸವನ್ನು ಆಮದು ಮಾಡಿಕೊಂಡಿದ್ದರೆ, ೧೯೯೩ರಲ್ಲಿ ಈ ಅವಶೇಷದ ಪರಿಮಾಣ ೭೮೫೦ ಟನ್. ಈ ಪ್ಲಾಸ್ಟಿಕ್ ಕಸವನ್ನು ಹೆಚ್ಚಾಗಿ [illegible] ಕೋಟಿ [illegible] ಡಾಲರ್‌ಗಳು ಔದ್ಯೋಗಿಕವಾಗಿ ಮುಂದುವರಿದ ದೇಶಗಳು ಹೆಚ್ಚು ಕಸವನ್ನು ಉತ್ಪತ್ತಿ ಮಾಡುತ್ತವೆ. ೧೯೮೦ರಲ್ಲಿ ಈ ದೇಶಗಳು ಉತ್ಪತ್ತಿ ಮಾಡಿದ ಕಸ ಸುಮಾರು ಎಂಟುನೂರು ಕೋಟಿ ಟನ್. ಅಮೆರಿಕ ದೇಶವೊಂದೇ ಇದರ ಶೇಕಡ ೭೦ರಷ್ಟನ್ನು ಉತ್ಪತ್ತಿ ಮಾಡುತ್ತದೆ. ಈ ದೇಶದಲ್ಲಿ ಸುಮಾರು ಏಳು ಕೋಟಿ ಬ್ಯಾಟರಿಗಳನ್ನು ತಿಪ್ಪೆಗೆ ಎಸೆಯಲಾಗುತ್ತದೆ.

ಹಿಂದುಳಿದ ದೇಶಗಳಲ್ಲಿ ಅಪಾಯಕಾರಿ ಕಸವನ್ನು ವಿಸರ್ಜಿಸಿರುವ ಅಂಕಿ ಅಂಶಗಳನ್ನು ಗಮನಿಸಿದರೆ ಈ ವ್ಯವಹಾರದ ಗಂಭೀರತೆ ಗೋಚರಿಸುತ್ತದೆ. ಈ ಒಂದು ದಶಕದಲ್ಲಿ ಗಯಾನದ ದ್ವೀಪವೊಂದರಲ್ಲಿ ೧೫೦೦೦ ಟನ್ ಅಪಾಯಕಾರಿ (ವಿಷ) ಕಸವನ್ನು ವಿಸರ್ಜಿಸಲಾಗಿದೆ. ಎಲ್ಲವೂ ಕೈಗಾರಿಕಾ ಕೇಂದ್ರಗಳಿಂದ ಬಂದಿದ್ದು. ಇದನ್ನು ಆಮದು ಮಾಡಿಕೊಂಡದ್ದಕ್ಕೆ ಒಂದು ಟನ್‌ಗೆ ೪೦ ಡಾಲರ್ (೧೮೦೦ ರೂ.) ಹಣ ನೀಡಿತು. ತನ್ನ ದೇಶದಲ್ಲೇ ಇದನ್ನು ವಿಸರ್ಜಿಸಿದ್ದರೆ ಅದಕ್ಕೆ ತಗಲುತ್ತಿದ್ದ ವೆಚ್ಚ ಟನ್ ಒಂದಕ್ಕೆ ೧೦೦೦ ಡಾಲರ್‌ಗಳು (೪೫ ಸಾವಿರ ರೂ.). ನೈಜೀರಿಯಾದ ಕೊಕೊ ಎಂಬ ಬಂದರಿನಲ್ಲಿ ಸುಮಾರು ೪೦೦೦ ಮೆಟ್ರಿಕ್ ಟನ್ ದ್ರವ್ಯದ ಕಸವನ್ನು ವಿಸರ್ಜಿಸಲಾಯಿತು. ಈ ದ್ರವ್ಯವು ಇಟಲಿ ದೇಶದಿಂದ ಬಂದಿತ್ತು. ಬಾಲ್ಕನ್ ಪ್ರದೇಶದಲ್ಲಿ ೪೦೦೦ ಟನ್ ಟಾಕ್ಸಿಕ್ ಕಸವನ್ನು ಅಲ್ಲಿನ ನದಿಯೊಂದರಲ್ಲಿ ವಿಸರ್ಜಿಸಲಾಯಿತು. ಈ ನದಿ ಕಪ್ಪು ಸಮುದ್ರವನ್ನು ಸೇರುತ್ತದೆ.

ಅಪಾಯಕಾರಿ ಕಸ ಮತ್ತು ಅವಶೇಷಗಳು ಮಾತ್ರವಲ್ಲ, ಕಳಪೆ ಔಷಧ, ಕೀಟನಾಶಕ ಇತ್ಯಾದಿಯನ್ನು ಸಹ ಬೇರೆ ದೇಶಗಳಿಗೆ ರವಾನಿಸಲಾಗುತ್ತಿದೆ. ಈ ಕೀಟನಾಶಕಗಳು ಅಪಾಯಕಾರಿ ಎಂಬ ಆಧಾರದ ಮೇಲೆ ಅವುಗಳನ್ನು ತಮ್ಮ ದೇಶಗಳಲ್ಲಿ ನಿಷೇಧಿಸಿದ್ದರೂ ಅವನ್ನು ಬೇರೊಂದು ದೇಶಕ್ಕೆ ಸಾಗಿಸಲಾಗುತ್ತಿದೆ. ೧೯೯೧ರಲ್ಲಿ ಅಮೆರಿಕದಿಂದ ಅಪಾಯಕಾರಿ ಅವಶೇಷಗಳನ್ನು ಬಾಂಗ್ಲಾದೇಶದಲ್ಲಿ ವಿಸರ್ಜಿಸಲಾಯಿತು. ಈ ಕಸವನ್ನು ರಸಗೊಬ್ಬರ ಎಂದು ಹೇಳಿದ್ದರಿಂದ ಬಾಂಗ್ಲಾದೇಶದ ರೈತರು ಅದನ್ನು ತಮ್ಮ ಹೊಲಗದ್ದೆಗಳಲ್ಲಿ ಸಿಂಪಡಿಸಿದರು. ಅದರಿಂದ ಅವರ ಆರೋಗ್ಯದ ಮೇಲೆ ಯಾವ ಪರಿಣಾಮ ಉಂಟಾಯಿತೆಂದು ಹೇಳುವವರು ಯಾರು....?



ಬೋಸ್ನಿಯಾದಲ್ಲಿ ನಡೆದ ಯುದ್ಧದ ಸಮಯದಲ್ಲಿ ಅಲ್ಲಿನ ಜನರಿಗೆ, ನಿರಾಶ್ರಿತರಿಗೆ ಅನುದಾನದ ಹೆಸರಿನಲ್ಲಿ ಕೆಲಸಕ್ಕೆ ಬಾರದ, ನಿಷ್ಪ್ರಯೋಜಕ ಔಷಧಿಗಳನ್ನು ನೀಡಿದ ವರದಿಯೂ ಬಂದಿದೆ. ಬ್ರಿಟನ್‌ನಿಂದ ಗುಳಿಗೆಗಳು ಬಂದವು. ತೂಕ ಇಳಿಸಿಕೊಳ್ಳುವುದಕ್ಕಾಗಿ ! ಅಮೆರಿಕದಿಂದ ನೂರಾರು ಲೀಟರ್ ಬಾಯಿ ಮುಕ್ಕಳಿಸುವ ನೀರು ಬೋಸ್ನೀಯಾ ತಲುಪಿದೆ. ವಿಚಿತ್ರವೆಂದರೆ ೧೯೮೭ರಲ್ಲಿ ತಯಾರಾದ ಗರ್ಭನಿರೋಧಕ ಮಾತ್ರೆಗಳೂ ಈ ದುರ್ದಾನದಲ್ಲಿ ಸೇರಿವೆ.

ವಿಷಪೂರಿತ ಕಸದ ವ್ಯವಹಾರ ಇಷ್ಟೊಂದು ಪ್ರಮಾಣದಲ್ಲಿ ಬೆಳೆಯಲು ಕಾರಣ ಔದ್ಯೋಗಿಕವಾಗಿ ಮುಂದುವರಿದಿರುವ ದೇಶಗಳು ವಿಪರೀತವಾಗಿ ಉತ್ಪತ್ತಿ ಮಾಡುವ ಬೇಡದ ವಸ್ತುಗಳು ಮತ್ತು ಅವನ್ನು ತಮ್ಮ ದೇಶದಲ್ಲೇ ವಿಸರ್ಜಿಸಲು ತಗಲುವ ವೆಚ್ಚ. ಕೆಲವು ದೇಶಗಳಲ್ಲಿರುವ ಕಾನೂನಿನ ಪ್ರಕಾರ ಬೇಡದ ವಸ್ತು ಒಮ್ಮೆ ಹೊರಗೆ ಹೋದರೆ ಅದು ಮತ್ತೊಮ್ಮೆ ಒಳಗೆ ಬರುವಂತಿಲ್ಲ, ಅದು ಎಲ್ಲಿದೆಯೋ ಅಲ್ಲೇ ನಾಶಪಡಿಸಬೇಕೆಂದು ನಿಯಮ (ಉದಾ. ಜರ್ಮನಿ). ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಈ ಬೇಡದ ಕಸ, ಕಡ್ಡಿ, ಬೂದಿ ಇತ್ಯಾದಿಯನ್ನು ಪುನರಾವರ್ತಿಸಿದರೆ ತಮಗೆ ಉಪಯೋಗವಾಗುತ್ತದೆಂಬ ಭ್ರಮೆಯಿಂದ ಅವನ್ನು ಆಮದು ಮಾಡಿಕೊಳ್ಳುತ್ತಿವೆ. ಎಲ್ಲಕ್ಕಿಂತ ಹೆಚ್ಚಾಗಿ ಭ್ರಷ್ಟಾಚಾರವು ಇದಕ್ಕೆ ಕಾರಣವಾಗಿದೆ. ನಮ್ಮ ತಲೆಯ ಮೇಲೆ ಕಸ ತುಂಬಿಕೊಳ್ಳುವುದಕ್ಕೆ ದೆಹಲಿಯ ಯಾವನೋ ಮಂತ್ರಿಯೋ ಸರ್ಕಾರಿ ಅಧಿಕಾರಿಯೋ ಭಾರಿ ಲಂಚ ಪಡೆದುಕೊಳ್ಳುತ್ತಾನೆ!

೧೯೭೨ರಲ್ಲಿ ಸ್ಟಾಕ್‌ಹೋಮ್‌ನಲ್ಲಿ ನಡೆದ ವಿಶ್ವಸಂಸ್ಥೆಯ ಮಾನವ ಪರಿಸರ ಅಧಿವೇಶನದಲ್ಲಿ ಕೈಗೊಳ್ಳಲಾದ ಒಂದು ನಿಯಮದ ಪ್ರಕಾರ ಯಾವ ದೇಶವೂ ಮತ್ತೊಂದು ದೇಶದ ಪರಿಸರವನ್ನು ಮಲಿನಗೊಳಿಸುವ ಯಾವುದೇ ಕ್ರಮ ಕೈಗೊಳ್ಳಬಾರದು. ಇದು ಕಾರ್ಯಾಚರಣೆಗೆ ಬಂದಿಲ್ಲ. ತದ್ವಿರುದ್ಧವಾಗಿ ಈಚೆಗೆ ಅಪಾಯಕಾರಿ ಕಸದ ವಿಸರ್ಜನಾ ಅವ್ಯವಹಾರ ಹೆಚ್ಚಾಗಿದೆ. ಕಾರಣ; ವಿಶ್ವಸಂಸ್ಥೆಯ ಈ ನಿಯಮ ಒಂದು ದೋಷದಿಂದ ಕೂಡಿದೆ. ಅದೇನೆಂದರೆ ಸಂಬಂಧಪಟ್ಟ ದೇಶಗಳು

*(ಮುಂದಿನ ಪುಟಕ್ಕೆ)*

ಕುರುಕ್ಷೇತ್ರದಿಂದ ಕಾರ್ಗಿಲ್‌ವರೆಗೆ

# – ಮನರಂಜನೆಯಷ್ಟೇ – ನಾಟಕವಲ್ಲ –

ಒಂದೂವರೆ ಗಂಟೆ ಕಾಲ ಕಳೆದದ್ದು ತಿಳಿಯದಷ್ಟು ವೇಗವಾಗಿ ರಂಗದ ಮೇಲೆ ಚಟುವಟಿಕೆಗಳು ಸಾಗುತ್ತವೆ. '....ಆಲಾಪ್, ನೃತ್ಯ, ಕಾಳಗಕಲೆ, ಕಾವ್ಯ, ನೇರ ಸಂಭಾಷಣೆಗಳು, ಸಮಷ್ಟಿ ಹೇಳಿಕೆಗಳು' ಇವೆಲ್ಲವನ್ನೂ ನಿರ್ದೇಶಕ ಎಂ. ಎಸ್. ಸತ್ಯು ಅವರೇ ಹೇಳುವಂತೆ 'ಅಳವಡಿಸಿಕೊಂಡಿದ್ದಾರೆ'. ಆಕರ್ಷಕವಾಗಿಯೂ, ಕೆಲವೊಮ್ಮೆ 'ಚಕಿತ'ಗೊಳಿಸುವಂತೆಯೂ ಬಳಸಿಕೊಳ್ಳಲಾಗಿದೆ. (ಉದಾಹರಣೆಗೆ ಪ್ರದರ್ಶನದ ಮೊದಲಲ್ಲಿ ತೋರುವ ಕತ್ತಿಯುದ್ಧ). ನೃತ್ಯ ಸಂಯೋಜನೆ (ಹಂಸ ಮೊಯ್ಲಿ ತೋಷ್ನಿವಾಲ್) ತುಂಬ ಸೊಗಸಾಗಿ ಮಾಡಿದ್ದಾರೆ. ಸಂಗೀತ (ದ್ವಾರಕಿ ಕೃಷ್ಣಸ್ವಾಮಿ ಮತ್ತು ತಿರುಮಲೆ ಶ್ರೀನಿವಾಸ್) ಸಂದರ್ಭಕ್ಕೆ ತಕ್ಕಹಾಗೆ ಪರಿಣಾಮಕಾರಿ ಯಾಗಿ ನಿರ್ವಹಿಸಿದ್ದಾರೆ. ಆಲಾಪ್ (ಅದಿತಿ ಉಪಾಧ್ಯ) ಸಾರ್ಥಕವಾಗಿ ಕೂಡಿಸಿದ್ದಾರೆ. ಮತ್ತೆ ಮಿಕ್ಕ ಎಲ್ಲ ವಿಭಾಗಗಳಲ್ಲಿಯೂ ಯಾವ ಕೊರತೆಯನ್ನೂ ಬೊಟ್ಟು ಮಾಡಿ ತೋರಿಸುವಂಥದು ಕಾಣಲಿಲ್ಲ.

ಇಷ್ಟಿದ್ದೂ ಈ ಪ್ರದರ್ಶನವನ್ನು ನಾಟಕ ಎಂದು ಕರೆಯಲು ಮನಸ್ಸು ಒಪ್ಪುವುದಿಲ್ಲ. ಒಳ್ಳೆಯ ಮನರಂಜನೆ ಇರಬಹುದು. ಮಹಾಭಾರತದ ಯುದ್ಧದ ನಂತರದ ಕೆಲವು ಸಂದರ್ಭಗಳ ನಿರೂಪಣೆ ಎನ್ನಬಹುದು. ಕುವೆಂಪು ಅವರ 'ಸ್ಮಶಾನ ಕುರುಕ್ಷೇತ್ರಂ' ನಾಟಕದಲ್ಲಿಯೇ ನಾಟಕೀಯ ಅಂಶಗಳು ಬಹಳಷ್ಟಿಲ್ಲ. ಮೂರು ಪಾತ್ರಗಳನ್ನುಳಿದು ಮಿಕ್ಕ ಯಾರಿಗೂ ತಮ್ಮ ಅಭಿನಯ ಸಾಮರ್ಥ್ಯವನ್ನು ತೋರುವುದಕ್ಕೆ ಅವಕಾಶವೇ ಇಲ್ಲ. ಕೊಂಚಮಟ್ಟಿನ ನಾಟಕೀಯ ಗುಣಗಳಿರುವ ದೃಶ್ಯಗಳಿರುವುದೂ ಈ ಮೂರು ಪಾತ್ರಗಳನ್ನೊಳಗೊಂಡಂತೆಯೇ. ಈ ಪಾತ್ರಗಳೆಂದರೆ ಕೃಷ್ಣ, ಕುಂತಿ ಮತ್ತು ಕೌರವ. ಈ ಪಾತ್ರಗಳನ್ನು ಕ್ರಮವಾಗಿ ಎಸ್. ರಾಜೇಶ್, ಎಂ. ಎಸ್. ವಿದ್ಯಾ, ಎಚ್. ಜಿ. ದತ್ತಾತ್ರೇಯ ಪರಿಣಾಮಕಾರಿಯಾಗಿ ಅಭಿನಯಿಸಿದರು ಕೂಡ.

ಕುವೆಂಪು ಅವರೇ ಮೂಲ ನಾಟಕವನ್ನು 'ಪ್ರತಿಮಾ ಸೃಷ್ಟಿ' ಎಂದು ಕರೆದಿದ್ದಾರೆ. ಯುದ್ಧವೆಂಬುದರ ಹಿಂದೆ ಅಡಕವಾಗಿರುವ 'ದುರಂತ, ಅನ್ಯಾಯ, ಕ್ರೌರ್ಯ, ವಿನಾಶನ... ಸಂಸ್ಕೃತಿಯ ಸಾವು' ಇವುಗಳೆಲ್ಲದರ 'ಪ್ರತಿಮೆ'ಯಾಗಿ ರಚಿತವಾದದ್ದು ಎಂದು ಹೇಳಿದ್ದಾರೆ. ಎಂ. ಎಸ್. ಸತ್ಯು ಅವರು ಈ ನಾಟಕವನ್ನು 'ಕುರುಕ್ಷೇತ್ರದಿಂದ ಕಾರ್ಗಿಲ್‌ವರೆಗೆ' ಎಂದು ಹೆಸರಿಸಿ ಪ್ರದರ್ಶಿಸಿದ್ದಾರೆ. ಈ ಇಡೀ ಪ್ರದರ್ಶನದ ಕುರಿತಾಗಿ ಮೂರು ಅಂಶಗಳನ್ನು ಒತ್ತಿ ಹೇಳಬೇಕಾಗಿದೆ.

ಕುವೆಂಪು ಅವರ ಹಳಗನ್ನಡ ಭಾಷೆಯನ್ನು 'ಆಧುನಿಕ ಆಡುಭಾಷೆಗೆ ಬದಲಾಯಿಸಲಾಗಿದೆ' ಎನ್ನುತ್ತಾರೆ ನಿರ್ದೇಶಕರು. ಈ ಹಿಂದೆ ಡಾ॥ ಜಿ. ಎಸ್. ಶಿವರುದ್ರಪ್ಪ ಅವರು ಸ್ವತಃ 'ಶೂದ್ರ ತಪಸ್ವಿ' ನಾಟಕವನ್ನು ಸರಳೀಕರಿಸಿದ್ದು ಅದನ್ನು ಪ್ರಯೋಗಾತ್ಮಕವಾಗಿ ಪ್ರದರ್ಶಿಸಿಯೂ ಆಗಿತ್ತು. ಮೂಲನಾಟಕದ ಭಾಷೆಯನ್ನು ಸರಳೀಕೃತಗೊಳಿಸುವ ಯತ್ನದ ಬಗ್ಗೆ ನಾನು ಕೊಂಚ ಡೋಲಾಯಮಾನ ಸ್ಥಿತಿಯಲ್ಲಿದ್ದುದು ನಿಜ. ಆದರೆ ಈ ಪ್ರದರ್ಶನ ('ಕುರುಕ್ಷೇತ್ರದಿಂದ...') ನೋಡಿದ ಮೇಲೆ ಒಪ್ಪಂದವೇ ಮಾಡಿಕೊಳ್ಳಬಾರದೆಂದೆನಿಸುವಷ್ಟು ಖಚಿತ ನಿಲುವಿಗೆ ಬಂದಿದ್ದೇನೆ. ಶೇಕ್ಸ್‌ಪಿಯರನ ನಾಟಕಗಳನ್ನು ಹಂದಿನೆಂಟನೇ ಶತಮಾನದಲ್ಲಿ ಸರಳೀಕೃತಗೊಳಿಸುವ ಯತ್ನ ಮಾಡಿದ್ದು, ಸಂಪೂರ್ಣ ಸೋತಿತು. ಕುವೆಂಪು ಅವರ ನಾಟಕವನ್ನು ಕಾರ್ಗಿಲ್‌ವರೆಗೆ ವಿಸ್ತರಿಸ ಹೊರಟಮೇಲೆ ಅನಿವಾರ್ಯವಾಗಿ ಎಂ. ಎಸ್. ಸತ್ಯು ಅವರು ಭಾಷೆಯನ್ನು ಸರಳೀಕರಿಸಬೇಕಾಯಿತು ಎಂಬುದು ಸ್ಪಷ್ಟ. ಈ ಎಲ್ಲ ತೊಂದರೆಯ ಬದಲು ಬೇರೆಯೇ ಸ್ವತಂತ್ರ ನಾಟಕ ರಚಿಸಬಹುದಿತ್ತಲ್ಲ, ಬೇರೆಯವರ ನಾಟಕವನ್ನು ತಿರುಚುವುದರ ಬದಲು? ಎರಡನೆಯ ಅಂಶ: ಸತ್ಯು ಅವರು 'ನಾಟಕ ನನ್ನ ಕಲ್ಪನೆಯಂತೆ' ಎಂಬ ತಮ್ಮ ಟಿಪ್ಪಣಿಯಲ್ಲಿ 'ಕುವೆಂಪು ಅವರು ತಮ್ಮ ನಾಟಕದ ಕ್ರಿಯೆಯನ್ನು ಎರಡನೇ ಮಹಾಯುದ್ಧ ಹಾಗೂ ದೇಶದ ವಿಭಜನೆಯ ಕಾಲಕ್ಕೆ ಸೀಮಿತಗೊಳಿಸಿದ್ದಾರೆ' ಎಂದು ಹೇಳಿದ್ದಾರೆ. ನಾಟಕ ಮೊದಲ ಮುದ್ರಣ ಕಂಡದ್ದು ೧೯೩೧ರಲ್ಲಿ. 'ಸ್ವತಂತ್ರ ಸಂಗ್ರಾಮಂ' ನಡೆಯುತ್ತಿದ್ದು 'ಸಾರ್ವಭೌಮತ್ವಭಂಗಂ'ನಿಂದ 'ಸ್ವತಂತ್ರ ಭಾರತ ರಂಗಂ' ಕನಸಿನವರೆವಿಗೆ ಮಾತ್ರ ಕೃಷ್ಣನ ವರ್ಣನೆ ಸಾಗುತ್ತದೆ. 'ಎರಡನೇ ಮಹಾಯುದ್ಧ'ದ 'ದೇಶ ವಿಭಜನೆ'ಯ ಮಾತುಗಳು ಬರುವುದಿಲ್ಲ. (ನಾನು ಸೂಚಿಸುತ್ತಿರುವುದು ೧೯೮೭ರ ನಾಲ್ಕನೆಯ ಮುದ್ರಣದ ನಾಟಕದ ಪ್ರತಿ).

ಮೂರನೆಯ ಅಂಶ : ನಾಟಕವನ್ನು ಕಾರ್ಗಿಲ್‌ವರೆವಿಗೆ ವಿಸ್ತರಿಸಿದ್ದಾರೆ ಎಂಬ ಕುತೂಹಲದಿಂದ ಹೋದ ಪ್ರೇಕ್ಷಕರಿಗೆ ಆದದ್ದು ನಿರಾಸೆ. ಮಹಾಭಾರತದ ಯುದ್ಧದ ನಂತರ ಆಧುನಿಕ ಯುಗದ ಯುದ್ಧದ ಕುರಿತಾದ ನಾಟಕೀಯ ಅನುಭವಕ್ಕೆ ಹಾತೊರೆದ ಪ್ರೇಕ್ಷಕರಿಗೆ ದೊರಕಿದ್ದು ಕೃಷ್ಣನ ಕಲಿಯುಗ ಭಗವದ್ಗೀತಾವಾಚನ ಮತ್ತು ಪಾಂಡವರದೊಂದು ಗುಂಪು ಒಂದು ಕಡೆ, ಕೌರವರದೊಂದು ಗುಂಪು ಮತ್ತೊಂದು ಕಡೆ ವಿವರಿಸುತ್ತ ಹೋಗುವ ಇಪ್ಪತ್ತನೆಯ ಶತಮಾನದ ವಿಶ್ವದಾದ್ಯಂತ ಆರ್ಥಿಕ, ರಾಜಕೀಯ, ಧಾರ್ಮಿಕ ವಲಯಗಳಲ್ಲಿನ ಅನಾಹುತ, ದುರಂತಗಳ ಏಕತಾನತೆಯ ನಿರೂಪಣೆ.

ಇವು ಯಾವುವೂ ನಾಟಕದ ಆಯಾಮಗಳನ್ನು ಪಡೆದುಕೊಳ್ಳದೆ ನೀರಸ ಪುರಾಣ ಶ್ರವಣ ಮಾಡಿದ ಅನುಭವ ಮಾತ್ರ ನೀಡುತ್ತವೆ ಅಷ್ಟೆ. ನಿರ್ದೇಶಕರ ಕ್ರಿಯಾಶೀಲತೆ, ಕಲ್ಪನಾಶಕ್ತಿಗಳಿಗಿಂತ ಕೊಂಚ ಹೆಚ್ಚಿಗೆ ಜಾಣತನ ಕೆಲಸ ಮಾಡಿದೆ ಎಂಬ ಅನುಮಾನ ಕಾಡಿದ್ದು ನಿಜ.

ಇಷ್ಟೂ ಸಾಲದೆಂಬಂತೆ ಅಂದು ಪ್ರದರ್ಶನ ಮುಗಿದ ನಂತರ (ಫೆಬ್ರವರಿ ೨೭) ನಿರ್ದೇಶಕರು ವಂದನಾರ್ಪಣೆ ಮಾಡುತ್ತಾ ಭಾವವಶರಾಗಿ ಗದ್ಗದ ಕಂಠದಲ್ಲಿ ಕಾಶ್ಮೀರದ ಕುರಿತಾಗಿ ಭಾಷಣವನ್ನೇ ಮಾಡಿದರು – ಕೃಷ್ಣ ತನ್ನ ಕಲಿಯುಗ ಭಗವದ್ಗೀತದಲ್ಲಿ ಬಿಟ್ಟ ಮಾತುಗಳನ್ನು ತುಂಬುವಂತೆ. ಆ ರೀತಿಯ ಭಾಷಣಕ್ಕೆ ಅದು ಸಂದರ್ಭವೂ ಅಲ್ಲ, ಆವಶ್ಯಕತೆಯಂತೂ ಇರಲೇ ಇಲ್ಲ.

ಒಂದೂವರೆ ಗಂಟೆ ಪ್ರೇಕ್ಷಕರನ್ನು ಸಮ್ಮೋಹನಾಸ್ತ್ರದಲ್ಲಿ ಸಿಲುಕಿಸಿ ಕಣ್ಣು ಕಿವಿಗಳಿಗೆ ಅಪ್ಯಾಯಮಾನವಾಗಿದ್ದ ಪ್ರದರ್ಶನ ನೀಡಿದ್ದಷ್ಟೇ ಅಂದಿನ ಪ್ರದರ್ಶನದ ಸಾಧನೆ.

**ಪ್ರೊ॥ ಜಿ. ಕೆ. ಗೋವಿಂದರಾವ್**
ನಂ. ೧೬೧, ೧ನೇ ಮಹಡಿ, ೩೬ನೇ 'ಎ' ಕ್ರಾಸ್, ೭ನೇ ಬ್ಲಾಕ್,
ಜಯನಗರ, ಬೆಂಗಳೂರು - ೫೬೦ ೦೮೨

---

*(ಹಿಂದಿನ ಪುಟದಿಂದ)*

ಒಪ್ಪಿದರೆ ಕಸವನ್ನು ಆ ದೇಶಗಳಲ್ಲಿ ವಿಸರ್ಜಿಸಬಹುದು.

ಇಂತಹ ವ್ಯವಹಾರಗಳನ್ನು ತಡೆಗಟ್ಟಲು ೧೯೮೯ರಲ್ಲಿ ಒಂದು ಮಹತ್ವದ ನಿರ್ಧಾರ ಕೈಗೊಳ್ಳಲಾಯಿತು. ಬ್ಯಾಸೆಲ್ ಅಧಿವೇಶನ ಎಂದು ಕರೆಯಲ್ಪಟ್ಟಿರುವ ಈ ಒಡಂಬಡಿಕೆಗೆ ವಿಶ್ವದ ೧೧೬ ದೇಶಗಳು ಒಪ್ಪಿಗೆ ಸೂಚಿಸಿದ್ದು ಈವರೆಗೆ ೬೭ ದೇಶಗಳು ಸಹಿ ಹಾಕಿವೆ. ತಾನು ಪರಿಸರ ಉಳಿಸುವ ಚಾಂಪಿಯನ್ ಎಂದು ಹೇಳಿಕೊಳ್ಳುವ ಅಮೆರಿಕ ಈ ಒಡಂಬಡಿಕೆಗೆ ಸಹಿ ಹಾಕಿಲ್ಲ ಎಂಬುದು ಇಲ್ಲಿ ಗಮನಾರ್ಹ. ಬ್ಯಾಸೆಲ್ ಅಧಿವೇಶನದ ಲೋಪಗಳನ್ನು ಇಲ್ಲಿ ಗಮನಿಸಬೇಕು. ಇಲ್ಲಿ ಅಣುಸ್ಥಾವರದ ಅವಶೇಷಗಳ ಬಗ್ಗೆ ಯಾವುದೇ ಉಲ್ಲೇಖವಿಲ್ಲವೆಂಬುದು ಇಂದು ದೊಡ್ಡ ಕೊರತೆ.

ಭಾರತವೂ ಸಹ ಈ ವಿಷಯದಲ್ಲಿ ಒಂದು ನಿಯಮವನ್ನು ಜಾರಿಗೊಳಿಸಿದೆ. ಪರಿಸರ ಸಂರಕ್ಷಣಾ ಕಾಯ್ದೆಯ ಅಡಿಯಲ್ಲಿ ಅಪಾಯಕಾರಿ ಕಸದ ನಿರ್ವಹಣೆಯ ನಿಯಮವೊಂದು ೧೯೮೯ರಿಂದ ಅನುಷ್ಠಾನಕ್ಕೆ ಬಂದಿದೆ. ಈ ನಿಯಮ ಅಪಾಯಕಾರಿ ಅವಶೇಷಗಳ ಆಮದನ್ನು ಸಂಪೂರ್ಣವಾಗಿ ನಿಷೇಧಿಸಿಲ್ಲ . ಕೆಲವೊಂದು ರೀತಿಯ ಕಸ, ಅವಶೇಷಗಳನ್ನು ಮಾತ್ರ ಗುರುತಿಸಿ, ಅದರ ವ್ಯವಹಾರವನ್ನು ನಿಯಂತ್ರಿಸುತ್ತದೆ. ಕೆಲವೊಂದು ಕೈಗಾರಿಕಾ ಸಂಸ್ಥೆಗಳು ಈ ವ್ಯವಹಾರವನ್ನು ಸಂಪೂರ್ಣವಾಗಿ ನಿಷೇಧಿಸಬಾರದೆಂದು ಆಗ್ರಹಪಡಿಸಿವೆ. ಇದರಿಂದ ದೇಶದ ಆರ್ಥಿಕ ಪ್ರಗತಿಗೆ ಧಕ್ಕೆ ಉಂಟಾಗುತ್ತದೆ ಎಂಬುದು ಅವರ ಅಭಿಮತ !

ಜನರ ಆರೋಗ್ಯವನ್ನು ಹಾಳುಮಾಡುವ 'ಪ್ರಗತಿ' [illegible] ಬಂಡವಾಳಿಗರಿಗೆ ಲಾಭ [illegible] ವಿಪರ್ಯಾಸ.

# ಪಿ. ಬಿ. ಧುತ್ತರಗಿ ಅವರಿಗೆ ಎತ್ತರದ ಪ್ರಶಸ್ತಿ

ಹೊಸವರ್ಷದ ಅದರಲ್ಲೂ ಹೊಸ ಸಹಸ್ರಮಾನದ ಆರಂಭದಲ್ಲಿ ರಂಗಭೂಮಿಯವರೆಲ್ಲ ಖುಷಿಪಡುವ ಸಂಗತಿ ಎಂದರೆ ಈ ಬಾರಿಯ 'ಗುಬ್ಬಿ ವೀರಣ್ಣ' ಪ್ರಶಸ್ತಿ, ವೃತ್ತಿ ರಂಗಭೂಮಿಗಾಗಿ ದುಡಿದ ಪಿ. ಬಿ. ಧುತ್ತರಗಿ ಅವರಿಗೆ ಅದು ಸಂದಿತು ಎಂಬುದು.

ಸುಮಾರು ನಾಲ್ಕು ದಶಕಗಳವರೆಗೆ ವೃತ್ತಿ ರಂಗಭೂಮಿಗಾಗಿ ದುಡಿದ ಧುತ್ತರಗಿಯವರಿಗೆ ಈ ಪ್ರಶಸ್ತಿ ನೀಡಿದ್ದು ರಂಗಭೂಮಿಯ ಕಲಾವಿದರಿಗೆಲ್ಲ ಹೆಗ್ಗಳಿಕೆಯ ವಿಷಯವಾಗಿದೆ. ಏಕೆಂದರೆ, ಗುಬ್ಬಿ ವೀರಣ್ಣ ಪ್ರಶಸ್ತಿ ವೃತ್ತಿ ರಂಗಭೂಮಿಗಾಗಿ ದುಡಿದವರಿಗೆ ಸಿಗಬೇಕೆಂಬ ತಜ್ಞರ ಅಭಿಮತಕ್ಕೆ ಈ ಬಾರಿ ಮನ್ನಣೆ ಸಿಕ್ಕಿದಂತಾಗಿದೆ. ವೃತ್ತಿ ರಂಗಭೂಮಿಯಲ್ಲಿ ಧುತ್ತರಗಿ ಹೆಸರಾಂತರು. ನಾಟಕ ಕಾರರಾಗಿ, ನಟರಾಗಿ, ನಿರ್ದೇಶಕರಾಗಿ, ಕಂಪೆನಿ ಮಾಲೀಕರಾಗಿ ದುಡಿದ ಅವರಿಗೆ ಈಗ ಎಪ್ಪತ್ತೊಂದು ವರ್ಷ. ಆದರೆ "ವಯಸ್ಸು ನನ್ನ ದೇಹಕ್ಕೆ ಆಗೇತ್ರಿ, ನನಗಲ್ಲ" ಎನ್ನುವ ಅವರಲ್ಲಿ ರಂಗಭೂಮಿಯ ಬಗ್ಗೆ ಬತ್ತದ ಉತ್ಸಾಹ.



ಪುಂಡಲೀಕಪ್ಪ ಬಸನಗೌಡ ಧುತ್ತರಗಿ ಅವರು ೧೯೨೯ರ ಜೂನ್ ೧೫ರಂದು ಬಾಗಲಕೋಟೆ ಜಿಲ್ಲೆಯ ಹುನಗುಂದ ತಾಲ್ಲೂಕಿನ ಸೂಳಿಬಾವಿಯಲ್ಲಿ ಬಡ ನೇಕಾರರ ಕುಟುಂಬದಲ್ಲಿ ಜನಿಸಿದರು. ಮನೆಯಲ್ಲಿ ವೃತ್ತಿ ನೇಕಾರಿಕೆ. ಆದರೆ ಅವರೆಂದೂ ನೇಯಲಿಲ್ಲ. ಅವರು ನೇದಿದ್ದು ನಾಟಕಗಳನ್ನು. ಅವರ ತಂದೆ ಬಸವನಗೌಡರು ಹಂದಿಗನೂರ ಸಿದ್ರಾಮಪ್ಪ ಅವರ ನಾಟಕ ಕಂಪೆನಿಯಲ್ಲಿ ನಟರಾಗಿದ್ದರು. ತಂದೆಯ ಪ್ರಭಾವ ಮಗನ ಮೇಲಾಯಿತು. ಆಗೀಗ ಶಾಲೆಗೆ ಹೋಗುತ್ತಿದ್ದರೂ ಆರನೇ ತರಗತಿಗೆ ಶಾಶ್ವತವಾಗಿ ಶಾಲೆಗೆ ಚಕ್ಕರ್ ಹೊಡೆಯಬೇಕಾಯಿತು. ಅದಕ್ಕೆ ಅವರು ಕೊಡುವ ಕಾರಣ "ದೇಶಕ್ಕ ಸ್ವಾತಂತ್ರ್ಯ ಬರುವ ಮೊದಲು ಬರಗಾಲ ಬಂದಿತ್ರಿ, ಆಗ ಬಡತನಕ್ಕ ಮುನ್ಯಾಗ ಸಾಲಿ [illegible]."

**ನಾಟಕ ರಂಗಕ್ಕೆ ಪ್ರವೇಶ** : ಬಾಲ್ಯದಿಂದಲೇ ನಾಟಕದ ಗೀಳು ಹಚ್ಚಿಕೊಂಡು ತಮ್ಮ ಬಡತನದ ನೇಕಾರಿಕೆಯ ಬದುಕನ್ನು [illegible] ನಾಟಕ ಬರೆದು ರಂಗಕ್ಷೇತ್ರಕ್ಕೆ ಕಾಲಿಟ್ಟಿದ್ದ ಅವರು ಇಂದು ಮನೆ ಮಾತಾಗಿದ್ದಾರೆ. ಚಿಕ್ಕವರಾಗಿದ್ದಾಗ ಒಮ್ಮೆ ನೇಕಾರಿಕೆ [illegible] ಅವರು ತಾವೇ ಅವರಲ್ಲಿ ಅನುಭವಿಸಿದ ನೋವನ್ನೇ ಒಂದು ನಾಟಕ ಬರೆದು ಪ್ರಯೋಗಿಸಿದಾಗ ಅದಕ್ಕೆ ಸಿಕ್ಕ ಪ್ರೋತ್ಸಾಹದಿಂದ ನಾಟಕ ಬದುಕಿಗೆ ತಮ್ಮನ್ನು ಅರ್ಪಿಸಿಕೊಳ್ಳಲು ಕಾರಣ ವಾಯಿತೆನ್ನುತ್ತಾರೆ.

ಆಗಿನ ಅನೇಕ ಕಂಪೆನಿಗಳು ಇವರ ನಾಟಕಗಳನ್ನು ಅತ್ಯಂತ ಯಶಸ್ವಿಯಾಗಿ ಪ್ರಯೋಗಿಸಿ ಹಣ ಸಂಪಾದಿಸಿಕೊಂಡವು. ಉತ್ತರ ಕರ್ನಾಟಕದಲ್ಲಿ ಬಹುತೇಕ ಹಳ್ಳಿಗಳಲ್ಲಿ ಇವರ ನಾಟಕಗಳು ಪ್ರಯೋಗಗೊಂಡಿವೆ. ಸ್ವತಃ ನಟರಾದ ಪುಂಡಲೀಕಪ್ಪನವರು ತಾವೇ ಒಂದು ಕಂಪೆನಿ ತೆಗೆದು ಕೈಸುಟ್ಟುಕೊಂಡವರಾಗಿದ್ದಾರೆ. ಬಾಲ್ಯದಿಂದಲೇ ನಾಟಕರಂಗ ಪ್ರವೇಶಿಸಿದ ಇವರು ಈಗಲೂ ಬೇರೆ ಉದ್ಯೋಗದ ಅವಲಂಬನೆ ಮಾಡಿಲ್ಲ. ಧುತ್ತರಗಿ ಅವರು ಆಯ್ದುಕೊಳ್ಳುವ ನಾಟಕದ ಕಥಾವಸ್ತು ಜನರಿಗೆ ನೇರವಾಗಿ ತಲುಪಿ ಪರಿಣಾಮ ಬೀರುವಂತಿರುತ್ತದೆ. ಸಾಹಿತ್ಯ ಗೊಂದಲವಿಲ್ಲದೆ ಪ್ರೇಕ್ಷಕ ರನ್ನು ತಟ್ಟಿ ಹೊಸ ವಿಚಾರಕ್ಕೆ ತೊಡಗಿಸುವಂತಿರುತ್ತದೆ. ಹೀಗಾಗಿ ಇವರ ನಾಟಕಗಳು ಜನಪ್ರಿಯಗೊಳ್ಳಲು ಕಾರಣವಾಗಿದೆ.

ಅವರು ಒಟ್ಟು ೫೫ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಸಾಮಾಜಿಕ, ಪೌರಾಣಿಕ, ಧಾರ್ಮಿಕ ಹಾಗೂ ಐತಿಹಾಸಿಕ ಪ್ರಕಾರಗಳೆಲ್ಲಾ ಸೇರಿವೆ. ಹೆಚ್ಚಾಗಿ ಸಾಮಾಜಿಕ ನಾಟಕಗಳನ್ನು ರಚಿಸಿದ್ದಾರೆ.

ಚಿತ್ರ-ಲೇಖನ : **ಹನುಮಂತಪ್ಪ ಎನ್. ಅಂಡಗಿ**

**ಸಾಮಾಜಿಕ ನಾಟಕಗಳು** : ತಾಯಿ ಕರುಳು, ಮದುಮಗಳು, ಮಲಮಗಳು, ಅತ್ತೆಗೆ ತಕ್ಕ ಸೊಸೆ, ಇಳ್ಕಲ್ ಸೀರೆ, ಸುಖದ ಸುಪ್ಪತ್ತಿಗೆ ಮುಂತಾದವು. ಮಲಮಗಳು, ತಾಯಿ ಕರುಳು, ಇಳ್ಕಲ್ ಸೀರೆ ನಾಟಕಗಳು ಅಂತರ ರಾಜ್ಯದಲ್ಲಿಯೂ ಖ್ಯಾತಿಗೊಂಡಿವೆ.

**ಐತಿಹಾಸಿಕ ನಾಟಕಗಳು** : ಕಿತ್ತೂರು ಚೆನ್ನಮ್ಮ, ಛತ್ರಪತಿ ಶಿವಾಜಿ ಮುಂತಾದವುಗಳು.

**ಪೌರಾಣಿಕ ನಾಟಕಗಳು** : ಹರಿಗಿಂಚೆ, ದೇವಿ ಮಹಾತ್ಮೆ ಮುಂತಾದವು.

**ಧಾರ್ಮಿಕ ನಾಟಕಗಳು** : ಪುರಂದರದಾಸ, ಚೆನ್ನಬಸವಸ್ವಾಮಿ ಮುಂತಾದವು.

**ಸಿನೆಮಾಗಳಾದ ನಾಟಕಗಳು** : 'ಚಿಕ್ಕ ಸೊಸೆ' ಎಂಬ ನಾಟಕ 'ಸೊಸೆ ತಂದ ಸೌಭಾಗ್ಯ' ಎಂಬ ಹೆಸರಿನ ಚಲನಚಿತ್ರವಾಯಿತು. 'ಮಲಮಗಳು', 'ಮುದುಕನ ಮದುವೆ' ಎಂಬ ಹೆಸರಿನಲ್ಲಿ ಚಲನಚಿತ್ರ ನಟ ಶ್ರೀನಿವಾಸ ಮೂರ್ತಿಯವರು ಕಿರುತೆರೆಯಲ್ಲಿ ತಂದಿದ್ದಾರೆ. ಅವರ ನಾಟಕಗಳು ಎಲ್ಲೆಡೆ ಜನಪ್ರಿಯ ಗೊಂಡು ಪ್ರಯೋಗಗಳಾಗುವಾಗ 'ಸಂಪತ್ತಿಗೆ ಸವಾಲ್' ಸುಮಾರು ಎರಡು ಸಾವಿರ ಪ್ರಯೋಗಗಳನ್ನು ಕಂಡಿತು. ಗೋಕಾಕದ ಶಾರದಾ ಸಂಗೀತ ನಾಟಕ ಮಂಡಳಿ ಕನಕಪುರದಲ್ಲಿ 'ಸಂಪತ್ತಿಗೆ ಸವಾಲ್' ನಾಟಕ ಆಡುವಾಗ ವರನಟ ಡಾ|| ರಾಜ್‌ಕುಮಾರ್ ನಾಟಕ ನೋಡಿ ಮೆಚ್ಚಿಕೊಂಡರು. ಮರುದಿನ ಕರೆಸಿ ಚಲನಚಿತ್ರವಾಗಿ ಮಾಡುವ ಬಯಕೆ ವ್ಯಕ್ತಪಡಿಸಿ ಅದರ ಹಕ್ಕನ್ನು ಪಡೆದುಕೊಂಡರು ಎಂಬುದನ್ನು ನೆನೆಸಿಕೊಳ್ಳುವಾಗ ಧುತ್ತರಗಿ ಅವರಿಗೆ ಎಲ್ಲಿಲ್ಲದ ಖುಷಿ.

**ರಂಗಭೂಮಿ ಇತಿಹಾಸದ ದಾಖಲೆ** : 'ಸಂಪತ್ತಿಗೆ ಸವಾಲ್' ನಾಟಕ ಜನಪ್ರಿಯವಾಗಿ ಯಶಸ್ವಿಗೊಂಡರೆ ಅದೇ ಹೆಸರಿನ ಚಲನಚಿತ್ರವಾಗಿಯೂ ಜನಪ್ರಿಯ ಗೊಂಡಿತು. ನಂತರ ತೆಲುಗು, ತಮಿಳು, ಮಲೆಯಾಳಿ ಭಾಷೆಗಳಲ್ಲಿಯೂ ಚಿತ್ರವಾಯಿತು. ಇದು ವೃತ್ತಿ ರಂಗಭೂಮಿಯ ಇತಿಹಾಸದಲ್ಲೇ ದಾಖಲೆಯಾಯಿತು. ಇದರೊಂದಿಗೆ 'ಅತ್ತೆಗೆ ತಕ್ಕ ಸೊಸೆ' ನಾಟಕವು ಕೂಡ ಚಲನಚಿತ್ರವಾಗಿ ಯಶಸ್ವಿಯಾಯಿತು.

**ಪುಸ್ತಕ ಪ್ರೇಮಿ ಧುತ್ತರಗಿ** : ಮೊದಲಿನಿಂದಲೂ ಸಾಹಿತ್ಯಾಸಕ್ತರಾದ ಧುತ್ತರಗಿ ಯಾವಾಗಲೂ ಪುಸ್ತಕಗಳನ್ನು ಓದುತ್ತಲೇ ಇರುತ್ತಾರೆ. ಕುವೆಂಪು ಸಾಹಿತ್ಯವನ್ನು

ಸಂಪೂರ್ಣ ಅಧ್ಯಯನ ಮಾಡಿ ಅದಕ್ಕೆ ಮಾರು ಹೋಗಿರುವ ಅವರು ತಮ್ಮ ನಾಟಕದಲ್ಲಿ ಆ ಪ್ರಭಾವವೇ ಹೆಚ್ಚಾಗಿರುವುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಳ್ಳುತ್ತಾರೆ.

**ಕುಟುಂಬವೇ ರಂಗಭೂಮಿ** : ಬರೀ ಪುಂಡಲೀಕಪ್ಪ ನವರಷ್ಟೇ ಕಲಾವಿದರಲ್ಲ, ಇವರ ಪತ್ನಿ ಸರೋಜಮ್ಮನವರು ಒಂದು ಕಾಲಘಟ್ಟದಲ್ಲಿ ರಂಗಭೂಮಿಯ 'ಸಾಮ್ರಾಜ್ಞಿ' ಎನಿಸಿದ್ದರು. ಸರೋಜಮ್ಮನವರ ಕಿತ್ತೂರು ಚೆನ್ನಮ್ಮನ ಪಾತ್ರ ನೋಡಿದವರ ಚಿತ್ತಭಿತ್ತಿಯಲ್ಲಿ ಸ್ಥಿರವಾಗುವಂತಿತ್ತು. ಸರೋಜಮ್ಮನವರು ತಮ್ಮ ಕಂಚಿನ ಕಂಠದಿಂದ ''ಜಗ ಜಾಲ ಪಾಲಂ ಜನ ಸೌಖ್ಯ ಶೀಲಂ'' ನಾಂದಿ ಹಾಡಿದರೆ ಆ ಕಳೆಯಿಂದಲೇ ನಾಟಕ ರಂಗು ಪಡೆಯುತ್ತಿತ್ತು. ಈ ಮುಪ್ಪಿನ ವಯಸ್ಸಿನಲ್ಲಿಯೂ ಸರೋಜಮ್ಮನವರು ನಾಟಕ ನಿರ್ದೇಶಿಸುತ್ತಾರೆ. ಅನೇಕ ಯುವಕರಿಗೆ ಮಾರ್ಗದರ್ಶನ ನೀಡುತ್ತಾರೆ. ಇವರ ಮಗಳು ಸಹಿತ ಸಂಗೀತದಲ್ಲಿ ಎಂ. ಎ. ಪದವಿ ಪಡೆದಿದ್ದಾರೆ. ಮಗ ಒಳ್ಳೆಯ ಚಿತ್ರ ಕಲಾವಿದ. ಪಿ. ಬಿ. ಧುತ್ತರಗಿಯವರ ನಾಟಕಗಳನ್ನು ಕುರಿತೇ ಈಗ ಪಿಎಚ್.ಡಿ.ಗಾಗಿ ಕುಷ್ಟಗಿಯ ಪೂಜಾರಿ ಎನ್ನುವವರು ಅಧ್ಯಯನ ನಡೆಸುತ್ತಿದ್ದಾರೆ. ಧುತ್ತರಗಿ ಅವರಿಗೆ ಅಭಿನಂದನೆ ಸಲ್ಲಿಸಿ 'ಹೊಸತು' ಅವರಿಗೆ ಕೆಲವು ಪ್ರಶ್ನೆಗಳನ್ನು ಹಾಕಿ ಪ್ರತಿಕ್ರಿಯೆ ಪಡೆಯಿತು.

**ಪ್ರಶ್ನೆ**: ಪ್ರಶಸ್ತಿ ಸಿಕ್ಕ ಬಗ್ಗೆ ನಿಮಗೆ ಏನೆನಿಸುತ್ತದೆ ?

**ಧುತ್ತರಗಿ** : ಆ ಫಲ ಪಡೆಯಲು ನನಗೆ ಸಂತೋಷವೆನಿಸುತ್ತಿದೆ. ಹಿಂದಿನ ಕಲಾವಿದರು ಏನೂ ಕಾಣ್ದ ಸತ್ತು ಹ್ವಾದ್ರು, ನಾವು ಅವರ ತ್ಯಾಗಕ್ಕ

> *''ಸರ್ವರಿಗೆ ಸಮಬಾಳು । ಸರ್ವರಿಗೆ ಸಮಪಾಲು''*
> *ಎಂಬ ನವಯುಗವಾಣಿ ಘೋಷಿಸಿದೆ ಕೇಳಿ ।*
> *ಯುಗಯುಗದ ದಾರಿದ್ರ್ಯ ಭಾರದಿಂ ಬೆನ್ನುಬಾಗಿ*
> *ಗೋಳಿಡುವ ಬಡಜನರೆ, ಏಳಿರೈ, ಏಳಿ !*
> *ಕಂಗೆಟ್ಟ ಸೋದರರೆ, ಬರುತಿಹಳು ಕಾಣಿರೈ*
> *ದಾನವರ ಸೀಳಿ ಆದೋ ವಿಪ್ಲವದ ಕಾಳಿ !*
>
> **-ಕುವೆಂಪು**

ಬಾಧ್ಯಸ್ಥರಾಗಿವ್ರಿ, ನಿಜ್ವಾಗೂ ಈ ಪ್ರಶಸ್ತೀನ ನಾನು ಅವ್ರ ನೆನಪಿನ್ಯಾಗ ಸ್ವೀಕರಿಸ್ತೀನ್ರಿ.

**ಪ್ರ** : ನಿಮಗೆ ನಾಟಕ ಕ್ಷೇತ್ರ ಇಚ್ಛೆಯಾದದ್ದು ಹೇಗೆ?

**ಧು** : ನಮ್ಮ ತಂದೆ ಬಸನಗೌಡರು ಸಿದ್ರಾಮಪ್ಪನವರ ನಾಟಕ ಕಂಪೆನಿಯಲ್ಲಿ ಸ್ವತಃ ನಾಟಕಗಳನ್ನು ಮಾಡುವ ನಟರಾಗಿದ್ದರು. ಅವರ ಒಡನಾಟದೊಂದಿಗೆ ಸಹಜವಾಗಿ ಈ ಕ್ಷೇತ್ರದ ಕಡೆಗೆ ಒಲವು ತೋರಿಸಿದೆ.

**ಪ್ರ** : ನಾಟಕ ಕ್ಷೇತ್ರಕ್ಕೆ ಸರ್ಕಾರ ಮಾಡಬೇಕಾದ ಕೆಲಸವೇನು?

**ಧು** : ನಾಟಕ ಆಡಬೇಕಾದಾಗ ತೆಗೆಸಬೇಕಾದ ಪರವಾನಿಗೆ ರದ್ದಾಗಬೇಕು. ನಾಟಕ ಕಂಪೆನಿಗಳಿಗೆ ರಿಯಾಯಿತಿ ದರದಲ್ಲಿ ವಿದ್ಯುತ್ ಒದಗಿಸಬೇಕು. ರಂಗಭೂಮಿಯ ಕಲಾವಿದರು ಬಡತನದ ಬವಣೆಯಲ್ಲಿ ಬಳಲುತ್ತಿದ್ದಾರೆ. ಅವರ ಅಭಿವೃದ್ಧಿಯ ಕಡೆಗೆ ಸರ್ಕಾರ ಗಮನಕೊಡಬೇಕು. ರಂಗಭೂಮಿಯ ಅಭಿವೃದ್ಧಿಗಾಗಿ ಕಾರ್ಯಸೂಚಿಯೊಂದನ್ನು ಸರ್ಕಾರ ಸಿದ್ಧಪಡಿಸಬೇಕು.

**ಪ್ರ** : ಟಿ.ವಿ. ಕಾಲವಿದು. ರಂಗಭೂಮಿ ಉಳಿಯಬಹುದೇ?

**ಧು** : ನಾಟಕಕ್ಕೆ ಆಧುನಿಕವಾದ ರಂಗ ಸಲಕರಣೆ ಬಳಸಬೇಕು. ಒಳ್ಳೆಯ ವಸ್ತು, ಅಭಿನಯ ಮುಖ್ಯವಾಗಿರಬೇಕು. ಹಿಂದೇ ಸಿನೆಮಾಗಳು ನಾಟಕಗಳನ್ನು ಅನುಸರಿಸುತ್ತಿದ್ದವು. ಆದರೆ ಇಂದು ಸಿನೆಮಾಗಳನ್ನು ನಾಟಕಗಳು ಅನುಸರಿಸುತ್ತಿರುವುದು ವಿಪರ್ಯಾಸದ ಸಂಗತಿಯಾಗಿದೆ. ಉತ್ತರ ಕರ್ನಾಟಕ ರಂಗ ಕಲೆಗಳ ತವರೂರು. ಇವತ್ತಿನ ಟಿ.ವಿ ಮತ್ತು ಸಿನೆಮಾ ಅಲೆಗಳ ನಡುವೆಯೂ ರಂಗಭೂಮಿ ತನ್ನತನವನ್ನು ಉಳಿಸಿಕೊಂಡು ಬಂದಿದೆ. ಒಳ್ಳೆಯ ನಾಟಕ ಒಳ್ಳೆಯ ತಂಡ ಇದ್ದರೆ ಹಳ್ಳಿ ಹಾಗೂ ಪಟ್ಟಣಗಳೆರಡರಲ್ಲೂ ನಾಟಕ ಯಶಸ್ವಿಯಾಗುತ್ತದೆ. ನನ್ನ ''ದೇವಿ ಮಹಾತ್ಮೆ'' ನಾಟಕವೇ ಇದಕ್ಕೊಂದು ಉತ್ತಮ ಉದಾಹರಣೆ. ಪ್ರೇಕ್ಷಕರ ಹೃದಯವನ್ನು ನಾಟಕಗಳು ತಟ್ಟುವಂತಿರಬೇಕು.

**ಪ್ರ** : ಕರ್ನಾಟಕದಲ್ಲಿ ನಡೆದುಹೋದ ಚಳುವಳಿಗಳು ತಮ್ಮ ಬರವಣಿಗೆಗೆ ತಾಕಲಿಲ್ಲವೇ ?

**ಧು** : ರಾತ್ರಿ ಇಡೀ ನಾಟಕವಾಡಿ ದಿನವಿಡೀ ನಿದ್ರಿಸುವ ನಮಗೆ ಸಮಾಜದ ಆಗುಹೋಗುಗಳು ಗಮನಕ್ಕೆ ಬರುವುದು ಕಡಿಮೆ.

**ಹನುಮಂತಪ್ಪ ಎನ್. ಅಂಡಗಿ**
ಚಿಲವಾಡಗಿ ತಾಲ್ಲೂಕು, ಕೊಪ್ಪಳ ಜಿಲ್ಲೆ - ೫೮೩ ೨೩೦

# ಸಿಂಧುಭೈರವಿ - ಕಿರಿಯ ಸ್ಯಾಕ್ಸೊಫೋನ್ ಕಲಾವಿದೆ

ಮಂಗಳೂರಿನಲ್ಲಿ ನಡೆದ ಒಂದು ಮದುವೆಯ ಸಮಾರಂಭ. ಅಲ್ಲಿ ಮಂಗಳ ವಾದ್ಯವಾಗಿ ಮೊಳಗಿದುದು ಪರಂಪರೆಯ ನಾದಸ್ವರವಲ್ಲ, ಆಧುನಿಕ ಬ್ಯಾಂಡ್‌ಸೆಟ್ಟೂ ಅಲ್ಲ. ಬದಲು ಸ್ಯಾಕ್ಸೊಫೋನ್. ಪಾಶ್ಚಾತ್ಯ ಮೂಲದ ದಪ್ಪ ದನಿಯ ಈ ನಳಿಕಾ ವಾದ್ಯವನ್ನು ಕರ್ನಾಟಕ ಸಂಗೀತಕ್ಕೆ ಒಗ್ಗಿಸಿ ಬಳಸುವ ಪ್ರಯತ್ನ ಪ್ರಾಯಶಃ ದಕ್ಷಿಣ ಕನ್ನಡದ ಜಿಲ್ಲೆಗಳಲ್ಲಿ ಯಶಸ್ವಿಯಾಗಿ ನಡೆಯುತ್ತಿದೆ ಎನ್ನಬಹುದು. ಶ್ರೀ ಕದ್ರಿ ಗೋಪಾಲನಾಥರಂಥ ಸ್ಯಾಕ್ಸೊಫೋನ್ ಕಲಾವಿದರು ಈ ವಾದ್ಯದ ಖ್ಯಾತಿಯನ್ನು ದಕ್ಷಿಣದ ಎಲ್ಲ ಕಡೆ ಹಬ್ಬಿಸಿದ್ದಾರೆ ಎಂಬುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಅಂದು ಮದುವೆಯ ಹಾಲಿನಲ್ಲಿ ತನ್ನ ತಂದೆಯ ಸಮಕ್ಕೆ ಕುಳಿತು ಸ್ಯಾಕ್ಸೊಫೋನ್ ನುಡಿಸಿ ಅಲ್ಲಿ ನೆರೆದಿದ್ದವರ ಗಮನ ಸೆಳೆದವಳು ಇನ್ನೂ ಹದಿಮೂರರ ಬಾಲಕಿ ಸಿಂಧುಭೈರವಿ. ಪದ್ಮಾಸನ ಹಾಕಿ ಕುಳಿತರೆ ಆಕೆಗಿಂತ ವಾದ್ಯ ಎತ್ತರವಾಗಿ ನುಡಿಸಲು ತೊಡಕಾಗುತ್ತದೆ. ಆ ಕಾರಣದಿಂದ ಒಂದು ಕಾಲನ್ನು ಹಿಂದಕ್ಕೆ ಮಡಚಿ ಹಿಮ್ಮಡಿಯ ಮೇಲೆ ಕುಳಿತೇ ನುಡಿಸುವ ಹಟ. ಆ ವಾದ್ಯದ ಭಾರ ಎತ್ತಲೂ ಶಕ್ತಿ ಸಾಲದಷ್ಟು ತೆಳ್ಳಗಿನ ಹುಡುಗಿ.



ದಕ್ಷಿಣ ಭಾರತದಲ್ಲಿ ಅಲ್ಲಲ್ಲಿ ನಾದಸ್ವರ ವಾದಕಿಯರಿದ್ದಾರೆ. ಡೋಲು ಬಾರಿಸುವ ಮಹಿಳೆಯರಿದ್ದಾರೆ. ಆದರೆ ಸ್ಯಾಕ್ಸೊಫೋನ್ ವಾದಕಿಯರಿಲ್ಲ. ಆ ದೃಷ್ಟಿಯಿಂದ ಈಕೆ ಅತ್ಯಂತ ಕಿರಿಯ ಸ್ಯಾಕ್ಸೊಫೋನ್ ವಾದಕಿ.

ಮದುವೆಯ ಮತ್ತೊಂದು ವಿಶೇಷವೆಂದರೆ ವರ ಕನ್ನಡಿಗ, ಮಹಾರಾಷ್ಟ್ರದ ವಧು. ಪುಣೆಯಿಂದ ಬಂದಿದ್ದ ಎರಡು ಮೂರು ಮಂದಿ ಹಿರಿಯರು, ಜೋಡಿ ಸ್ಯಾಕ್ಸೊಫೋನ್ ಕಚೇರಿಯನ್ನು ಕೇಳಿ ತಲೆದೂಗಿದರು. ಅವರು ಜೀವಮಾನದಲ್ಲಿ ಎಂದೂ ಕರ್ನಾಟಕ ಸಂಗೀತ ಕಚೇರಿಗೆ ಹೋದವರಲ್ಲ, ಕರ್ನಾಟಕ ಸಂಗೀತ ಶೈಲಿಗೆ ಅಳವಡಿಸಿದ ಸ್ಯಾಕ್ಸೊಫೋನ್ ವಾದನ ಕೇಳಿದವರಲ್ಲ. ಅಂದು, ಕಚೇರಿ ಮುಗಿದ ಕೂಡಲೇ ಆ ಹಿರಿಯರು ಬಂದು ''ಶಹಬ್ಬಾಸ್ ಮಗು! ಅದ್ಭುತವಾಗಿತ್ತು! ನಮಗಂತೂ ಸಂತೋಷವಾಗಿದೆ. ನಿನಗೆ ಒಳ್ಳೆಯದಾಗಲಿ'' ಎಂದು ಆ ಪುಟ್ಟ ವಾದಕಿಯನ್ನು ಮನಸಾರ ಹರಸಿ, ಅಭಿನಂದಿಸಿದರು. ಸಂಗೀತಕ್ಕೆ ಭಾಷೆಯ ಬೇಲಿಯಿಲ್ಲ ಎಂಬುದಕ್ಕೆ ಅವರ ನಡುವಳಿಕೆಯೇ ಸಾಕ್ಷಿಯಾಗಿತ್ತು.

*''ಹೊಸತು''ವಿನ ಫೆಬ್ರವರಿ ಸಂಚಿಕೆಯಲ್ಲಿ ಶ್ರೀ ಚನ್ನವೀರ ಕಣವಿಯರ ಛಾಯಾಚಿತ್ರ ಪ್ರಕಟವಾಗಿದ್ದಿತು. ಅದನ್ನು ಒದಗಿಸಿಕೊಟ್ಟ ಕಲಾವಿದರು ಡಾ|| ಎಚ್. ಚಂದ್ರಶೇಖರ, ಅವರು. ಫೆಬ್ರವರಿ ಸಂಚಿಕೆಯಲ್ಲಿ ಅದನ್ನು ನಮೂದಿಸದೆ ಬಿಟ್ಟದ್ದಕ್ಕಾಗಿ ವಿಷಾದಿಸುತ್ತೇವೆ. ಕಳೆದ ಸಂಚಿಕೆಗಳಲ್ಲಿ ಹಾಗೂ ಈ ಸಂಚಿಕೆಯಲ್ಲಿ ಅನುವಾದಿತ ಲೇಖನಗಳು ಕೆಲವನ್ನು ಪ್ರಕಟಿಸಲಾಗಿವೆ. ಅವು ಬೇರೆಲ್ಲೋ ಪ್ರಕಟವಾಗಿರುವ ಇಂಗ್ಲಿಷ್ ಲೇಖನಗಳ ಅನುವಾದಗಳಲ್ಲವೆಂಬುದನ್ನು ಗಮನಿಸಬೇಕಾಗಿ ವಿನಂತಿ. ಅವು ಆಯಾ ಲೇಖಕರು ''ಹೊಸತು''ವಿಗಾಗಿಯೇ ಬರೆದು ಕೊಟ್ಟ ಲೇಖನಗಳು.*

*ಕ್ಲಿಂಟನ್ ಬಂದುಹೋದ ಮೇಲೆ ಯುಗಾದಿ ಬರುತ್ತದೆ. ಅದು ನಮಗೆಲ್ಲಾ ಸಂಭ್ರಮ, ಸಂತಸ ತರಲೆಂದು ಆಶಿಸೋಣ.*

ಸಿಂಧುಭೈರವಿ ತನ್ನ ತಂದೆ ಪುತ್ತೂರು ಮಚೇಂದ್ರನಾಥರ ಜೊತೆಯಲ್ಲಿ ಈಗಾಗಲೇ ಹಲವು ಕಡೆ ಸ್ಯಾಕ್ಸೊಫೋನ್ ವಾದನದಲ್ಲಿ ಭಾಗವಹಿಸುತ್ತ ಬಂದಿದ್ದಾಳೆ. ಮಚೇಂದ್ರನಾಥರು ತಂಜಾವೂರಿನಲ್ಲಿ ಸಂಗೀತ ವಿದ್ಯೆ ಕಲಿತು ಬಂದಿರುವ ಸ್ಯಾಕ್ಸೊಫೋನ್ ಕಲಾವಿದ. ತಾಯಿ ಸುಶೀಲ. ಸಿಂಧುಭೈರವಿ ಮಚೇಂದ್ರನಾಥರಿಗೆ ಅತ್ಯಂತ ಪ್ರಿಯವಾದ ರಾಗ. ಮೊದಲನೇ ಹೆಣ್ಣು ಮಗು ಹುಟ್ಟಿದಾಗ ಅದಕ್ಕೆ ಆ ರಾಗದ ಹೆಸರೇ ಇಟ್ಟರು. ಚಿಕ್ಕಂದಿನಿಂದ ಸಂಗೀತ ಕೇಳುತ್ತ ಬೆಳೆದ ಮಗುವಿಗೆ ಆರು ವರ್ಷವಾಗಿದ್ದಾಗಲೇ ವಾದ್ಯದೊಂದಿಗಿನ ಸರಸ ಪ್ರಾರಂಭವಾಯಿತು. ತಂದೆ ಹೊರಡಿಸುವಂಥದೇ ಸ್ವರ ಹೊರಡಿಸುವ ಹಂಬಲ. ಅದು ಮಗುವಿನ ಆಳವೂ ಆಗಿತ್ತು, ರಾಗದ ಬೆನ್ನು ಹತ್ತುವ ಹಟವೂ ಆಗಿತ್ತು. ಅದರಿಂದ ತಂದೆಗೆ ಬೇಸರವಾಗಲಿಲ್ಲ, ಬೆರಗಾಯಿತು. ಆ ಭಾರದ ವಾದ್ಯ ಇರಿಸಿಕೊಂಡು ಸರಾಗವಾಗಿ ಕಲಿಯಲು ಅನುಕೂಲವಾಗುವಂತೆ ಏರ್ಪಾಟು ಮಾಡಿದರು. ಸುಮಾರು ಹತ್ತರ ಪ್ರಾಯದ ವೇಳೆಗೆ ಒಂದೊಂದೇ ರಾಗ ನುಡಿಸಲು ಕಲಿತಳು.

ಈ ಬಾಲ ಕಲಾವಿದೆ ಸಿಂಧುಭೈರವಿ ಮಂಗಳೂರಿನ ಇನ್‌ಫೆಂಟ್ ಜೀಸಸ್ ಶಾಲೆಯಲ್ಲಿ ಎಂಟನೇ ತರಗತಿಯ ವಿದ್ಯಾರ್ಥಿನಿ. ಮುಂಜಾನೆ ನಾಲ್ಕೂವರೆಗೆ ಎದ್ದು ತಂದೆಯ ಜೊತೆಯಲ್ಲಿ ಸಾಧನೆ ಪ್ರಾರಂಭಿಸುತ್ತಾಳೆ. ಅನಂತರ, ಗುರು ಶ್ರೀನಿವಾಸ ಮರಾಠೆಯವರಲ್ಲಿ ಹಾಡುಗಾರಿಕೆ ಪಾಠ ಹೇಳಿಸಿಕೊಳ್ಳುತ್ತಾಳೆ. ಮತ್ತೆ ಶಾಲೆಯ ಪಾಠಗಳ ಸಿದ್ಧತೆ. ದಿನದ ಹೆಚ್ಚಿನ ವೇಳೆ ಸಂಗೀತಕ್ಕೆ ಮೀಸಲಾದರೂ ಶಾಲೆಯ ಓದಿನಲ್ಲೇನೂ ಹಿಂದಿಲ್ಲ. ಈಕೆಯ ತಮ್ಮ ಲಕ್ಷ್ಮಿ ಚರಣ್. ಆತನಿಗೆ ಸಂಗೀತದಲ್ಲಿ ಹೆಚ್ಚು ಆಸಕ್ತಿಯಿಲ್ಲ. ಹಾಡು ಗಾರಿಕೆಯಲ್ಲಿ ಅಥವಾ ಸ್ಯಾಕ್ಸೊಫೋನ್ ವಾದನದಲ್ಲಿ ಮಿಂಚುವ ಅವಕಾಶವನ್ನು ಸಂಪೂರ್ಣವಾಗಿ ತನ್ನ ಅಕ್ಕನಿಗೇ ಬಿಟ್ಟುಕೊಟ್ಟಿದ್ದಾನೆ. ತಾನು ಚಿತ್ರ ರಚನೆಯಲ್ಲಿ ಆಸಕ್ತಿ ಬೆಳೆಸಿಕೊಂಡಿದ್ದಾನೆ.

ಸ್ಯಾಕ್ಸೊಫೋನ್ ವಾದನಕ್ಕೆ ಶ್ವಾಸವನ್ನು ದುಡಿಸಿಕೊಳ್ಳುವ ಕಷ್ಟಕರ ಸಾಧನೆ ಮಾಡಬೇಕಾಗುತ್ತದೆ. ಇದು ಗಂಡಸರಿಂದ ಮಾತ್ರ ಸಾಧ್ಯ ಎಂದು ಪೂರ್ವಗ್ರಹದ ತೀರ್ಮಾನವನ್ನು ಸುಳ್ಳು ಮಾಡುವಂತೆ, ಸಿಂಧುಭೈರವಿ ಅತ್ಯಂತ ಲಾಘವವಾಗಿ ಸ್ಯಾಕ್ಸೊಫೋನ್ ಮನೆಗಳ ಮೇಲೆ ಬೆರಳಾಡಿಸುತ್ತ ನಾದದ ವಾತಾವರಣ ಸೃಷ್ಟಿಸುತ್ತಾಳೆ. ಈಕೆ ಸಂಪೂರ್ಣ ಕಲಾವಿದೆಯಾಗಿ ಬೆಳೆಯುವ ಎಲ್ಲ ಸಾಧ್ಯತೆಗಳೂ ಇವೆ.

**- ಕೆ. ಪಿ. ಸ್ವಾಮಿ**

# ಯೋಗ ಪ್ರವೇಶ-೯

ಜಿ. ರಾಮಕೃಷ್ಣ

ಸಿದ್ಧಾಸನದ ಅಭ್ಯಾಸದಲ್ಲಿ ತೊಡಗಿದವರು ತಲೆಯನ್ನು ಹೇಗಿಟ್ಟುಕೊಳ್ಳಬೇಕೆಂಬುದರ ಬಗ್ಗೆ ಶಾಸ್ತ್ರಗ್ರಂಥಗಳಲ್ಲಿ ಖಚಿತವಾದ ಸೂಚನೆಗಳಿವೆ. ಅದು ಮೂಲತಃ ಸಿದ್ಧಾಸನವನ್ನೇ ಪ್ರಮುಖವನ್ನಾಗಿಸಿದಾಗಿನ ಸ್ಥಿತಿ. ಆದರೆ ಆ ಆಸನವನ್ನು ಬೇರೊಂದು ಅಭ್ಯಾಸದ ಅಂಗವಾಗಿ ಮಾಡಿಕೊಂಡಾಗ ಶಾಸ್ತ್ರ ಸೂಚಿತ ನಿರ್ದೇಶನವನ್ನು ಸ್ವಲ್ಪ ಬದಲಿಸಿಕೊಳ್ಳಬೇಕು. ಹಠಯೋಗ ಪ್ರದೀಪಿಕೆಯ ಅನುಸಾರ ತಲೆಯನ್ನು ಎದೆಯ ಮೇಲಕ್ಕೆ ಬಗ್ಗಿಸುವುದು ಅವಶ್ಯಕ (ಹೃದಯೇ ಕೃತ್ವಾ ಹನುಂ ಸುಸ್ಥಿರಮ್॥ ೧.೩೫). ಗಲ್ಲವು ಹೃದಯದಿಂದ ನಾಲ್ಕು ಅಂಗುಲ ಮೇಲಕ್ಕಿರುವಂತೆ ತಲೆಯನ್ನು ಎದೆಯ ಮೇಲೆ ಆನಿಸಿ ಎರಡು ಹುಬ್ಬುಗಳ ಮಧ್ಯಕ್ಕೆ ದೃಷ್ಟಿಯನ್ನು ಕೇಂದ್ರೀಕರಿಸಬೇಕೆಂಬ ಸೂಚನೆಯೂ ಇದೆ. ಅಂದರೆ, ಸ್ವತಂತ್ರವಾಗಿ ಸಿದ್ಧಾಸನವನ್ನೇ ಅಭ್ಯಾಸ ಮಾಡುವಾಗ ಅನುಸರಿಸಬೇಕಾದ ವಿಧಾನ ಇದು. ಆ ಆಸನದಲ್ಲಿ ಕುಳಿತು ಉಜ್ಜಾಯೀ ಅಭ್ಯಾಸ ಮಾಡಬೇಕಾದರೆ ತಲೆಯನ್ನು ಬಗ್ಗಿಸುವುದಕ್ಕಿಂತ ನೆಟ್ಟಗಿರಿಸಿಕೊಳ್ಳುವುದು ಉತ್ತಮ.

ಸಿದ್ಧಾಸನವನ್ನು ಮಾಡುವುದು ಹೇಗೆ? ಇಲ್ಲಿ ಕೊಟ್ಟಿರುವ ಚಿತ್ರ ನೋಡಿ. ಅದು ಮೊದಲ ಭಾಗ. ಕುಳಿತು ಎರಡು ಕಾಲುಗಳನ್ನೂ ಚಾಚಿಕೊಳ್ಳಿ. ಎಡಗಾಲನ್ನು ಮಂಡಿಯ ಬಳಿ ಮಡಿಚಿ ಹಿಮ್ಮಡಿಯನ್ನು ಉಪಸ್ಥ ಎಂಬ ಭಾಗಕ್ಕೆ ಅದುಮಿ ಹಿಡಿಯಬೇಕು. 'ಉಪಸ್ಥ' ಎಂದರೆ ಜನನೇಂದ್ರಿಯ ಎಂಬ ಅರ್ಥವೂ ಇದೆ (ಇನ್ನೊಂದರ್ಥ 'ತೊಡೆ' ಎಂದು). ಈ ಭಾಗಕ್ಕೆ ಆಂಗ್ಲ ಭಾಷೆಯಲ್ಲಿ 'ಪೆರಿನಿಯಂ' ಎನ್ನುತ್ತಾರೆ. ಮಹಿಳೆಯರಿಗೆ ಇದು ಸುಲಭವಾಗುವಷ್ಟು ಪುರುಷರಿಗೆ ಆಗುವುದಿಲ್ಲ. ಪುರುಷರು ಇಂದ್ರಿಯವನ್ನು ಎತ್ತಿ ಅದರ ಕೆಳಭಾಗಕ್ಕೆ ಹಿಮ್ಮಡಿ ಬರುವಂತೆ ಮಾಡಬೇಕು. ಇಲ್ಲವಾದರೆ ಆಸನದಲ್ಲಿ ಸೌಖ್ಯವಿರುವುದಿಲ್ಲ. ಮಡಿಸಿರುವ ಕಾಲಿನ ಪಾದವು ಬಲಗಾಲಿನ ತೊಡೆಗೆ ಆತುಕೊಂಡಿರುತ್ತದೆ. ಹಿಮ್ಮಡಿಯ ಮೇಲೆ ಕುಳಿತಂತೆ ಆಗಬಾರದು. 'ಪೆರಿನಿಯಂ'ನ ಎರಡು ಕಡೆಗೂ ಇರುವ ಮೂಳೆಗಳ ಸ್ಪರ್ಶವು ಹಿಮ್ಮಡಿಗೆ ಆಗುವಂತಿರಬೇಕು. ಈಗ ಬಲಗಾಲನ್ನು ಮಡಿಸಿ ಹಿಮ್ಮಡಿಯು ಇಂದ್ರಿಯದ ಮೇಲಕ್ಕಿರುವ ಮೂಳೆ ಗಳಿಗೆ ಆತುಕೊಂಡಿರುವಂತೆ ಅಮುಕಿ ಹಿಡಿಯಬೇಕು. ಬಲಗಾಲಿನ ಪಾದವು ಎಡತೊಡೆಯನ್ನು ಸವರಿಕೊಂಡಂತೆ ಇರುತ್ತದೆ.

ಜನನೇಂದ್ರಿಯಕ್ಕೆ ನೋವಾಗುವಂತಿರಬಾರದು; ಯಾವುದೇ ಭಾಗದ ಮೇಲೂ ಒತ್ತಡವಿರಕೂಡದು. ಈ ಸ್ಥಿತಿಯಲ್ಲಿ ಕುಳಿತು ಗಲ್ಲವನ್ನು ಎದೆಯ ಮೇಲೆ ಬರುವಂತೆ ಬಗ್ಗಿ ಸ್ಥಿರವಾಗಿದ್ದರೆ ಅದು ಸಿದ್ಧಾಸನವೆನಿಸಿಕೊಳ್ಳುತ್ತದೆ. ಕೈಗಳನ್ನು ಮಂಡಿಯ ಮೇಲೆ ಇಟ್ಟುಕೊಳ್ಳಬಹುದು. ಹುಬ್ಬುಗಳ ಮಧ್ಯೆ ದೃಷ್ಟಿ ಕೇಂದ್ರೀಕರಿಸಿದರೆ ಧ್ಯಾನದ ಒಂದು ಹೆಜ್ಜೆ ಇಟ್ಟಂತೆ. (ಹಠ ಪ್ರದೀಪಿಕೆಯ ಪ್ರಕಾರ ಮೋಕ್ಷದ ಬಾಗಿಲು ತೆರೆಯಲು ಇದು ಸಾಧನ. ಏತನ್ಮೋಕ್ಷಕಪಾಟಭೇದಜನಕಮ್). ಸಿದ್ಧಾಸನದಲ್ಲಿದ್ದು ಕೇವಲ ಕುಂಭಕ ಮಾಡಿದರೆ (ಹಾಗೆಂದರೇನೆಂದು ಮುಂದೆ ನೋಡೋಣ) ಅದರ ಮುಂದೆ ಇನ್ನೇನಿದೆ, ಎನ್ನುತ್ತದೆ ಹಠ ಪ್ರದೀಪಿಕೆ (ಕಿಮನ್ಯೈರ್ಬಹುಭಿಃ ಪೀಠೈಃ ಸಿದ್ಧೇ ಸಿದ್ಧಾಸನೇ ಸತಿ। ಪ್ರಾಣಾನಿಲೇ ಸಾವಧಾನೋ ಬದ್ಧೇ ಕೇವಲ ಕುಂಭಕೇ॥ ೧.೪೧). ಈ ಆಸನದಿಂದ ಲೈಂಗಿಕ ಶಕ್ತಿ ಕುಗ್ಗುತ್ತದೆಯೆಂದು ಕೆಲವು ಗ್ರಂಥಗಳಲ್ಲಿ ಹೇಳಿದೆ. (ಆದ್ದರಿಂದಲೇ ಸಿದ್ಧರಿಗೆ ಇದು ಆಸನವಿರಬಹುದೇ?) ಆದರೆ ಪ್ರಯೋಗಾತ್ಮಕ ಅಧ್ಯಯನದಿಂದ ಅಂಥದೇನೂ ಸಾಬೀತಾಗಿಲ್ಲವೆಂದು ಸ್ವಾಮಿ ಕುವಲಯಾನಂದರು ಹೇಳಿದ್ದಾರೆ.

ಯಾವ ವಿಶೇಷ ಪ್ರಯತ್ನವೂ ಇಲ್ಲದೆ ಈ ಆಸನದಲ್ಲಿ ಒಂದು ಸ್ಥಿರತೆ ಏರ್ಪಡುತ್ತದೆ. ಬೆನ್ನುಹುರಿಯನ್ನು ನೆಟ್ಟಗೆ ಇರಿಸಲು ಅಂತಹ ದೊಡ್ಡ ಪ್ರಯತ್ನ ಅಗತ್ಯವಿಲ್ಲದಿರುವುದು



ಈ ಆಸನವನ್ನು ಪ್ರಾಣಾಯಾಮದ ಅಭ್ಯಾಸಕ್ಕೆ ಆಯ್ಕೆ ಮಾಡಿಕೊಳ್ಳಲು ಒಂದು ಕಾರಣ. ಹಿಂದೆ ನಾವು ಹೆಸರಿಸಿದ 'ಉಜ್ಜಾಯೀ' ಪ್ರಾಣಾಯಾಮದ ಅಭ್ಯಾಸಕ್ಕೆ ಇದು ಹಿತಕರವಾದ ಆಸನ. ಹಠ ಪ್ರದೀಪಿಕೆಯು ವಿವರಿಸುವ ಎಂಟು ವಿಧಧ ಪ್ರಾಣಾಯಾಮಗಳಲ್ಲಿ ಇದೂ ಒಂದು.

ಶ್ವಾಸನಾಳದ ಮೇಲ್ಭಾಗದಲ್ಲಿ, ಧ್ವನಿ ತಂತುಗಳ ಮಧ್ಯದಲ್ಲಿ ಒಂದು ದ್ವಾರವಿದೆ. ಧ್ವನಿ ತಂತುಗಳ ಸಂಕೋಚನ ಹಾಗೂ ವಿಸರಣಗಳಿಂದ ಧ್ವನಿಯನ್ನು ಹೆಚ್ಚು - ಕಡಿಮೆ ಮಾಡಲು ಈ ದ್ವಾರದ ಉಪಯೋಗ ವಾಗುತ್ತದೆ. ಇದನ್ನು ಇಂಗ್ಲಿಷ್‌ನಲ್ಲಿ 'ಗ್ಲಾಟಿಸ್' ಎನ್ನುತ್ತಾರೆ. ಗ್ಲಾಟಿಸ್ ಅನ್ನು ಭಾಗಶಃ ಮುಚ್ಚಿ ಉಸಿರಾಡಿದರೆ ಒಂದು ಶಬ್ದ ಕೇಳಿಬರುತ್ತಿರುತ್ತದೆ. ಈ ಶಬ್ದದಿಂದಾಗಿ ಇದಕ್ಕೆ 'ಉಜ್ಜಾಯೀ' ಎಂಬ ಹೆಸರಿದೆ. ಹಾಗೆ ಉಸಿರಾಡುವ ಅಭ್ಯಾಸ ಮಾಡಿ. (ಶಬ್ದವೆಂದರೆ ಮಾತನಾಡಿದಾಗ ಕೇಳುವಂತಹ ಶಬ್ದವಲ್ಲ, ಗಟ್ಟಿಯಾಗಿ ಉಸಿರಾಡಿದಾಗ ಕೇಳುವ ಶಬ್ದ).

ಉಜ್ಜಾಯೀ ಅಭ್ಯಾಸಕ್ಕೆ ಇನ್ನೊಂದು ಸಿದ್ಧತೆ ಬೇಕು. ಸಿದ್ಧಾಸನದಲ್ಲಿ ಕೂತು ಕಿಬ್ಬೊಟ್ಟೆಯನ್ನು ಒಳಕ್ಕೆ ಎಳೆದುಕೊಳ್ಳುವ ಪ್ರಯತ್ನ ಮಾಡಿ. ಹೊಟ್ಟೆಯನ್ನು ಎಳೆದುಕೊಳ್ಳಬಾರದು ಅಥವಾ ಉಬ್ಬಿಸಬಾರದು. ಕಿಬ್ಬೊಟ್ಟೆಯನ್ನು ಒಳಕ್ಕೆ ಎಳೆದುಕೊಂಡರೆ ಹೊಟ್ಟೆಯ ಚಲನೆಯೂ ಇದ್ದಂತೆ ತೋರುತ್ತದೆ; ಆದರೆ ಮೂಲತಃ ಅದಕ್ಕೆ ಕಿಬ್ಬೊಟ್ಟೆಯ ಚಲನೆಯೇ ಕಾರಣ. ಹಾಗೆ ಮಾಡಿದಾಗ ವಪೆಯು ಶ್ವಾಸಕೋಶವನ್ನು ಸವಿರಾಗಿ ನೀವುತ್ತದೆಯಲ್ಲದೆ ಅಧಿಕ ಪ್ರಮಾಣದಲ್ಲಿ ಶ್ವಾಸವು ಹೊರಹೋಗುವಂತೆ ದೂಡುತ್ತದೆ. ಶ್ವಾಸಕೋಶದಲ್ಲಿ ಉಳಿಯುವ ಗಾಳಿ ಅತಿ ಕಡಿಮೆ ಮಟ್ಟಕ್ಕೆ ಬರುತ್ತದೆ. ಆದ್ದರಿಂದ ಶ್ವಾಸವನ್ನು ಒಳಕ್ಕೆ ತೆಗೆದುಕೊಂಡಾಗ ಅಧಿಕ ಪ್ರಮಾಣದ ಗಾಳಿಯ ಸೇವನೆ ಸಾಧ್ಯ. ಹಾಗೆ ಒಳತೆಗೆದುಕೊಳ್ಳುವಾಗ ಕಿಬ್ಬೊಟ್ಟೆಯು ಯಥಾಸ್ಥಿತಿಯಲ್ಲಿರುತ್ತದೆ ಮತ್ತು ಹೊಟ್ಟೆಯು ಉಬ್ಬಿದಂತಾಗುತ್ತದೆ. ಕಿಬ್ಬೊಟ್ಟೆಯನ್ನು ಒಳಕ್ಕೆ ಎಳೆದುಕೊಳ್ಳುವುದು ಮೊದಲಿಗೆ ಸಾಧ್ಯವಾಗದಿದ್ದಲ್ಲಿ ಒಂದು ಬೆರಳಿನಿಂದ ಅದನ್ನು ಒಳಕ್ಕೆ ತಳ್ಳುವಂತೆ ಮಾಡುತ್ತಾ ಉಸಿರನ್ನು ನಿಧಾನವಾಗಿ ಬಿಡಿ. ಕ್ರಮೇಣ ಸ್ವಯಂ ತಾನೇ ಹಿಂದಕ್ಕೆ ಮುಂದಕ್ಕೆ ಬರಲು ಕಿಬ್ಬೊಟ್ಟೆಯು ಸಮರ್ಥವಾಗುತ್ತದೆ.

ಸಿದ್ಧಾಸನದಲ್ಲಿ ಕುಳಿತು ನಿಧಾನವಾಗಿ ಉಚ್ಛ್ವಾಸ - ನಿಶ್ವಾಸವನ್ನು ಮಾಡಿ. ಎಷ್ಟು ಗಾಳಿ ಒಳಕ್ಕೆ ತೆಗೆದುಕೊಳ್ಳಬಹುದೋ ಅಷ್ಟನ್ನೂ ತೆಗೆದುಕೊಳ್ಳಿ; ಎಷ್ಟನ್ನು ಹೊರಹಾಕಬಹುದೋ ಅಷ್ಟನ್ನು ಹೊರಹಾಕಿ. ಕಿಬ್ಬೊಟ್ಟೆಯನ್ನು ಒಳಕ್ಕೆ ಸೆಳೆದುಕೊಂಡು ಈ ಪ್ರಮಾಣವನ್ನು ಹೆಚ್ಚಿಸಿ. (ಆದರೆ ಇದಾವುದರಿಂದಲೂ ಉಸಿರು ಕಟ್ಟಿಕೊಳ್ಳುವಷ್ಟು ಅಥವಾ ಅವಸರದಿಂದ ಉಸಿರು ತೆಗೆದುಕೊಳ್ಳಬೇಕೆನಿಸುವಷ್ಟು ಪ್ರಮಾಣವನ್ನು ಮುಟ್ಟಬಾರದು). ಆಸನವು 'ಸ್ಥಿರ-ಸುಖ' ಇರಬೇಕಾದಂತೆ ಉಸಿರಾಟವು 'ಸ್ಥಿರ-ಸುಖ' ಎನಿಸಬೇಕು. ಹೀಗೆ ಉಸಿರಾಡುವಾಗ ಗ್ಲಾಟಿಸ್‌ನ್ನು ಭಾಗಶಃ ಮುಚ್ಚಿಕೊಂಡು ಉಸಿರಾಟದ ವೇಳೆ ನಿಮಗೆ ಮಾತ್ರವೇ ಕೇಳಿಸಬಹುದಾದಷ್ಟು ಅಥವಾ ಅದಕ್ಕಿಂತ ಸ್ವಲ್ಪ ಜಾಸ್ತಿ ಶಬ್ದ ಬರಿಸಿ. ಆ ಉಸಿರಾಟ ಮತ್ತು ಶಬ್ದದ ಮೇಲೆ ಗಮನವನ್ನು ಕೇಂದ್ರೀಕರಿಸಿ.

ಎರಡನೆಯ ಹಂತದಲ್ಲಿ ಉಚ್ಛ್ವಾಸಕ್ಕಿಂತಲೂ ನಿಶ್ವಾಸವು ಸುಮಾರು ಎರಡುಪಟ್ಟು ದೀರ್ಘವಾಗಿರುವಂತೆ ನಿಧಾನವಾಗಿ ಶ್ವಾಸವನ್ನು ಹೊರಕ್ಕೆ ಬಿಡಿ. ಆಗಲೂ ಅವಸರದಿಂದ ಉಸಿರು ಬಿಟ್ಟು, ಬೇಗ ಉಸಿರು ಒಳಕ್ಕೆ ತೆಗೆದುಕೊಳ್ಳಬೇಕೆನಿಸುವ ಮಟ್ಟಕ್ಕೆ ಹೋಗಬಾರದು. ಬಹುಶಃ ಆರಂಭಕ್ಕೆ ಹತ್ತು ಸೆಕೆಂಡುಗಳ ಉಚ್ಛ್ವಾಸ, ಇಪ್ಪತ್ತು ಸೆಕೆಂಡುಗಳ ನಿಶ್ವಾಸ ಉತ್ತಮ ಪ್ರಮಾಣವೆನಿಸುತ್ತದೆ. ಅದನ್ನು ಕ್ರಮೇಣ ಹೆಚ್ಚಿಸುತ್ತಾ ೨೦:೪೦ರ ಪ್ರಮಾಣವನ್ನು ಮುಟ್ಟಲು ಅಡ್ಡಿಯಿಲ್ಲ. ಒಮ್ಮೆಗೆ ೫-೬ ನಿಮಿಷಗಳ ಅಭ್ಯಾಸ ಸಾಕು. ಸ್ವಲ್ಪ ಹೊತ್ತು ಬಿಟ್ಟು ಮತ್ತೆ ೩-೪ ನಿಮಿಷಗಳ ಅಭ್ಯಾಸ ಮಾಡಬಹುದು. ಉಜ್ಜಾಯೀ ಬಗ್ಗೆ ಹಠ ಪ್ರದೀಪಿಕೆಯ ಮಾತುಗಳನ್ನು ಮನನ ಮಾಡಿ. ಅದರ ಪೂರ್ಣಾರ್ಥವನ್ನು ಮುಂದಿನ ಬಾರಿ ವಿವರಿಸಲಾಗುತ್ತದೆ:

*ಮುಖಂ ಸಂಯಮ್ಯ ನಾಡೀಭ್ಯಾಂ ಆಕೃಷ್ಯ ಪವನಂ ಶನೈಃ।*
*ಯಥಾ ಲಗತಿ ಕಂಠಾತ್ತು ಹೃದಯಾವಧಿ ಸಸ್ವನಮ್।*
*ಪೂರ್ವವತ್ ಕುಂಭಯೇತ್ ಪ್ರಾಣಂ ರೇಚಯೇತ್ ಇಡಯಾ ತತಃ॥*
*ಶ್ಲೇಷ್ಮದೋಷಹರಂ ಕಂಠೇ ದೇಹಾನಲ ವಿವರ್ಧನಮ್।*
*ನಾಡೀಜಲೋದರಾಧಾತುಗತ ದೋಷವಿನಾಶನಮ್।*
*ಗಚ್ಛತಾ ತಿಷ್ಠತಾ ಕಾರ್ಯಂ ಉಜ್ಜಾಯ್ಯಾಖ್ಯಂ ತು ಕುಂಭಕಮ್॥*

(೨.೫೧-೫೩)

# ಭವಿಷ್ಯತ್ತು ಮತ್ತು ಭಾವನೆ

ಭವಿಷ್ಯತ್ತು ಸ್ಪಷ್ಟವಾಗಿ ಯಾರಿಗೂ ಕಾಣಿಸುವುದಿಲ್ಲ, ಆದರೂ ಅದರ ಬಗ್ಗೆ ಊಹೆ, ಆಲೋಚನೆಗಳು ನಡೆದೇ ಇರುತ್ತವೆ. ಈ ಆಲೋಚನೆಗಳಲ್ಲಿ ಆಶಾ ಭಾವನೆ, ನಿರಾಶಾಭಾವನೆ ಎರಡೂ ಇರುತ್ತವೆ. ೨೦೦೦ ಇಸ್ವಿಯಲ್ಲಿ ಮೂರು ಸೊನ್ನೆಗಳು ಬಂದಿರುವುದರಿಂದ ತಾವು ಮಾಡುವ ಕೆಲಸದ ಪರಿಣಾಮವೆಲ್ಲ ಸೊನ್ನೆಯಾಗುತ್ತದೆ, ತಮಗೆ ಒಳ್ಳೆಯದಾಗುವುದಿಲ್ಲ ಎಂದು ಕೆಲವರು ಯೋಚಿಸಿದರೆ ೯೯ರಲ್ಲಿಯೇ ಕೇಡೆಲ್ಲ ಕಳೆದು, ಪ್ರಳಯ ತಪ್ಪಿ ಉಳಿದ ನಮಗೆ ಇನ್ನು ಮುಂದೆ ಆಗುವುದೆಲ್ಲ ಒಳ್ಳೆಯದೇ ಎಂಬ ಭಾವನೆ ಕೆಲವರದು. ಕಳೆದ ಶತಮಾನದಲ್ಲಿಯೂ ಅನೇಕ ತರಹದ ಊಹೆಗಳನ್ನು ಸಾಮಾನ್ಯ ಜನರು, ಸಿದ್ಧಾಂತಿಗಳು ಮಾಡತೊಡಗಿದ್ದರು. ಐಸಾಕ್ ಅಸಿಮೊವ್, ಕಾರ್ಲ್ ಸಗಾನ್, ಆರ್ಥರ್ ಕ್ಲಾರ್ಕ್ ಮುಂತಾದ ಪ್ರಸಿದ್ಧ ಸಿದ್ಧಾಂತಿಗಳೆಲ್ಲ ತಮ್ಮ ವೈಜ್ಞಾನಿಕ ವಿಚಾರಧಾರೆಯನ್ನು ಹರಿಸಿದ್ದರು. ರೇ ಬ್ರಾಡ್- ಬರಿಯಂಥ ಲೇಖಕರು 'ಮೂರನೇ ಜಾಗತಿಕ ಯುದ್ಧವಾಗಿ ಜಗತ್ತೆಲ್ಲ ಮರುಭೂಮಿಯಾಗುವುದು' ಎಂದಿದ್ದರು. ಅನೇಕ ಬಗೆಯ ಸ್ಫೋಟಕಗಳನ್ನು ಕಂಡುಹಿಡಿಯುವಿಕೆ, ಚಂದ್ರ ಮತ್ತು ಮಂಗಳನತ್ತ ಮಾನವನ ಪಯಣ, ಯಂತ್ರ ಮಾನವನ ಶೋಧ ಇಂಥವುಗಳಿಂದ ಮಾನವ ಕುಲಕ್ಕೆ ವಿನಾಶವುಂಟಾಗುವುದೆಂದು ಅನೇಕರು ಭಾವಿಸಿದ್ದರು.

ಹಾಗೇ ನೋಡಿದರೆ ವಿಜ್ಞಾನವೆಂಬುದು ಆಶಾಭಾವನೆಯನ್ನು ಹೊತ್ತ ಭವಿಷ್ಯತ್ತು. ವಿಜ್ಞಾನದಿಂದ ಕೆಟ್ಟದ್ದಕ್ಕಿಂತ ಒಳ್ಳೆಯದೇ ಹೆಚ್ಚಿಗೆ ಆಗಿದೆ. ಹಗಲಿರುಳು ಪ್ರಯೋಗಾಲಯಗಳಲ್ಲಿ ದುಡಿವ ವಿಜ್ಞಾನಿಗಳಿಗೆ ಇರುವುದೇನು? ಭವಿಷ್ಯತ್ತಿನ ಬಗ್ಗೆ ಆಶಾಭಾವನೆ. ಆ ಆಶಾಭಾವನೆಯಿಂದಲೇ ಇಂದು ನಾವು ಅನೇಕ ಸಂಶೋಧನೆಗಳ ಪ್ರಯೋಜನ ಪಡೆಯಲು ಸಾಧ್ಯವಾಗಿದೆ, ಅನೇಕ ರೋಗರುಜಿನಗಳ ವಿರುದ್ಧ ಸೆಣೆಸಲು ಸಾಧ್ಯವಾಗಿದೆ. ಜನಸಂಖ್ಯಾ ಸ್ಫೋಟದಿಂದ ಈ ಭೂಮಿ ತತ್ತರಿಸುತ್ತಿರುವಾಗಲೂ ಆಹಾರವನ್ನು ಕಂಡುಕೊಳ್ಳಲು ವಿಜ್ಞಾನ ಸಹಾಯ ಮಾಡಿದೆ.

ವಿಜ್ಞಾನಿಗಳು ಅಜ್ಞಾತರಾಗಿದ್ದು ಪ್ರಯೋಗಾಲಯಗಳಲ್ಲಿ ಊಟ ನಿದ್ದೆಯ ಪರಿವೆಯಿಲ್ಲದೆ ಹಗಲಿರುಳು ಕೆಲಸ ಮಾಡುತ್ತಾರೆ. ಅವರು ಅಂದುಕೊಂಡದ್ದನ್ನು ಕಂಡುಹಿಡಿಯಲು ಸಾಧ್ಯವಾದ ನಂತರವೇ ಜಗತ್ತಿಗೆಲ್ಲ ಅವರ ಸಂಶೋಧನೆಯ ಬಗ್ಗೆ ತಿಳಿಯುವುದು. ಜನರೆಲ್ಲ ಅದೇನೋ ಮಾಂತ್ರಿಕವಾಗಿ ಆದದ್ದು ಎಂಬಂತೆ ಪತ್ರಿಕೆಗಳಲ್ಲಿ ಓದುತ್ತಾರೆ; ಕ್ಷಣ ಹುಬ್ಬೇರಿಸುತ್ತಾರೆ; ನಂತರ ಮರೆತುಬಿಡುತ್ತಾರೆ. ಅದನ್ನು ಸಂಶೋಧಿಸುವಲ್ಲಿ ಆ ವಿಜ್ಞಾನಿಗೆ ಆದ ತೊಂದರೆ, ಅವನ ಪರಿಶ್ರಮ ನಮಗೆ ಕಾಣಿಸುವುದಿಲ್ಲ.

ಯಶಸ್ಸನ್ನು ಗಳಿಸಿದಾಗ ವಿಜ್ಞಾನಿಗೆ ಹಣ, ಕೀರ್ತಿ ಸ್ವಲ್ಪ ಮಟ್ಟಿಗಾದರೂ ಬರುತ್ತವೆ. ಆದರೆ ಒಂದು ವೇಳೆ ಅವನು ತಿಳಿದಂತೆ ನಡೆಯದೆಹೋಗಿ ಅವನ ಪ್ರಯೋಗವು ನಿರರ್ಥಕವಾದರೆ ಆ ವಿಜ್ಞಾನಿ ಅನಾಮಧೇಯನಾಗಿ ಯಾವ ಕೀರ್ತಿಯೂ ಇಲ್ಲದೆ ಸಾಯುತ್ತಾನೆ. ಇಂತಹ ಪರಿಸ್ಥಿತಿಯಿದ್ದಾಗಲೂ ವಿಜ್ಞಾನಿಗೆ ಇರುವ ಒಂದೇ ಗುಣವೆಂದರೆ ಭವಿಷ್ಯತ್ತಿನಲ್ಲಿ ನಂಬಿಕೆ ಮತ್ತು ಆಶಾಭಾವನೆ. ಪೋಲೆಂಡ್‌ನ ಖ್ಯಾತ ವಿಜ್ಞಾನಿ ಬ್ರೊನೊವ್‌ಸ್ಕಿ ಹೇಳುತ್ತಾರೆ: ''ವಿಜ್ಞಾನ ಎಂಬುದು ಪ್ರಯೋಗ, ವಿಜ್ಞಾನ ಎಂಬುದು ಪ್ರಯತ್ನ: ನಮಗೆ ಸಾಧ್ಯವಾಗುತ್ತದೆ ಎನಿಸಿದ್ದನ್ನು ಅತ್ಯಂತ ಜಾಣತನದಿಂದ ವ್ಯವಸ್ಥಿತವಾಗಿ ಮಾಡಲು ಪ್ರಯತ್ನಿಸುವುದು. ಒಂದು ವೇಳೆ ನಾವಂದುಕೊಂಡಂತೆ ಆಗದಿದ್ದರೂ, ಆದದ್ದನ್ನೇ ಒಪ್ಪಿಕೊಳ್ಳುವುದು''. ಭವಿಷ್ಯತ್ತಿನ ಬಗ್ಗೆ ವಿಜ್ಞಾನಿ ಗಳಿಗಿರುವ ಆಶಾಭಾವನೆಯನ್ನು ಕಂಡು ಜನಸಾಮಾನ್ಯರಾದ ನಾವು ಏನೂ ಮಾಡದೆ ನಿರಾಶಾಭಾವನೆ ಹೊಂದುವುದಕ್ಕಿಂತ ಭವಿಷ್ಯತ್ತಿನ ಬಗ್ಗೆ ಆಶಾಭಾವನೆ ಹೊಂದಿ ನಮ್ಮ ಕರ್ತವ್ಯಗಳಲ್ಲಿ ತೊಡಗಬೇಕು.

**ಡಾ|| ವಿಜಯಕುಮಾರ ಕಮ್ಮಾರ**
ನಂ. ೨೯೪೬, ಎ. ಪಿ. ಎಂ. ಸಿ. ಯಾರ್ಡ್ ಬಳಿ,
ಶಿಗ್ಗಾಂವ್ -೫೮೧೨೦೫

# ಅರ್ಥ - ಅನರ್ಥ

ಅರ್ಥ ಎಂಬ ಪದಕ್ಕೆ ಎರಡು ಅರ್ಥಗಳಿವೆ. ಒಂದು ಹಣ ಅಥವಾ ದ್ರವ್ಯ; ಇನ್ನೊಂದು ಶಬ್ದದ ಸಾರ ಅಥವಾ ತಿರುಳು ಅಥವಾ ಭಾವ ಎಂದು. ಸಣ್ಣ ಮೀನನ್ನು ದೊಡ್ಡ ಮೀನು, ಅದನ್ನು ಇನ್ನೂ ದೊಡ್ಡ ಮೀನು ನುಂಗುವ ಅರ್ಥಶಾಸ್ತ್ರದ ಬಂಡವಾಳಶಾಹಿ ಅನುಭವದಲ್ಲಿ ಮುಳುಗಿ ನಾವೆಲ್ಲ ಉಸಿರುಗಟ್ಟಿದ್ದೇವೆ. ನಮಗೆ ಕಲಿಸಲಾಗುತ್ತಿರುವ ಅರ್ಥಶಾಸ್ತ್ರವು ಲಾಭತತ್ವದ ಮೇಲೆ ನಿಂತಿರುವ ಬಂಡವಾಳಶಾಹಿ ಅರ್ಥಶಾಸ್ತ್ರ ಅಷ್ಟೆ. ತೃಪ್ತಿ ತತ್ವದ ಮೇಲೆ ನಿಂತಿರುವ ಸಮಾಜವಾದಿ ಅರ್ಥಶಾಸ್ತ್ರವನ್ನು ಅರ್ಥವತ್ತಾಗಿ ಹೊಸ ಶತಮಾನದಲ್ಲಾದರೂ ನಾವೆಲ್ಲ ರೂಢಿಸಿಕೊಳ್ಳಬೇಕು. ಆಗ ಅರ್ಥದ ಹಪಾಹಪಿ ವಾಸಿಯಾಗಿ ಆರೋಗ್ಯಪೂರ್ಣ ಸಾಮಾಜಿಕ ಸಂಸ್ಕೃತಿ ನಿರ್ಮಾಣವಾದೀತು. ಅರ್ಥದ ಬೆನ್ನೇರಿ ಅನರ್ಥದ ಕಮರಿಗಳಿಗೆ ಬೀಳುವುದು ತಪ್ಪೀತು.

ಅರ್ಥದ ಇನ್ನೊಂದು ಅರ್ಥ ಶಬ್ದದ ಭಾವ, ಅದರ ಹೂರಣ ಎಂದು. ಶಬ್ದದ ಅರ್ಥ ಶಬ್ದಕೋಶದಲ್ಲಿ ಸಿಕ್ಕೇಬಿಡುತ್ತದೆ ಎಂಬ ಗ್ಯಾರಂಟಿ ಇಲ್ಲ. ಕೆಲವು ಶಬ್ದಗಳು ತಪ್ಪಿಸಿಕೊಂಡು ಬಿಡುತ್ತವೆ. ಇನ್ನೂ ಕೆಲವು, ಕೋಶದಲ್ಲಿ ಕೊಟ್ಟಿರುವ ಅರ್ಥಕ್ಕಿಂತ ಭಿನ್ನವಾದ, ವ್ಯತಿರಿಕ್ತವಾದ ಅರ್ಥವನ್ನು ಹಚ್ಚಿಕೊಂಡು ಕುಣಿಯುತ್ತವೆ. ಶಬ್ದಗಳು ಮಹಾ ಕಿಲಾಡಿಗಳು.

'ಹಿಂದ್ ಸ್ವರಾಜ್ಯ' ಪುಸ್ತಕದಲ್ಲಿ ಗಾಂಧಿಯವರು 'ನಾಗರಿಕತೆ' ಎಂಬ ಶಬ್ದದ ಬಗ್ಗೆ ಹೀಗೆಲ್ಲ ಬರೆದಿದ್ದಾರೆ : ''ನಾಗರಿಕತೆಯ ಮಾಯಾಜಾಲದಿಂದ ರಾಷ್ಟ್ರವನ್ನು ಬಿಡಿಸಲು ಹಲವಾರು ಸಂಸ್ಥೆಗಳು ಸ್ಥಾಪನೆಯಾಗಿವೆ. ಇಂಗ್ಲಿಷ್ ಲೇಖಕನೊಬ್ಬ 'ನಾಗರಿಕತೆ - ಅದರ ಕಾರಣ ಮತ್ತು ಪರಿಣಾಮ' ಎಂಬ ಪುಸ್ತಕ ಬರೆದಿದ್ದಾನೆ. ಅದರಲ್ಲಿ ನಾಗರಿಕತೆ ಒಂದು ರೋಗ ಎಂದು ತೋರಿಸಿದ್ದಾನೆ..... ಈ ನಾಗರಿಕತೆಯಲ್ಲಿ ಬದುಕುವ ಜನರಿಗೆ ಶರೀರ ಸುಖವೇ ಬಾಳಿನ ಗುರಿ..... ನಾಗರಿಕತೆ ಇಂಗ್ಲಿಷ್ ಜನಾಂಗವನ್ನು ಗೆದ್ದಲು ಹುಳದಂತೆ ತಿಂದುಹಾಕುತ್ತದೆ. ಇದು ವಿನಾಶಕಾರಿ. ಇದನ್ನು ಬಹಿಷ್ಕರಿಸಬೇಕು.'' ಇನ್ನೂ ಮುಂದುವರೆದು ಗಾಂಧಿಯವರು ನಾಗರಿಕತೆಯ ಪ್ರತಿಪಾದಕರನ್ನೂ ತರಾಟೆಗೆ ತೆಗೆದುಕೊಂಡಿದ್ದಾರೆ: ''ಸಾಮಾನ್ಯವಾಗಿ ನಾವು ಓದುವುದೆಲ್ಲ ಈ ನಾಗರಿಕತೆಯ ಸಮರ್ಥಕರ ಗ್ರಂಥಗಳೇ... ಮಾಟದ ಹಾಗೆ ಅವರ ಗ್ರಂಥಗಳು ನಮ್ಮನ್ನು ಮುಗ್ಧಗೊಳಿಸುತ್ತವೆ. ಹೀಗಾಗಿ ನಾವು ಒಬ್ಬೊಬ್ಬರಾಗಿ ಆ ಸುಳಿಯಲ್ಲಿ ಸಿಕ್ಕಿಕೊಳ್ಳುತ್ತೇವೆ... ಮೊದಲು ಎಲ್ಲೋ ಕೆಲವರು ಉದ್‌ಗ್ರಂಥಗಳನ್ನು ಬರೆಯುತ್ತಿದ್ದರು. ಈಗೇನು ಯಾರು ಬೇಕಾದರೂ ಬರೆದು ಜನರ ಮನಸ್ಸನ್ನು ಕೆಡಿಸಬಹುದು... ಇವರು ನೀತಿಯ ಸೋಗಿನಲ್ಲಿ ಕಲಿಸುವುದೆಲ್ಲ ಅನೀತಿಯೇ.. ಈ ನಾಗರಿಕತೆ ತನ್ನ ಬೆಂಕಿಗೆ ತಾನೇ ಸುಟ್ಟು ಬೂದಿಯಾಗುತ್ತದೆ,'' ಆಧುನಿಕ ಪ್ರವಾದಿಯೂ, ಮಹಾನ್ ಕಾಲಜ್ಞಾನಿಯೂ ಆದ ಗಾಂಧಿಯವರ ಈ ಮಾತುಗಳು ಎಂದಿಗಿಂತ ಇಂದು ಹೆಚ್ಚು ಅರ್ಥವತ್ತಾಗಿ ಕೇಳಿಸುತ್ತಿವೆ.

ಟೋಪಿಯನ್ನು ಸಮವಸ್ತ್ರದಂತೆ ಹಾಕಿಕೊಳ್ಳುತ್ತಿದ್ದ ಪಕ್ಷಗಳೆಲ್ಲ ತಾವೇ ಟೋಪಿ ಹಾಕಿಕೊಳ್ಳುವುದನ್ನು ಬಿಟ್ಟು ಇತರರಿಗೆ 'ಟೋಪಿ ಹಾಕು' ಎಂಬ ಹೊಸ ನುಡಿಗಟ್ಟು ಕೊಟ್ಟಿವೆ. ಸಿನೆಮಾ ಸಂಸ್ಕೃತಿ 'ರೀಲು ಬಿಡು' ಎಂದು ಹೇಳುತ್ತಿದೆ. ರೈಲ್ವೆ ಉದ್ಯಮ ''ರೈಲು ಬಿಡು''ವುದನ್ನು ಕಲಿಸಿದೆ; ಹಳಿ ತಪ್ಪುವ ವಿವಿಧ ತಂತ್ರಗಳನ್ನು ಕಲಿಸಿದೆ. ಸದಾ ಪ್ರಯಾಣಿಸುವ ಹುಚ್ಚು 'ಟಿಕೆಟ್ ತೊಗೊ' ಎಂದು ಸಾವಿಗೆ ಸದಾ ಸನ್ನದ್ಧಗೊಳಿಸುತ್ತಿವೆ. ಹೊಸ ಹೊಸ ಅರ್ಥದ ನುಡಿಗಟ್ಟುಗಳು ನಮ್ಮ ಸಮಾಜದ ಅನರ್ಥಗಳಿಗೆ ಕನ್ನಡಿ ಹಿಡಿಯುತ್ತಿವೆ. ಅಲ್ಲದೆ ಆಧುನಿಕ ಬದುಕಿನ ಪ್ರವಾಹ ಎತ್ತ ಸಾಗುತ್ತಿದೆ ಎಂಬುದನ್ನೂ ಸೂಚಿಸುತ್ತಿವೆ. ಹೊಸ ಶತಮಾನವು ಅರ್ಥದ ಸಾರ್ಥಕತೆ ಕಡೆಗೆ ಮುಖ ಮಾಡೀತೆ ?

**ಬಿದರಹಳ್ಳಿ ನರಸಿಂಹಮೂರ್ತಿ**
ಅನಿಮಿಷ, ಕನಕದಾಸ ರಸ್ತೆ, ದುರ್ಗಿಗುಡಿ ಬಡಾವಣೆ,
ಹೊನ್ನಾಳಿ - ೫೭೭೨೧೭



Registered with the Registrar of News Papers for India under No.11308/99. Postal REGISTERED CPMG/KA/BG-7/2000

